ಸುರೇಂದ್ರನ ಸ್ನೇಹವಾದ ಮೇಲೆ, ವಿವಾಹವಾಗಿ ಸುಖದಿಂದಿರಬೇಕೆಂಬ ಹಂಬಲ ಅವಳಲ್ಲಿ ಮೂಡಿತು. ಆದರೆ ವರ್ಗದ ಪಿಶಾಚಿ ಬೆನ್ನಟ್ಟಿ ಬಂತು. ಕಾಯಿಲೆಯ ತಂದೆಯನ್ನು ಬಿಟ್ಟು ಬೆಂಗಳೂರಿಗೆ ಹೋಗಲಾರದೆ, ವರ್ಗವನ್ನು ನಿಲ್ಲಿಸಲು ಸಹಾಯ ಮಾಡಬೇಕೆಂದು ಪ್ರೊಫೆಸರ್ ಕಪನೀಪತಿರಾಯರಲ್ಲಿ ಮೊರೆ ಹೋದಳು. ಆ ಕಾಮದ ಪಶುವಿನ ಗುಹೆ ಹೊಕ್ಕ ಈ ಹೆಣ್ಣು ಜಾರಿ ಹಳ್ಳಕ್ಕೆ ಬಿದ್ದಳು.

ವಿಧಿಯಿಲ್ಲದೆ ಆತನನ್ನೇ ಅವಳು ಮದುವೆಯಾಗಬೇಕಾಯಿತು. ಆದರೆ ಆ ರಾಕ್ಷಸನೊಡನೆ ಬಾಳಲಾರದೆ ಬೇಸತ್ತು, ಸತ್ತ ಮಗುವಿನ ತಾಯಿಯಾಗಿ ಲೀಲಾವತಿ ಈ ಲೋಕವನ್ನು ತ್ಯಜಿಸಿದಳು. ತನಗಾಗಿ ಸರ್ವಸ್ವವನ್ನೂ ತ್ಯಾಗ ಮಾಡಿದ್ದ ಮಗಳನ್ನು ಕಳೆದುಕೊಂಡ ಆ ತಂದೆ ತಾವೂ ಕಣ್ಣು ಮುಚ್ಚಿದರು.

ಮಿಸ್ ಲೀಲಾವತಿ, 'ಮಿಸ್ ಲೀಲಾವತಿ'ಯಾಗಿಯೇ ಉಳಿಯಲಿಲ್ಲ!

# ಲೇಖಕನ ಮಾತು

'ಮಿಸ್ ಲೀಲಾವತಿ' ನಡೆದ ಕಥೆಯಂತೆ ಕಾಣುವ ಒಂದು ಕಾಲ್ಪನಿಕ ಕಾದಂಬರಿ. ಸ್ತ್ರೀ ವಿದ್ಯಾಭ್ಯಾಸವು ಹೆಚ್ಚುತ್ತಿರುವ ಈ ಕಾಲದಲ್ಲಿ ಲೀಲಾವತಿಯಂತಹ ವ್ಯಕ್ತಿಗಳು ಸಿಗುವುದು ದುರ್ಲಭವಲ್ಲ. ಆದರೆ ಲೀಲಾವತಿಯ ಆಚಾರವಿಚಾರ, ಆಸೆ ಆಕಾಂಕ್ಷೆಗಳು ನಮ್ಮ ಹೆಣ್ಣುಮಕ್ಕಳಿಗೆ ಎಷ್ಟು ಮಟ್ಟಿಗೆ ಆದರ್ಶಪ್ರಾಯವೆನ್ನುವುದು ವಿಚಾರಾರ್ಹವಾದ ಅಂಶ. ಹೆಣ್ಣು ಇಂದು ಎಲ್ಲ ರಂಗಗಳಲ್ಲಿ ಗಂಡಿನೊಡನೆ ಸ್ಪರ್ಧೆಗೆ ನಿಂತಿದ್ದಾಳೆ. ಸುಭದ್ರವಾದ ಸಮಾಜ ಜೀವನದಲ್ಲಿ ತನ್ನ ಪಾತ್ರವೇನೆಂಬುದನ್ನು ಅರಿತಿದ್ದಾಳೆ. ಅವಳಿಂದು ಅಬಲೆಯಲ್ಲ. ಗಂಡಿನ ಕರ್ಮಯಜ್ಞಕ್ಕೆ ಆಹುತಿಯಾಗುವ ಬರಿಯ ಪಶುವೂ ಅಲ್ಲ; ಸಂಸಾರದ ನೊಗಕ್ಕೆ ಹೆಗಲು ಕೊಟ್ಟು ಅಲ್ಲೇ ತನ್ನ ಇಹಪರಗಳೆರಡನ್ನೂ ಸಾಧಿಸ ಬಯಸುವ ಸತೀಮಣಿಯೂ ಅಲ್ಲ. ಅವಳು ಗಂಡಿನಂತೆಯೇ ಸುಖದುಃಖಗಳಲ್ಲಿ ಹಿಗ್ಗಿ ಕುಗ್ಗುವ ವ್ಯಕ್ತಿ. ಅವಳಲ್ಲಿ ವಿಚಾರಕ್ರಾಂತಿ ನಡೆದಿದೆ. ಸಂಸಾರದಲ್ಲಿ, ಸಮಾಜ ಜೀವನದಲ್ಲಿ ತನ್ನ ಪಾತ್ರವೇನೆಂಬ ಅರಿವು ಉಂಟಾಗಿದೆ. ತನ್ನ ವ್ಯಕ್ತಿತ್ವ ಆಸೆ ಆಕಾಂಕ್ಷೆಗಳನ್ನು ಬಲಿಗೊಟ್ಟ 'ಗೃಹಿಣಿ' ಯಾಗುವುದಕ್ಕಿಂತಲೂ ಅವಿವಾಹಿತೆಯಾಗಿ ಉಳಿಯುವುದೇ ಲೇಸೆಂಬ ಸ್ಥಿತಿಗೆ ಬಂದಿದ್ದಾಳೆ. ಇಷ್ಟೆಲ್ಲ ಪ್ರಗತಿ (?) ಅವಳಿಗೆ ಹೆಚ್ಚು ಕಾಲ ವಿದ್ಯಾರ್ಜನೆ ಮಾಡಲವಕಾಶ ದೊರೆತಿರುವುದರಿಂದ ಉಂಟಾಗಿದೆ. ಈ ಬಗೆಯ ಪ್ರಗತಿಯಿಂದ ಸಮಾಜಕ್ಕೆ ಎಷ್ಟು ಪ್ರಯೋಜನವೆನ್ನುವುದನ್ನು ಆಲೋಚಿಸಬೇಕಾಗಿದೆ. ಮನೆಮನೆಯ ಮಹಾ ಸತಿಯಾಗಿ, ಮಹಾ ತಾಯಿಯಾಗಿ, ಮಹಾ ಲಕ್ಷ್ಮಿಯಾಗಿ ಬೆಳಗಬಲ್ಲ ದಿವ್ಯ ಚೇತನ ಇಂದು ಕೋರ್ಟು ಕಛೇರಿ, ಶಾಲಾಗಿರಣಿಗಳಲ್ಲಿ ಹಿಡಿಕೂಲಿಗಾಗಿ ತನ್ನ ದಿವ್ಯ ಶಕ್ತಿಯನ್ನು ವ್ಯಯಮಾಡಿದರೆ ಇದರಿಂದ ರಾಷ್ಟ್ರದ ಹಿತಸಾಧಿತವಾಯಿತೆ ? ಎನ್ನುವ ಪ್ರಶ್ನೆ ವಿಚಾರವಂತರನ್ನು ಕಾಡುತ್ತಿದೆ. ಈ ಕಾದಂಬರಿಯಲ್ಲಿ ಬರುವ ಲೀಲಾವತಿ ಸುಮಿತ್ರೆಯರು ಈ ಸಮಸ್ಯೆಯ ಪ್ರತೀಕವಾಗಿದ್ದಾರೆ. ವಿವಾಹ ಪದ್ಧತಿಯ ಬಗ್ಗೆ ತಿರಸ್ಕಾರ ಹೊಂದಿದ್ದ ಲೀಲಾವತಿ ಗಂಡಿನ ಸಂಪರ್ಕವಿಲ್ಲದೆ ಕಡೆ ತನಕ

ಅವಿವಾಹಿತೆಯಾಗಿ ಉಳಿಯಲು ಬಯಸುತ್ತಾಳೆ. ಆದರೆ ಅದಕ್ಕೆ ಬೇಕಾಗುವ ಸಂಯಮ ಅವಳಲ್ಲಿ ಇಲ್ಲ. "ಸಂಯಮ? ಯಾರಿಗೆ ಬೇಕು ಸಂಯಮ? ಹಸಿವಾದರೆ ಉಣುವಂತೆ, ನೀರಡಿಕೆಯಾದರೆ ಜಲಪಾನಮಾಡುವಂತೆ ಅಷ್ಟೇ ಸಹಜವಾಗಿ ಕಾಮದ ಕರೆಗೂ ಓಗೊಡುತ್ತೇನೆ. ಇದು ಪಾಪವೂ ಅಲ್ಲ, ಪುಣ್ಯವೂ ಅಲ್ಲ—ಕೇವಲ ವಯೋಧರ್ಮ" ಎಂದು ಘೋಷಿಸುವ ಲೀಲಾವತಿ ಸ್ವೈರವೃತ್ತಿಗೆ ಇಂಬುಗೊಡುವ ವಿಚಾರಮಂಥನ ನಡಸುತ್ತಾಳೆ. ಇದನ್ನ ಜೀವನದಲ್ಲಿ ಅನುಷ್ಠಾನಕ್ಕೆ ತರಲೆತ್ನಿಸಿದಾಗಲೇ ಅವಳ ಪತನ! ಇದೊಂದು ಮುಖದ ಚಿತ್ರ. "ಹೆಣ್ಣು ಎಷ್ಟೇ ವಿದ್ಯಾವತಿಯಾಗಿರಲಿ, ಆಧುನಿಕಳಿರಲಿ, ಅವಳು ಹೆಣ್ಣಾಗಿ ಹುಟ್ಟಿದ ಮೇಲೆ ಹೆಣ್ಣಿನಂತೆ ಬಾಳಬೇಕಾದ್ದು ಅವಳ ಧರ್ಮ. ಹೆಣ್ತನದ ಸಾರ್ಥಕ್ಯವೆಂದರೆ ಕಾಮದ ಬೊಂಬೆಯಾದ ಹೆಣ್ಣು ತಾಯ್ತನದ ಪುಣ್ಯ ತೀರ್ಥದಲ್ಲಿ ಮಿಂದು ತಾಯಿಯಾಗುವುದು. ಇದೇ ಅವಳಿಗೆ ಪರಮೋತ್ಕೃಷ್ಟ ಪದವಿ" ಎಂದು ತಿಳಿದ ಸುಮಿತ್ರೆ ಆದರ್ಶ ಗೃಹಿಣಿಯಾಗಿ ಬಾಳುತ್ತಾಳೆ. ಇದು ಇನ್ನೊಂದು ಮುಖದ ಚಿತ್ರ. ಇವುಗಳಲ್ಲಿ ಯಾವುದು ಅನುಕರಣೀಯವೆನ್ನುವುದನ್ನು ಓದುಗರೇ ನಿರ್ಣಯಿಸಬೇಕು. ತಾಯಿತನ ಒಂದು ಹೊರೆ, ಸಂಸಾರ ಒಂದು ಸೆರೆ ಕಾಮಪ್ರೇಮಗಳಿಗೆ ನಿತ್ಯ ಜೀವನದಲ್ಲಿ ಬೆಲೆ ಇಲ್ಲವೆಂದು ತಿಳಿದ ಸಮಾಜ ಕೆಳಮಟ್ಟಕ್ಕೆ ಇಳಿಯುವುದರಲ್ಲಿ ಸಂದೇಹವಿಲ್ಲ. ಓದುಗರು ಈ ಬಗ್ಗೆ ವಿಚಾರಮಂಥನ ನಡಸಬೇಕು.

ಈ ಕಾದಂಬರಿಯನ್ನು ಬೆಳಕಿಗೆ ತರಲು ಕಾರಣರಾದ ಗೆಳೆಯ ರಾ. ವೆಂ. ಶ್ರೀ ಅವರಿಗೂ, ಹಸ್ತಪ್ರತಿಯನ್ನು ಮುದ್ದಾಗಿ ಬರೆದುಕೊಟ್ಟ ಗೆಳೆಯ ವೇಣುಗೋಪಾಲ್ ಅವರಿಗೂ ಅಷ್ಟೇ ಮುದ್ದಾಗಿ ಅಚ್ಚುಮಾಡಿದ ಶ್ರೀ ಜಿ. ಎಚ್. ರಾಮರಾಯರಿಗೂ ಈ ಕಾದಂಬರಿಯನ್ನು ತಮ್ಮ ಮಾಲೆಯಲ್ಲಿ ಸೇರಿಸಿಕೊಂಡು ಪ್ರೋತ್ಸಾಹ ಕೊಟ್ಟ ವಿದ್ಯಾನಿಧಿ ಪ್ರಕಾಶನದವರಿಗೂ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

೧೦–೩–೫೪. ಇತಿ,
ಬೆಂಗಳೂರು ಶ್ರೀನಿವಾಸರಾವ್ ಕೊರಟ

೧

ಬೃಂದಾವನದ ದೀಪೋತ್ಸವವನ್ನು ನೋಡುವ ಸಲುವಾಗಿ ಮೂವರು ಗೆಳತಿಯರು ಕೃಷ್ಣರಾಜಸಾಗರಕ್ಕೆ ಬಂದಿದ್ದರು. ಅವರ ಪೈಕಿ ಇಬ್ಬರು ಮೆಡಿಕಲ್ ಕಾಲೇಜಿನ ಕಡೆಯ ವರ್ಷದ ವಿದ್ಯಾರ್ಥಿನಿಯರು. ಉಳಿದವಳು ಮಹಾರಾಣಿ ಕಾಲೇಜಿನ ಇಂಗ್ಲಿಷ್ ಅಧ್ಯಾಪಕಿ. ಮೂವರಿಗೂ ಕಾಲೇಜಿನ ಪರೀಕ್ಷೆಗಳ ಗೊಂದಲವೆಲ್ಲ ಮುಗಿದು ಬೇಸಿಗೆ ರಜ ಬಂದಿತ್ತು. ಲೀಲಾವತಿಗೆ ಸುಮಿತ್ರೆ ಹಂಸರಿಗಿಂತ ಮೊದಲೇ ರಜ ಬಂದಿದ್ದರೂ ಗೆಳತಿಯರಿಗಾಗಿ ಅವಳು ಮೈಸೂರಿನಲ್ಲಿಯೇ ನಿಂತಿದ್ದಳು. ಅವಳ ಆಸೆ ಎಂದರೆ ಪರೀಕ್ಷೆ ಮುಗಿಯೊಡನೆ ಹಕ್ಕಿಗಳಂತೆ ಚೆದರಲಿರುವ ಗೆಳತಿಯರೊಂದಿಗೆ ನಾಲ್ಕು ಕ್ಷಣ ಸಂತೋಷವಾಗಿ ನಲಿಯಬೇಕೆಂಬುದೇ ಆಗಿತ್ತು. ಅವಳ ಬಲವಂತಕ್ಕೆ ಕಟ್ಟು ಬಿದ್ದು ಇಂದು ಉಳಿದ ಗೆಳತಿಯರು ಬೃಂದಾವನಕ್ಕೆ ಬಂದಿದ್ದರು. ಇಂದಿನ ಎಲ್ಲ ಏರ್ಪಾಡೂ ಲೀಲಾವತಿಯದೇ ಆಗಿತ್ತು. ಅವಳು ಪೂರ್ವ ಭಾವಿಯಾಗಿ ಹಾಸ್ಟೆಲಿನ ಅಡಿಗೆಯವರಿಗೆ ಹೇಳಿ ಸೊಗಸಾದ ಹುಳಿ ಅನ್ನ ಮೊಸರನ್ನ, ಬೋಂಡ ತಯಾರಿಸಿಕೊಂಡು ತಂದಿದ್ದಳು. ಗೆಳತಿಯರು ಬೆಳಗಿನ ರೈಲಿನಲ್ಲಿ ಬೃಂದಾವನಕ್ಕೆ ಬಂದು, ಹೊತ್ತು ನೆತ್ತಿಗೇರುವ ತನಕ ಅಲೆ ದಾಡಿ ಅನಂತರ, ಸೊಂಪಾಗಿ ಬೆಳೆದಿದ್ದ ಸಾಲವೃಕ್ಷದ ನೆರಳನ್ನು ಆಶ್ರಯಿಸಿ ಅದರಡಿಯ ಹಸುರು ಹುಲ್ಲುಗಂಬಳಿಯ ಮೇಲೆ ಕೆಲಕಾಲ ದಣಿವಾರಿಸಿ ಕೊಂಡು, ಜತೆಯಲ್ಲಿ ತಂದಿದ್ದ ಫಲಾಹಾರಕ್ಕೆ ಕೈಹಾಕಿದರು. ಹಸಿದ ಹೊಟ್ಟೆಗೆ ರುಚಿಯಾದ ಫಲಾಹಾರ ಸ್ವರ್ಗೀಯವಾಗಿತ್ತು. ಮೊದಲೇ ದಣಿ ದಿದ್ದ ಗೆಳತಿಯರು ಅತಿಯಾದ ಫಲಾಹಾರ ಸೇವನೆಯಿಂದ ಮತ್ತಷ್ಟು ದಣಿ ದರು. ಹೊಟ್ಟೆಯ ಚುರುಕು ಕಡಿಮೆಯಾದಂತೆ, ಮಾತಿನ ಚುರುಕು ಏರಿತು. ಮಾತಿನ ಮಧ್ಯೆ ಲೀಲಾವತಿ ಹಂಸಳನ್ನು ಕೇಳಿದಳು.

" ಹಂಸ, ಮುಂದೆ ನೀನೇನು ಮಾಡಬೇಕೆಂದಿರುವೆ? "

" ಮದುವೆ " ಹಂಸ ಉತ್ತರಿಸುವುದಕ್ಕಿಂತ ಮೊದಲೇ ಸುಮಿತ್ರೆ ಅವಳ ಪರವಾಗಿ ಉತ್ತರ ಕೊಟ್ಟಳು.

" ಆಫ್ ಕೋರ್ಸ್........ಅದು ಯಾರಿಗೆ ತಪ್ಪಿದೆ? ಎಲ್ಲರೂ ಒಂದಲ್ಲ ಒಂದು ದಿನ ಮದುವೆಯಾಗಲೇಬೇಕು. " ಎಂದಳು ಹಂಸ.

" ನಿನಗೆ ಮದುವೆ ಕಡ್ಡಾಯವೆನಿಸಿದ ಮಾತ್ರಕ್ಕೆ ಎಲ್ಲರಿಗೂ ಅದು ಕಡ್ಡಾಯವೆನ್ನಲು ಬಂದೀತೆ ? " ಎಂದಳು ಲೀಲಾವತಿ.

ಈ ಮಾತನ್ನು ಅಷ್ಟಾಗಿ ಗಮನಕ್ಕೆ ತೆಗೆದುಕೊಳ್ಳದೆ ಹಂಸ ಪ್ರಶ್ನಿಸಿದಳು:

" ಹೋಗಲಿ. ನಿನ್ನ ವಿಷಯ ಹೇಳು ? "

" ನನಗೆ ಮದುವೆಯ ಅಗತ್ಯ ಕಂಡಿಲ್ಲ. ಹೀಗಾಗಿ ನಾನು ಮದುವೆಯಾಗುವುದಿಲ್ಲ. "

" ಹಾಗಾದರೆ ನೀನು ಕಡೆ ತನಕ ಹೀಗೆಯೇ ಮಿಸ್ ಲೀಲಾವತಿಯಾಗಿ ಇರುತ್ತೀಯಾ ? "

" ಮಿಸ್ ಲೀಲಾವತಿಯಾಗಿ ಇರುವುದರಲ್ಲಿಯೇ ನನಗೆ ಹೆಚ್ಚಿನ ಸಂತೋಷವಿದೆ. "

" ಹಾಗಾದರೆ ನೀನು ಕಡೆ ತನಕ ಕನ್ಯೆಯಾಗಿಯೇ—ಕುಮಾರಿಯಾಗಿಯೇ ಇರಬೇಕೆನ್ನುವೆ ! " ಸುಮಿತ್ರೆ ಆಶ್ಚರ್ಯ ವ್ಯಕ್ತಪಡಿಸಿದಳು. ಜೀವನದಲ್ಲಿ ಒಮ್ಮೆಯಾದರೂ ಗಂಡಿನ ಸಂಪರ್ಕ ಬಯಸದೆ ಸಂಯಮದಿಂದ ಇರುವುದು ತುಂಬ ಕಠಿಣವಾದ ಕನ್ಯಾವ್ರತವೆಂದು ಅವಳ ಭಾವನೆ.

" ನಾನೆಲ್ಲಿ ಹಾಗೆಂದೆ ? " ಲೀಲಾವತಿ ಸುಮಿತ್ರೆಯ ಮನಸ್ಸನ್ನು ಬಲ್ಲವಳಂತೆ ಹೇಳಿದಳು.

" ಮದುವೆಯಾಗದೆ ಇದ್ದ ಮಾತ್ರಕ್ಕೆ ಕಡೆ ತನಕ ಗಂಡಿನ ಸಂಪರ್ಕವಿಲ್ಲದ ಕುಮಾರಿಯಾಗಿಯೇ ಇರಬೇಕೆನ್ನುವುದು ಕಡ್ಡಾಯವಿಲ್ಲವಷ್ಟೇ?" ಎಂದು ಮಾತು ಮುಂದುವರಿಸಿದಳು.

ಈ ಮಾತನ್ನು ಕೇಳಿ ವಿಸ್ಮಯಗೊಂಡ ಸುಮಿತ್ರೆ " ಹಾಗಾದರೆ ನೀನು........" ಮುಂದೆ ಮಾತು ಹೊರಡದೆ ಅಷ್ಟಕ್ಕೇ ನಿಲ್ಲಿಸಿದಳು.

" ಹೌದು ನನಗೂ ನಿಮ್ಮೆಲ್ಲರಂತೆ ಸುಖಪಡುವ ಆಸೆ ಇದೆ. ಆದರೆ ಮದುವೆಯ ಬಂಧನಕ್ಕೆ ಮಾತ್ರ ಒಳಗಾಗಲಾರೆ."

" ಚೆನ್ನಾಯಿತು. ನಿನ್ನಂಥ ವಿದ್ಯಾವತಿ ಹೇಳುವ ಮಾತೇ ಇದು ?"

" ಏಕೆ ?"

" ಮದುವೆಯ ಜವಾಬ್ದಾರಿ ಹೊರಲಿಚ್ಛಿಸದೆ ಮದುವೆಯ ಸುಖ ಅನುಭವಿಸುವುದು ಪಾಪವಲ್ಲವೆ ?"

" ಪಾಪ ಪುಣ್ಯಗಳನ್ನು ನಿರ್ಣಯಿಸುವವರು ಯಾರು ?"

" ಸಮಾಜ !"

" ಸಮಾಜದ ಕಣ್ಣಿನಲ್ಲಿ ಪಾಪವೆನಿಸುವ ವಿಷಯ ನನ್ನ ಕಣ್ಣಿನಲ್ಲಿ ಹಾಗೆ ಅನಿಸದೆ ಹೋದರೆ ?"

" ಅದು ಸರ್ವಥಾ ನಿಂದ್ಯವೇ."

" ಹಾಗಾದರೆ ನಾನು ಮದುವೆಯಾಗದೆ ಹೋದರೆ ನಿಂದ್ಯಳೇ?"

" ನೀನು ಅವಿವಾಹಿತೆಯಾಗಿದ್ದರೂ ಚಿಂತೆಯಿಲ್ಲ. ನೀನು ಸಮಾಜವನ್ನು ಕೆಡಿಸದಿದ್ದರೆ ಆಯಿತು."

" ಸಮಾಜವನ್ನು ನಾನು ಹೇಗೆ ಕೆಡಿಸುತ್ತೇನೆ ?"

" ನೀನು ಬಯಸುವ ದೈಹಿಕ ಸುಖದ ದಾರಿ ಕೆಡುಕಿನದಾರಿ. ಅಂತಲೇ ಅದು ಸಮಾಜ ಬಾಹಿರ."

" ಮನುಷ್ಯನ ಕಾಮ ನೀನು ತಿಳಿದಿರುವಂತೆ ನಿಂದ್ಯಾಸ್ಪದ ವಿಷಯವಲ್ಲ. ಅದು ಅವನ ಹುಟ್ಟುಗುಣ—ಸಹಜ ಪ್ರವೃತ್ತಿಗಳಲ್ಲಿ ಒಂದು. ಆಹಾರ, ನಿದ್ರಾ, ಭಯ, ಮೈಥುನಗಳನ್ನು ನಮ್ಮ ಹಿರಿಯರು ಮಾನವ ಸಹಜ ಪ್ರವೃತ್ತಿಯೆಂದು ಪರಿಗಣಿಸಿದ್ದಾರೆ. ಹೀಗಿರುವಲ್ಲಿ ವ್ಯಕ್ತಿಯ ಕಾಮದ ವಿಷಯದಲ್ಲಿ ಸಮಾಜವೇಕೆ ತಲೆ ಹಾಕಬೇಕು ?"

" ಸಮಾಜವೆಂದರೆ ಏನು ? ನಿನ್ನಂಥ ವ್ಯಕ್ತಿಗಳ ಸಮಷ್ಟಿಯಲ್ಲವೆ ?"

" ಅದು ನಿಜ. ವ್ಯಕ್ತಿಯ ಸುಖ ವ್ಯಕ್ತಿಗೆ ಸಂಬಂಧಿಸಿದ್ದು. ಇದರಲ್ಲಿ ಇನ್ನೊಬ್ಬರ ಅಧಿಕ ಪ್ರಸಂಗತನವೇಕೆ ?"

" ನೀನು ಬಯಸುವ ಕಾಮಸ್ವಾತಂತ್ರ್ಯ ನಿನ್ನೊಬ್ಬಳ ಹಕ್ಕಲ್ಲ. ಅದು ಸಮಾಜದ ಸುಖವನ್ನು ಅವಲಂಬಿಸಿದೆ."

" ಹಾಗೆಂದರೆ ?"

" ನೀನು ಬಯಸುವ ಹಕ್ಕು ಮತ್ತೊಬ್ಬರ ಹಕ್ಕಿನೊಡನೆ ಘರ್ಷಣೆಗೆ ನಿಂತರೆ ಸಮಾಜದ ವ್ಯವಸ್ಥೆ—ಅವ್ಯವಸ್ಥೆಯಾಗುವುದು. ನಿನಗೆ ಕಾಮ ಸಹಜಪ್ರವೃತ್ತಿಯಾದರೆ ಮದುವೆಯಾಗಿ ಸುಖಪಡು. ಇಲ್ಲದೆ ಇದ್ದರೆ ಸಂಯಮದಿಂದ ಬದುಕಿ ಸಮಾಜದ ಅಂತಃಸತ್ವವನ್ನು ಮೇಲೇರಿಸು."

" ಹಲವು ಬಗೆಯ ದೌರ್ಬಲ್ಯಕ್ಕೆ ಒಳಗಾದ ವ್ಯಕ್ತಿ ತನ್ನ ದೌರ್ಬಲ್ಯಗಳನ್ನು ಮುಚ್ಚಿಕೊಳ್ಳಲು ಮದುವೆಯ ಮುಖವಾಡವನ್ನು ರಚಿಸಿಕೊಂಡರೆ, ವಿವಾಹ ಪದ್ಧತಿ ಸರ್ವರಿಗೂ ಆದರ್ಶವೆನ್ನಲು ಹೇಗೆ ಸಾಧ್ಯ? ಮಾನವನ ಸಹಜಪ್ರವೃತ್ತಿಯಾದ ಕಾಮವನ್ನು ಈಡೇರಿಸಿಕೊಳ್ಳಲು ಸರಳದಾರಿಯ ಬದಲು ವಿವಾಹ ಪದ್ಧತಿಯಂತಹ ಬಳಸುದಾರಿಯೇಕೆ? "

" ಮದುವೆಯೇ ಸರಳದಾರಿ ! "

" ಇದು ನಿನ್ನ ತಪ್ಪುಗ್ರಹಿಕೆ, ಗಂಡು ಹೆಣ್ಣುಗಳು ವಯೋಧರ್ಮಕ್ಕನುಗುಣವಾಗಿ ಕೂಡಲು ಮದುವೆಯ ಕೋಟೆಯೇಕೆ? ನಮಗೆ ಬಾಯಾರಿಕೆಯಾದರೆ ನೀರಿದ್ದೆಡೆಗೆ ಹೋಗಿ ತೃಷೆಯನ್ನು ಹಿಂಗಿಸಿಕೊಳ್ಳಬೇಕೇ ಹೊರತು ನೀರನ್ನು ಕೆರೆಕಟ್ಟಿ ನಿಲ್ಲಿಸಿ, ನಳಗಳ ಮೂಲಕ ಹಾಯಿಸಿ, ಬಿಂದಿಗೆಯಲ್ಲಿ ತುಂಬಿ, ಲೋಟದಲ್ಲಿ ಒಯ್ದು, ಗೋಪ್ಯವಾಗಿ ಕುಡಿಯುವುದು ಸರಳದಾರಿಯೋ ಬಳಸುದಾರಿಯೋ? "

" ಇದು ಬಳಸುದಾರಿಯಾದರೂ ಇದರಲ್ಲಿ ಸೌಖ್ಯವಿದೆ. ನೆಮ್ಮದಿ ಇದೆ. ಈ ನೆಮ್ಮದಿ, ಸರಳಹಾದಿಯಿಂದ ಖಂಡಿತ ನಮಗೆ ಲಭಿಸುವುದಿಲ್ಲ."

" ಹಾಗಾದರೆ ಮದುವೆಯ ಆವಶ್ಯಕತೆ ಇಲ್ಲದ ಗಂಡು ಹೆಣ್ಣುಗಳು ಕೂಡಿ ಇರಲು ಸಾಧ್ಯವೇ ಇಲ್ಲವೆ? ಏಕನಿಷ್ಠರಾಗಿರಲು ಸಾಧ್ಯವೇ ಇಲ್ಲವೇ?"

" ಸಾಧ್ಯ. ಆದರೆ ಪರಸ್ಪರ ಸಂಬಂಧದ ಬುನಾದಿ ಪ್ರೇಮವಾದರೆ ಮಾತ್ರ ಸಾಧ್ಯ. ಕಾಮದ ಬುನಾದಿಯ ಮೇಲೆ ನಿಂತ ಗಂಡು ಹೆಣ್ಣಿನ ಸಂಬಂಧ ಬಹಳ ಕಾಲ ನಿಲ್ಲಲಾರದು. "

" ಮದುವೆಯಿಂದ ಈ ಬಗೆಯ ಪ್ರೇಮಸಾಕ್ಷಾತ್ಕಾರವಾಗುವುದಾದರೆ ವಿವಾಹ ಪದ್ಧತಿಯನ್ನು ನಾನು ಒಪ್ಪಲು ಸಿದ್ಧಳಿದ್ದೇನೆ. ಆದರೆ ಕೇವಲ ಕಾಮಕ್ಕೆಂದೇ ಕೂಡಿದ ದಾಂಪತ್ಯವನ್ನೂ ವಿವಾಹ ಪುರಸ್ಕರಿಸುವುದರಿಂದಲೆ

ನಾನು ವಿವಾಹ ಪದ್ಧತಿಯನ್ನು ತಿರಸ್ಕರಿಸುವುದು. "

" ಸಮಾಜ ಯಾರನ್ನೂ ಮದುವೆಯಾಗಲೇಬೇಕೆಂದು ಬಲಾತ್ಕರಿಸುವುದಿಲ್ಲ. ಗಂಡಿನ ನೆರವು ಕಿಂಚಿತ್ತು ಇಲ್ಲದೆ ನೀನು ಬದುಕಬಲ್ಲೆ ಎಂದೆನಿಸಿದರೆ ಅದಕ್ಕೆ ಯಾರೂ ಅಡ್ಡಿ ಬರರು. ಆದರೆ ಬದುಕಿನಲ್ಲಿ ಅಂತಿರಲು ಕಠೋರವಾದ ತಪಸ್ಸು ಬೇಕು, ಸ್ವಾರ್ಥತ್ಯಾಗ ತಪಸ್ಸುಗಳಿಲ್ಲದೆ ಸಂಯಮ ಸಿದ್ಧಿಸದು. "

" ಸಂಯಮ ? ಸಂಯಮದ ಮಾತೇಕೆ ? ನನಗೆ ಪ್ರೇಮವೆನ್ನುವುದು ಹೆಚ್ಚಲ್ಲ, ಕಾಮವೆನ್ನುವುದು ತುಚ್ಛವಲ್ಲ. ನನ್ನ ದೇಹ ಹಸಿವಾದರೆ ಉಣುವಂತೆ, ನೀರಡಿಕೆಯಾದರೆ ಜಲಪಾನಮಾಡುವಂತೆಯೇ, ಅಷ್ಟೇ ಸಹಜವಾಗಿ ಕಾಮದ ಕರೆಗೂ ' ಓ ' ಕೊಡುತ್ತೇನೆ. ಇದನ್ನು ನಾನು ಪಾಪವೆಂದು ತಿಳಿದಿಲ್ಲ. ವಯೋಧರ್ಮವೆಂದುಕೊಳ್ಳುವೆ. ಆದರೆ ಇದುವರೆಗೆ ಗಂಡಿನ ಸಹವಾಸ ಬಯಸದೆ, ಪ್ರೇಮಾರ್ಥಿಗಳ ಮಾತಿಗೆ ಮರುಳಾಗದೆ ನನ್ನ ಕೌಮಾರ್ಯವನ್ನು ಕಾಯ್ದುಕೊಂಡು ಬಂದಿದ್ದೇನೆ. ಸಾಯುವ ತನಕ ಅವಿವಾಹಿತಳಾಗಿ ಇರಬೇಕೆಂಬುದೇ ನನ್ನ ಆಸೆ " ಎಂದಳು ಲೀಲಾವತಿ.

ಈ ಮಾತನ್ನು ಕೇಳಿ ಸುಮಿತ್ರೆ, ಹಂಸರು ತಲ್ಲಣಿಸಿದರು. ಕೇವಲ ಚರ್ಚೆಗೆಂದು ಆರಂಭವಾದ ವಿಷಯ ಇಷ್ಟು ಗಹನವಾದೀತೆಂದು ಅವರು ತಿಳಿದಿರಲಿಲ್ಲ. ಚರ್ಚೆಗಾಗಿ ಚರ್ಚೆ ಎಂದು ತಿಳಿದಿದ್ದ ಅವರಿಗೆ ಲೀಲಾವತಿಯು ಈ ಜನ್ಮದಲ್ಲಿ ಮದುವೆಯಾಗುವುದಿಲ್ಲವೆಂದು ಸ್ಪಷ್ಟವಾಗಿ ಹೇಳಿದ ಮೇಲೆ ಅವರಿಗೆ ತಾವು ಈ ವಿಷಯವನ್ನು ಇಷ್ಟು ಬೆಳೆಸಬಾರದಾಗಿತ್ತೆಂದು ಅನಿಸಿತು. ಲೀಲಾವತಿ ಮಾತನಾಡುವ ಭರದಲ್ಲಿ ತಾನು ಆಜನ್ಮ ಪರ್ಯಂತ ಕುಮಾರಿಯಾಗಿಯೇ ಉಳಿಯುವ ಪ್ರತಿಜ್ಞೆ ಮಾಡಿದಾಗ ಆ ಮಾತು ಅವರಿಬ್ಬರಿಗೂ ಕಾದ ಸೀಸದಂತೆ ಕಿವಿಗೆ ಬಿದ್ದಿತ್ತು. ಸುಮಿತ್ರೆ ಹೇಳಿದಳು :

" ಲೀಲಾ, ಏನಿದು ಮಾತು ? ಯಾವ ದೇವರ ಪ್ರೀತಿಗೆ ನೀನು ಕುಮಾರಿಯಾಗಿಯೇ ಉಳಿಯಬೇಕೆಂದಿರುವೆ ? ಇನ್ನೊಮ್ಮೆ ನೀನು ಆ ಮಾತು ಆಡಬಾರದು."

" ಸುಮ್ಮಿ, ನಿನಗಿನ್ನೂ ಲೀಲಾವತಿಯ ಅಂತರಂಗ ತಿಳಿದಿಲ್ಲ. ಲೀಲಾವತಿ ತೋರಿಕೆಗಾಗಿ ಎಂದೂ ಯಾವ ಕೆಲಸವನ್ನೂ ಮಾಡಳು. ನಾನು ಕುಮಾರಿಯಾಗಿ ಉಳಿಯುವ ಬಗ್ಗೆ ಸಾವಿರ ಬಾರಿ ಆಲೋಚಿಸಿ ಕಡೆಗೆ ಈ ನಿರ್ಧಾರಕ್ಕೆ ಬಂದಿರುವೆ."

" ವಿವಾಹ ಪದ್ಧತಿಯ ಮೇಲೆ ನಿನಗೇಕೆ ಇಷ್ಟು ಆಗ್ರಹ? ಮದುವೆ ನಿನಗೆ ಮಾಡಿರುವ ಅನ್ಯಾಯವಾದರೂ ಏನು ? "

" ಅನ್ಯಾಯ ? ನನಗೆ ಮಾಡಿಲ್ಲ, ದಿಟ. ಆದರೆ ನನ್ನ ಪ್ರಾಣಕ್ಕೂ ಮಿಗಿಲಾದ ನನ್ನ ತಂದೆಗೆ ಈ ಮದುವೆಯಿಂದ ಆಗಿರುವ ಅನ್ಯಾಯವನ್ನು ನಾನು ಈ ಜನ್ಮದಲ್ಲಿ ಮರೆಯಬಲ್ಲೆನೆ ? " ಎಂದಳು ಕಠೋರಳಾಗಿ.

ಹಂಸಳು ಇದುವರೆಗೆ ಇವರಿಬ್ಬರ ಮಾತುಕತೆಯನ್ನು ಕೇಳುತ್ತ ಮೌನವಾಗಿ ಕುಳಿತಿದ್ದಳು. ಅವಳು ಮದುವೆಯ ಬಗ್ಗೆ ತನ್ನ ಯಾವ ಅಭಿಪ್ರಾಯಗಳನ್ನೂ ವ್ಯಕ್ತಪಡಿಸಿರಲಿಲ್ಲವಾಗಿ ಅವಳನ್ನು ಲೀಲಾವತಿ ಕೆಣಕಿದಳು.

" ಹೋಗಲಿ ಹಂಸ, ವಿವಾಹ ಪದ್ಧತಿಯ ಬಗ್ಗೆ ನಿನ್ನ ಅಭಿಪ್ರಾಯ ವೇನು ? "

" ನಾನು ಯಾವ ದೊಡ್ಡ ಮನುಷ್ಯಳೆಂದು ನನ್ನನ್ನು ಕೇಳುತ್ತಿ ? ನಾನೇನೂ ನಿಮ್ಮ ಹಾಗೆ ಮದುವೆಯ ವಿಷಯವನ್ನು ಆಲೋಚನೆ ಮಾಡಿಯೇ ಇಲ್ಲ. ಹೇಗೆ ಅವಕಾಶ ಬರುತ್ತದೋ ಹಾಗೆ ನಡೆದುಕೊಳ್ಳುವುದು."

ಎಂದು ಮೆಲ್ಲನೆ ಜಾರಿಕೊಂಡಳು. ಅವಳನ್ನು ಈ ಬಗ್ಗೆ ಪೀಡಿಸಿ ಪ್ರಯೋಜನವಿಲ್ಲವೆಂದು ತಿಳಿದ ಮೇಲೆ,

" ಹೋಗಲಿ. ಮುಂದೇನು ಮಾಡಬೇಕೆಂದಿರುವೆ ? " ಎಂದಳು.

" ಯಾವುದಾದರೂ ಮಿಷನರಿ ಆಸ್ಪತ್ರೆ ಸೇರಿಕೊಳ್ಳುವ ಆಸೆ ಇದೆ. ನಮ್ಮ ತಂದೆಗೆ ಮತದ ಬಗ್ಗೆ ಅಪಾರವಾದ ಅಭಿಮಾನವಿದೆ. ಅವರು ತಮ್ಮ ಇಡೀ ಜೀವನವನ್ನು ಮಿಷನರಿ ಕೆಲಸಕ್ಕಾಗಿ ಮುಡಿಪವರು. ನಾನು ಹುಡುಗಿಯಾದ ಲಾಗಾಯಿತು ನಾನು ಡಾಕ್ಟರು ಆಗಲೇ ಬೇಕೆಂದು ಅವರ

ಆಸೆ. ನನ್ನ ವಿದ್ಯಾಭ್ಯಾಸಕ್ಕೆ ಮಿಷನ್ನಿನವರೇ ಹಣ ಕೊಟ್ಟದ್ದಾರೆ. ಅವರ ಋಣವನ್ನು ಹೇಗೆ ತಾನೇ ತೀರಿಸಲಿ" ಎಂದಳು ಹಂಸ.

ಈಗ ಸುಮಿತ್ರೆಯ ಸರದಿ.

"ಮುಂದೇನು ಮಾಡಬೇಕೆಂದಿರುವೆ ಸುಮ್ಮಿ?"

"ಮೊದಲು ಪಾಸಾಗಲಿ; ಅನಂತರ ಆ ಮಾತು."

"'ಪಾಸು' ನಿನಗಾಗದೆ ಇನ್ನಾರಿಗೆ ಆಗುತ್ತೆ? ಪಾಸಾದರೆ ಏನು ಮಾಡಬೇಕೆಂದಿರುವೆ?" ಎಂದು ದನಿಗೂಡಿಸಿದಳು ಹಂಸ.

ಸುಮಿತ್ರೆ ಚಣಕಾಲ ಆಲೋಚಿಸಿದಳು. ಅವಳ ಬದಲು ಲೀಲಾವತಿ ಉತ್ತರಿಸಿದಳು: "ಸಂಸಾರ ಹೂಡುತ್ತಾಳೆ."

ಈ ಅನಿರೀಕ್ಷಿತ ಮಾತಿನಿಂದ ಸುಮಿತ್ರೆಯ ಮುಖ ನಾಚಿಕೆಯಿಂದ ಕೆಂಪಾಯಿತು. ಅವಳು ಏನೊಂದೂ ಮಾತನಾಡದೆ ಲೀಲಾವತಿಯನ್ನು ಒಂದೇ ಸಮನೆ ದುರುಗುಟ್ಟಿಕೊಂಡು ನೋಡಿದಳು.

"ನಾನು ಹೇಳಿದ್ದು ಸುಳ್ಳೆ ಸುಮ್ಮಿ?"

"ಒಂದು ರೀತಿಯಾಗಿ ನಿಜವೇ ಅನ್ನು. ನಾನೇನು ನಿನ್ನ ಹಾಗೆ ಆಜನ್ಮ ಬ್ರಹ್ಮಚಾರಿಣಿಯಾಗಿ ಇರಬೇಕೆಂದು ವ್ರತ ತೊಟ್ಟಿಲ್ಲವಲ್ಲ!" ಎಂದಳು.

ಈ ಮಾತು ಕೇಳಿ ಉಳಿದವರಿಬ್ಬರೂ ನಕ್ಕರು.

"ನನ್ನ ಮುಂದಿನ ಭವಿಷ್ಯದ ಬಗ್ಗೆ ನಾನು ಏನನ್ನೂ ನಿರ್ಧರಿಸಿಲ್ಲ. ಬಹುಶಃ ಸರಕಾರಿ ಚಾಕರಿಗೆ ಸೇರಿಕೊಳ್ಳುವುದಿಲ್ಲ. ನಾನೇ ಸ್ವತಃ 'ಪ್ರೈವೇಟಾಗಿ 'ಪ್ರಾಕ್ಟಿಸ್' ಮಾಡುವ ಅಲೋಚನೆ ಇದೆ. ಯಾವುದೂ ಮುಂದೆ ನಿರ್ಧಾರವಾಗಬೇಕು" ಎಂದಳು ನಗುವಿನ ಅಬ್ಬರ ಅಡಗಿದ ಮೇಲೆ.

"ಐ ಮೀನ್ ನಿನ್ನ ಡಾರ್ಲಿಂಗ್‌ನ 'ಕನ್‌ಸಲ್ಟ್' ಮಾಡಿದ ಮೇಲೆ ತಾನೆ?"

ಎಂದು ಲೀಲಾವತಿ ಚುಡಾಯಿಸಿದಳು.

ಈ ಮಾತಿನಿಂದ ಮತ್ತೊಮ್ಮೆ ಸುಮಿತ್ರೆಯ ಮುಖ ಕೆಂಪಾಯಿತು. ಅವಳು ಇಷ್ಟು ಬೆಳೆದ ಹುಡುಗಿಯಾದರೂ ತನ್ನ ಗಂಡ ಸದಾಶಿವನ ಮಾತು

ಬಂದರೆ ಇನ್ನೂ ಎಳೆ ಹುಡುಗಿಯಂತೆ ನಾಚುತ್ತಿದ್ದಳು.

"ಲೀಲಾ ನಿಂಗೆ ನನ್ನ ಮಾತೆಲ್ಲ ತಮಾಷೆ."

"ಹಾಗಾದ್ರೆ ನಾನು ಹೇಳಿದ ಮಾತು ಸುಳ್ಳೆ? ಹೇಳಿಬಿಡು ಹಿಂದಕ್ಕೆ ತೆಗೆದುಕೊಂಡುಬಿಡುತ್ತೇನೆ.

"ಮಹರಾಯಿತಿ, ನೀನು ಹಿಂದಕ್ಕೆ ತೆಗೆದುಕೊಳ್ಳುವುದು ಬೇಡ. ಸದ್ಯ ಮುಂದುವರೆಸದಿದ್ದರೆ ಸಾಕಾಗಿದೆ."

"ಅಬ್ಬಾ! ಅದೆಷ್ಟು ನಾಚಿಕೆಯೇ ನಿಂಗೆ. ಗಂಡನ ಸುದ್ದಿ ಎತ್ತಿದರೆ ಸಾಕು ಬ್ಲಷ್ ಆಗಿ ಬಿಡ್ತಿ. ನೀನು ಇಷ್ಟು ವರ್ಷ ಕಾಲೇಜಿಗೆ ಮಣ್ಣು ಹೊತ್ತಿದ್ದಕ್ಕೆ ಸಾರ್ಥಕವಾಯಿತು."

"ಕಾಲೇಜು ಓದು ಕಲಿತಾಕ್ಷಣಕ್ಕೆ ಗಂಡಹೆಂಡತಿ ಎನ್ನುವ ಭಾವನೆ ಬದಲಾಗುತ್ತದೆಯೆ?" ಎಂದಳು ಹಂಸ.

"ಭಾವನೆ ಬದಲಾಗದಿದ್ದರೂ ತೋರಿಸುವ ರೀತಿ ಬದಲಾಗಬೇಡವೆ? ಗಂಡನ ಸುದ್ದಿ ಎತ್ತಿದರೆ ಹಳ್ಳಿ ಹುಡುಗಿ ಹಾಗೆ ಇವಳು ನಾಚಿಕೆಪಟ್ಟುಕೊಳ್ಳುತ್ತಾಳಲ್ಲ. ನಾಳೆ ಡಾಕ್ಟರಾಗೋಳು ನಾಚಿಕೆ ಪಟ್ಟರೆ ಹೇಗೆ?"

"ಹಾಗಾದರೆ ನಾಚಿಕೆ ಪಡುವುದು ತಪ್ಪೆ?"

"ನಾಚಿಕೆ ಏಕೆ ಪಡಬೇಕೋ ಕಾಣೆ. ಅದೂ ನಾವು ನಾವೇ ಇರುವಾಗ!"

"ಲಜ್ಜೆ, ನಾಚಿಕೆ ಹೆಂಗಸಿಗೆ ಭೂಷಣ."

"ಸಿಲ್ಲಿ. ಭೂಷಣವಲ್ಲ ಅದು ಕಲಂಕ."

"ನೀನು ಗಂಡುಬೀರಿ ಕಾಣೆ ಲೀಲಾ."

"ನೀನು ಹೇಗೆ ಕರೆದರೂ ನನಗೆ ಸಿಟ್ಟಿಲ್ಲ. ಇಷ್ಟಕ್ಕೂ ಇದೇನು ಹೊಸ ಹೆಸರಲ್ಲ. ನಾನು ಕಾಲೇಜಿನಲ್ಲಿ ಓದುತ್ತಿದ್ದಾಗ ಹುಡುಗರು ನನ್ನನ್ನು ಲೇವಡಿಮಾಡಲು ಎಷ್ಟು ಬಿರುದು ಕೊಟ್ಟಿದ್ದರು ಗೊತ್ತೆ? ನೀನಾಗಿದ್ದರೆ ಅವರು ಚುಡಾಯಿಸುವುದು ಕೇಳಿ ಕಾಲೇಜು ಬಿಟ್ಟು ಬಿಡುತ್ತಿದ್ದೆ. ಕಾಲೇಜಿಗೆ ಬಂದಮೇಲೆ ನಾಚಿಕೆಪಟ್ಟರೆ ಗಂಡಸರೆಲ್ಲಿ ನಮ್ಮನ್ನು ಉಳಿಸುತ್ತಾರೆ? ನಾವು ಸೇರಿಗೆ ಸವಾಸೇರಾದರೇನೇ ನಮ್ಮ ಉಳಿವು" ಎಂದು ತನ್ನ ವಿದ್ಯಾರ್ಥಿ

ಜೀವನವನ್ನು ನೆನಪುಮಾಡಿಕೊಂಡು ಹಲವಾರು ಸ್ವಾರಸ್ಯವಾದ ಘಟನೆಗಳನ್ನು ಹೇಳಿದಳು. ಅದರ ಪೈಕಿ ಗಂಡಸಿನಂತೆ ಉಡುಪು ತೊಟ್ಟು, ಸಿಗರೇಟು ಸೇದುತ್ತಿದ್ದ ಹಾಸ್ಟೆಲ್ ಮೇಟ್ ಸುನಂದೆಯ ಕಥೆಯೂ ಒಂದು. ಅವಳು ಗಂಡುಹುಡುಗರಿಗಿಂತ ಯಾವುದರಲ್ಲಿಯೂ ಕಡಿಮೆ ಇಲ್ಲವೆಂದು ತೋರಿಸಲೆಂದೇ ಹಾಗೆ ಮಾಡುತ್ತಿದ್ದಳಂತೆ. ಇಂಥವೇ ಹಲವಾರು ಕಥೆಗಳು ಬಂದು ಹೋದುವು. ಉತ್ಸಾಹದ ಭರದಲ್ಲಿ ಅತಿಯಾಗಿ ಮಾತನಾಡಿದ್ದ ಲೀಲಾವತಿಗೆ ಒಂದು ಬಗೆಯ ಆಲಸಿಕೆ ತಲೆದೋರಿ, ಹೆಗಲಿಗಿದ್ದ ಫ್ಲಾಸ್ಕಿಗೆ ಮತ್ತೆ ಕೈಹಾಕಿದಳು. ಥರ್ಮಾಫ್ಲಾಸ್ಕಿನಲ್ಲಿ ಇದ್ದ ಕಾಫಿ ಈ ಮೊದಲೇ ಮುಗಿದು ಹೋದುದರಿಂದ, ಉಳಿದಿದ್ದ ಅಲ್ಪ ಕಾಫಿಯನ್ನು ಗೆಳತಿಯರಿಗೆ ಕೊಡದೆ ತಾನೊಬ್ಬಳೇ ಹೇಗೆ ತೆಗೆದುಕೊಳ್ಳುವುದೆಂದು ಹಿಂದು ಮುಂದೆ ತುಳಿವಳು. ಇದನ್ನು ನೋಡಿದ ಸುಮಿತ್ರೆ—

"ಯಾಕೆ ಲೀಲಾ? ಫ್ಲಾಸ್ಕಿನಲ್ಲಿ ಕಾಫಿ ಇಲ್ಲವೆ?"

"ಒಂದು ಕಪ್ಪಿನಷ್ಟು ಇದೆ."

"ಹಾಗಿದ್ದರೆ ಬಗ್ಗಿಸಿಕೊಂಡು ಕುಡಿ—ಯಾಕೆ ಯೋಚನೆ?"

"ನಿಮಗೆ?"

"ನನಗಂತೂ ಉಂಡ ಊಟ ಅರಗಿದರೆ ಸಾಕಾಗಿದೆ. ಇದರ ಮೇಲೆ ಕಾಫಿಯೇ? ಬೇಡ ಮಹರಾಯಿತಿ. ನನಗೆ ನಿನ್ನಷ್ಟು ಕಾಫಿ ಖಯಾಲಿ ಇಲ್ಲ" ಎಂದಳು, ನಗುತ್ತ. ತನ್ನದೂ ಅದೇ ಅಭಿಪ್ರಾಯವೆಂದು ಹಂಸಳು ಸಂಜ್ಞೆಮಾಡಿ ತಿಳಿಸಿದಳು. ಆಗ ಲೀಲಾವತಿ ಕಾಫಿಯನ್ನು ಕಪ್ಪಿಗೆ ಸುರಿಯುತ್ತಾ—

"ನನಗೆ ಕಾಫಿಯೊಂದು ಇದ್ದುಬಿಟ್ಟರೆ ಮೂರು ದಿನ ಉಪವಾಸ ಬೇಕಾದರೂ ಇರಬಲ್ಲೆ" ಎಂದು ಕಾಫಿಯ ಮಹಿಮೆಯನ್ನು ಕೊಂಡಾಡುತ್ತಾ ಹೊರಟಳು. ಇವಳ ಮಾತು ಸುಮಿತ್ರೆಯ ಕಿವಿಯ ಮೇಲೆ ಬಿತ್ತೋ ಇಲ್ಲವೋ. ಅವಳು ಎಲ್ಲಿಯೋ ನೋಡುತ್ತಾ ಅನ್ಯಮನಸ್ಕಳಾಗಿದ್ದಳು.

ಪಕ್ಕದ ಮರದಡಿಯಲ್ಲಿ ಬಿಡಾರಮಾಡಿದ್ದ ಒಂದು ಪುಟ್ಟ ಸಂಸಾರ ಸುಮಿತ್ರೆಯ ಮನಸ್ಸನ್ನು ಸೆರೆಹಿಡಿದಿತ್ತು. ಯಾರೋ ಗುಜರಾತಿ ದಂಪತಿ

ಗಳು—ಇವರಂತೆಯೇ ಬೃಂದಾವನದ ದೀಪೋತ್ಸವವನ್ನು ನೋಡಲು ಬಂದಿದ್ದವರು. ಅವರು ಶ್ರೀಮಂತರೆನ್ನಲು ಅವರ ಉಡುಪು, ಹೊರಗೆ ಬಳಿಯಲ್ಲಿಯೇ ನಿಂತಿದ್ದ ಕಾರು- ಇವೇ ಸಾಕ್ಷಿ. ಅವರು ಇದ್ದವರೆಲ್ಲ ನಾಲ್ಕು ಮಂದಿ. ಗಂಡ ಹೆಂಡತಿ. ಇಬ್ಬರು ಮಕ್ಕಳು—ಒಂದು ಗಂಡು, ಇನ್ನೊಂದು ಹೆಣ್ಣು. ಅವರು ಅದೇ ತಾನೇ ಜತೆಯಲ್ಲಿ ತಂದಿದ್ದ ಫಲಹಾರವನ್ನು ಮುಗಿಸಿ, ಹಣ್ಣು ಹಂಪಲನ್ನು ವಿರಾಮವಾಗಿ ತಿನ್ನುತ್ತಾ ಕುಳಿತಿದ್ದರು. ಅದೇನು ಕಾರಣವೋ ಏನೋ—ಹುಡುಗ ಹುಡುಗಿಯರಲ್ಲಿ ಇದ್ದಕ್ಕಿದ್ದಂತೆ ಜಗಳವಾಗಿ, ಹುಡುಗ ಏನೋ ಬೇಕೆಂದು ಅಳಲಾರಂಭಿಸಿದ. ಅವನನ್ನು ಸಮಾಧಾನಪಡಿಸಲು ತಾಯಿ ಪರಿಪರಿಯಾಗಿ ಮುದ್ದಿಸಿದಳು. ಆದರೆ ಆ ಮಗು—ಸುಮ್ಮನಾಗಲಿಲ್ಲ. ತಂದೆ ಸುಲಿಯುತ್ತಿದ್ದ ಇಡೀ ಕಿತ್ತಲೆಹಣ್ಣನ್ನು ಮಗುವಿನ ಕೈಗೆ ಕೊಟ್ಟರು. ಇಷ್ಟಾದರೂ ಆ ಮಗು ಸುಮ್ಮನಾಗಲಿಲ್ಲ. ಕಡೆಗೆ ತಾಯಿಗೆ ಬೇಸರವಾಗಿ, ಸಿಟ್ಟು ಬಂದು, ಮಗುವನ್ನು ಸುಮ್ಮನಿರಲು ಗದರಿಕೊಂಡಳು. ಇದರಿಂದ ಮಗುವಿನ ರಂಪ ಇನ್ನಷ್ಟು ಹೆಚ್ಚಾಯಿತೇ ಹೊರತು ಕಡಮೆಯಾಗಲಿಲ್ಲ. ತಂದೆ ತಾಯಿಗಳಿಗೆ ಮೂರು ವರ್ಷದ ಆ ಮಗುವನ್ನು ಹೇಗೆ ಸುಮ್ಮನಿರಿಸುವುದು ಎಂಬುದು ಸಮಸ್ಯೆಯಾಯಿತು. ಅವರು ಮಗುವಿನ ಮೇಲೆ ವೃಥಾ ಕೋಪಮಾಡಿಕೊಳ್ಳುವುದನ್ನು ನೋಡಲಾರದೆ ಸುಮಿತ್ರೆ ಮಗು ಆಗಿನಿಂದಲೂ ಬಯಸುತ್ತಿದ್ದ ಪದಾರ್ಥವನ್ನು ಹುಡುಕಿ ಕೊಡಲು ಎದ್ದು ಬಂದಳು. ಮಗು ಬುಗುರಿಯೊಂದನ್ನು ಜತೆಯಲ್ಲೇ ತಂದಿತ್ತು. ಅದನ್ನು ಆಡಿಸುತ್ತಿರುವಾಗ ಅದು ಹೋಗಿ ಬಳಿಯಲ್ಲೇ ಇದ್ದ ಪೊದೆಯಲ್ಲಿ ಸೇರಿಕೊಂಡಿತ್ತು. ಅದು ಹೋದ ದಿಕ್ಕನ್ನು ಗಮನಿಸದೆ, ಬುಗುರಿಯನ್ನು ತನ್ನ ಅಕ್ಕನೇ ತೆಗೆದುಕೊಂಡಿರಬೇಕೆಂದು ಅಕ್ಕನನ್ನು ಬುಗುರಿಯನ್ನು ಹಿಂದಕ್ಕೆ ಕೊಡಲು ಪೀಡಿಸುತ್ತಿದ್ದ. ಆ ಹುಡುಗಿ ಬುಗುರಿ ತನಗೆ ತಿಳಿಯದೆಂದು ಎಷ್ಟು ಹೇಳಿದರೂ ಆ ಹುಡುಗನಿಗೆ ನಂಬಿಕೆ ಬರಲಿಲ್ಲ. ಹೀಗಾಗಿ ಅವರ ಜಗಳಕ್ಕೆ ಕಾರಣ. ಇದನ್ನೆಲ್ಲಾ ದೂರದಿಂದಲೇ ಸೂಕ್ಷ್ಮವಾಗಿ ಅವಲೋಕಿಸುತ್ತಿದ್ದ ಸುಮಿತ್ರೆ, ಬುಗುರಿಯನ್ನು ಪೊದೆಯ ಬಳಿಯಿಂದ ಎತ್ತಿಕೊಟ್ಟಳು. ಆಗ ಆ ಹುಡುಗನಿಗೆ ಅಪರಿಮಿತವಾದ ಆನಂದವಾಯಿತು. ಅವನು ಸುಮಿತ್ರೆ

ಯನ್ನು ತನ್ನ ತಾಯಿಗೆ ತೋರಿಸುತ್ತಾ, ತನ್ನ ಬಾಲ ಭಾಷೆಯಲ್ಲಿಯೇ ಕೃತಜ್ಞತೆ ಅರ್ಪಿಸುತ್ತಿದ್ದ. ಅವನ ಮುದ್ದು ಮುಖ ಅವನಿಗೆ ಆದ ಸಂತೋಷವನ್ನು ತೋರಿಸುತ್ತಿತ್ತು. ಸುಮಿತ್ರೆಗೆ ಆ ಮಗುವನ್ನು ಎತ್ತಿ ಮುತ್ತಿಡ್ಲು ಮನವಾದರೂ, ಆ ದಂಪತಿಗಳು, ಮೇಲಾಗಿ ತನ್ನ ಗೆಳತಿಯರು ಏನೆಂದು ತಿಳಿಯುವರೋ, ಎಂದು ಅಲ್ಲಿಂದ ಹಿಂತಿರುಗಿ ಬಂದಳು.

ಮಗುವನ್ನು ನಿಮಿಷಾರ್ಧದಲ್ಲಿ ಸಮಾಧಾನಪಡಿಸಿ ಬಂದ ಸುಮಿತ್ರೆಯನ್ನು ನೋಡಿ ಲೀಲಾವತಿ ಹೇಳಿದಳು.

"ಸುಮ್ಮಿ ಇನ್ನು ನನ್ನಿಂದ ಸಾಧ್ಯವಿಲ್ಲ—ವಿರಹ ತಡೆಯಲಾರೆ" ಎಂದಳು.

ಇದೇನು ಬಂತೆಂದು ಸುಮಿತ್ರೆ ಕಕ್ಕಾವಿಕ್ಕಿಯಾಗಿ ನೋಡಿದಳು.

"ಮದುವೆಯಾದ ಗಂಡನನ್ನು ನಾಲ್ಕು ವರ್ಷಗಳ ಕಾಲ ವನವಾಸಕ್ಕೆ ಅಟ್ಟಿದ ನಿನ್ನನ್ನು ನೋಡಿಕೊಂಡು ಇನ್ನು ಸುಮ್ಮನಿರಲು ಸಾಧ್ಯವಿಲ್ಲ—ಮೊದಲು ಮನೆಮಾಡಿ ಸಂಸಾರ ಹೂಡು. ಇನ್ನು ನಿನ್ನ ಒಂಟಿ ಬಾಳುವೆ—ವಿರಹ ನೋಡಿಕೊಂಡಿರಲು ನನಗೆ ಸಾಧ್ಯವಿಲ್ಲ" ಎಂದು ಚುಡಾಯಿಸಿದಳು.

ಈ ಮಾತು ಕೇಳಿ ಸುಮಿತ್ರೆ ಲಜ್ಜೆಯ ಮೂರ್ತಿಯೇ ಆದಳು. ಅವಳಿಗೆ ಲೀಲಾವತಿಯ ಎಲ್ಲ ಮಾತು ತುಂಬಾ ಪ್ರಿಯವಾದರೂ ಅದನ್ನು ಆಡಿ ತೋರಿಸುವ ಧೈರ್ಯ ಅವಳಿಗೆ ಇಲ್ಲದೆ, ಕೇವಲ ಹುಸಿ ನಗುವಿನಲ್ಲಿ ತನ್ನ ಮನದ ಆಸೆಗಳೆಲ್ಲವನ್ನೂ ವ್ಯಕ್ತಪಡಿಸಿದಳು.

ಹೊತ್ತು ಸರಿಯುತ್ತಾ ಬಂದು ಸಂಜೆಯಾಯಿತು. ಗೆಳತಿಯರು ಆಕಳಿಸುತ್ತಾ ಎದ್ದು ಬಳಿಯಲ್ಲೇ ಇದ್ದ ತಟಾಕದಲ್ಲಿ ಮುಖತೊಳೆದು, ಉಡುಪು ಸರಿಮಾಡಿಕೊಂಡು, ಬಳಿಯಲ್ಲೇ ಇದ್ದ ಫಲಾಹಾರ ಮಂದಿರಕ್ಕೆ ಹೋಗಿ, ಮತ್ತೊಂದು 'ಡೋಸ್' ಕಾಫಿ ಕುಡಿದು, ಸುತ್ತಾಟಕ್ಕೆ ಹೊರಟರು. ಈ ವೇಳೆಗಾಗಲೇ ಸೂರ್ಯಾಸ್ತಕ್ಕೆ ತೊಡಗಿತ್ತು. ಬೃಂದಾವನದ ಸೊಬಗು ಸಂಭ್ರಮಗಳನ್ನು ಮನತಣಿಯ ಸವಿದು ಆನಂದಿಸಲು ಬಂದಿದ್ದ ರಸಿಕರು ಎಲ್ಲೆಲ್ಲೂ ತುಂಬಿಕೊಂಡಿದ್ದರು. ರಸಿಕರೂ ಸರಸಿಗಳೂ ಆದ

ಗೆಳತಿಯರು ಉತ್ಸಾಹದ ಮೂರ್ತಿಗಳಾಗಿ ನೋಡಬೇಕಾದ ಎಲ್ಲ ತಾಣ ಗಳನ್ನೂ ನೋಡಿ ಬಂದರು. ಅವರು ಬೃಂದಾವನದ ಉತ್ತರ ಪಾರ್ಶ್ವದಲ್ಲಿ ರುವ ತಿಳಿಗೊಳದ ಬಳಿಗೆ ಬರುವಾಗ್ಗೆ ಆಗತಾನೇ ಕೊಳದಲ್ಲಿ ಪ್ರವಾಸಿಗಳ ಮನರಂಜನೆಗಾಗಿ ದೋಣಿಗಳನ್ನು ಬಿಟ್ಟಿದ್ದರು. ಗೆಳತಿಯರು ತಡಮಾಡದೆ ಸಣ್ಣ ದೋಣಿಯೊಂದನ್ನು ಬಾಡಿಗೆಗೆ ತೆಗೆದುಕೊಂಡು ತಾವೇ ಹುಟ್ಟು ಹಾಕುತ್ತಾ ಹೊರಟರು. ದೋಣಿ ಕೊಳದ ಮಧ್ಯೆ ಬರುತ್ತಿದ್ದಂತೆ ಅದೇನು ಕಾರಣವೋ ಸುಮಿತ್ರೆಗೆ ಕುವೆಂಪು ವಿರಚಿತ 'ದೋಣಿ ಸಾಗಲಿ ಮುಂದೆ' ಗೀತದ ನೆನಪಾಯಿತು. ಮೊದಲಿನಿಂದಲೂ ಕನ್ನಡ ಕವನಗಳನ್ನು ಸುಶ್ರಾವ್ಯ ವಾಗಿ ಹಾಡುತ್ತಿದ್ದ ಲೀಲಾವತಿಯನ್ನು ಸುಮಿತ್ರೆ 'ದೋಣಿ ಸಾಗಲಿ' ಗೀತೆಯನ್ನು ಹಾಡಲು ಪ್ರಾರ್ಥಿಸಿದಳು. ಹಂಸಳು ಈ ಮಾತಿಗೆ ಪುಷ್ಟಿ ಕೊಟ್ಟಳು. ಆದರೆ ಈ ಮಾತು ಕೇಳಿದೊಡನೆಯೇ ಇದ್ದಕ್ಕಿದ್ದಂತೆ ಲೀಲಾ ವತಿಯ ಮುಖ ಕೆಂಪಾಗಿ ಕ್ರಮವಾಗಿ ಗಂಭೀರವಾಯಿತು. ಲೀಲಾವತಿಯ ಲ್ಲಾದ ಮಾರ್ಪಾಡನ್ನು ನೋಡಿ ಗೆಳತಿಯರಿಗೆ ವಿಸ್ಮಯವಾಯಿತು. ಅವರು ಆ ಬಗ್ಗೆ ಲೀಲಾವತಿಯನ್ನು ಪೀಡಿಸಿದರು. ಅವರ ಪೀಡನೆಗೆ— ಅವರು ಕುತೂಹಲ ದೃಷ್ಟಿಯಿಂದ ಕೇಳಿದ ಎಲ್ಲ ಪ್ರಶ್ನೆಗಳಿಗೆ ಲೀಲಾವತಿಯ ಕಡೆಯಿಂದ ಬಂದ ಉತ್ತರವೆಂದರೆ ದೀರ್ಘವಾದ ಒಂದು ನಿಟ್ಟುಸಿರು ಮತ್ತು ಎರಡು ಹನಿ ಕಣ್ಣೀರು. ಲೀಲಾವತಿ ಆ ಕ್ಷಣಕ್ಕೆ ಅದೇನು ನೆನಪಿಗೆ ತಂದುಕೊಂಡಳೋ ಯಾರಿಗೆ ಗೊತ್ತು?

೨

ಸುಮಾರು ಎಂಟು ವರ್ಷಗಳ ಹಿಂದಿನ ಮಾತು ಅದು. ಲೀಲಾವತಿ ತನ್ನ ಸೋದರತ್ತೆಯ ಮಗಳ ಲಗ್ನಕ್ಕೆಂದು ತಂದೆಯೊಡನೆ ಮೈಸೂರಿಗೆ ಬಂದಿದ್ದಳು. ಅವಳು ಆಗತಾನೇ ಚಿಂತಾಮಣಿಯ, ಹೈಸ್ಕೂಲಿನಲ್ಲಿ ಎಸ್. ಎಸ್. ಎಲ್. ಸಿ. ಮುಗಿಸಿ, ಮುಂದೇನು ಮಾಡಬೇಕೆನ್ನುವ ಆಲೋಚನೆಯಲ್ಲಿದ್ದಳು. ಅವಳಿಗೆ ತಾನೂ ತನ್ನ ಅಣ್ಣ ಶ್ಯಾಮಸುಂದರನಂತೆ ಕಾಲೇಜಿಗೆ ಸೇರಬೇಕೆನ್ನುವ ಆಸೆ. ಆದರೆ ಸಂಪ್ರದಾಯ ಶರಣರೂ, ವೈದಿಕ ಮನೆತನದವರೂ ಆಗಿದ್ದ ತಾಯಿ ಗಂಗಮ್ಮನಿಗೆ ತಮ್ಮ ಮಗಳು ಗಂಡುಹುಡುಗರಂತೆ ಕಾಲೇಜು ಸೇರುವುದರಲ್ಲಿ ಕೊಂಚವೂ ಇಷ್ಟವಿರಲಿಲ್ಲ. ಅವರಿಗೆ ಲೀಲಾವತಿ ಹೈಸ್ಕೂಲು ಸೇರುವುದೇ ಬೇಕಿರಲಿಲ್ಲ. ಲೀಲಾವತಿ ತುಂಬಾ ಹಠಮಾಡಿದ ಮೇಲೆ, ಅವಳು ಉತ್ತಮ ರೀತಿಯಲ್ಲಿ ತೇರ್ಗಡೆ ಹೊಂದಿದ್ದು, ಎಲ್ಲರೂ ಅವಳನ್ನು ಮುಂದಕ್ಕೆ ಓದಿಸಲು ಪ್ರೋತ್ಸಾಹಿಸಿದುದರಿಂದ ತಂದೆ ವಿಶ್ವನಾಥರಾಯರು ಮಗಳ ಆಸೆಗೆ ಬೆಂಬಲಕೊಟ್ಟು ಹೈಸ್ಕೂಲಿಗೆ ಸೇರಿಸಿದ್ದರು. ಲೀಲಾವತಿಯ ಮೇಲೆ ಮೊದಲಿನಿಂದಲೂ ತನ್ನ ವರ್ಚಸ್ಸು ಕಡಿಮೆಯಿರುವುದನ್ನು ಅರಿತಿದ್ದ ಗಂಗಮ್ಮ ನಿರ್ವಾಹವಿಲ್ಲದೆ ಸುಮ್ಮನಾದರು. ಈಗ ಮತ್ತೆ ಅದೇ ಸಮಸ್ಯೆ ಮನೆಯಲ್ಲಿ ಕಾಣಿಸಿಕೊಂಡಿತ್ತು. ಲೀಲಾವತಿ 'ಫಸ್ಟ್ ಕ್ಲಾಸ್' ತನಗೆ ಕಟ್ಟಿಟ್ಟ ಬುತ್ತಿ ಎಂಬಂತೆ ಈ ಬಾರಿಯೂ ಫಸ್ಟ್ ಕ್ಲಾಸಿನಲ್ಲೇ ತೇರ್ಗಡೆಯಾಗಿ ಶಾಲೆಗೆ ಕೀರ್ತಿ ತಂದಿದ್ದಳು. ಅವಳನ್ನು ಎಲ್ಲರೂ ಹೊಗಳುವವರೇ ಆದರು. ಎಲ್ಲರೂ ಕಾಲೇಜು ಸೇರಲು ಪ್ರೋತ್ಸಾಹಿಸುವವರೇ ಆದರು. ಎಲ್ಲರ ಹೊಗಳಿಕೆ, ಸಲಹೆ, ತಂದೆ ವಿಶ್ವನಾಥರಾಯರ ಕಿವಿಗೆ ಬಿದ್ದಿದ್ದರೂ ಅವರು ಮಗಳ ವಿಷಯವನ್ನು ಏನೆಂದೂ ನಿರ್ಧರಿಸಲಾರದವರಾಗಿದ್ದರು. ಮಗಳು ಕಾಲೇಜಿಗೆ ಸೇರುವ ವಿಷಯದಲ್ಲಿ ಅವರೆಂದೋ ನಿರ್ಧರಿಸಿದ್ದರು. ಮುದ್ದಿನ ಮಗಳಾದ ಲೀಲಾವತಿಯ ಆಸೆಯನ್ನು ನಿರ್ಲಕ್ಷಿಸುವಂತಿರಲಿಲ್ಲ. ಅವಳ ಕಾಲೇಜಿನ ವಿದ್ಯಾಭ್ಯಾಸಕ್ಕೆ ತಮ್ಮ ಪೂರ್ಣ ಸಮ್ಮತಿಯನ್ನು ಕೊಟ್ಟಿದ್ದರೂ

ತಾವು ಮಗಳಿಂದ ದೂರವಿರಬೇಕಾಗುವುದಲ್ಲಾ ಎಂಬುದೇ ವಿಶ್ವನಾಥ ರಾಯರ ಕೊರಗು. ಅಲ್ಲದೆ ಲೀಲಾವತಿಯನ್ನು ಕಾಲೇಜಿಗೆ ಸೇರಿಸಿದರೆ ಅವಳ ಊಟವಸತಿಗಳ ಪಾಡೇನು? ಅವಳನ್ನು ತಮ್ಮ ನೆಂಟರ ಮನೆಗಳಲ್ಲಿ ಬಿಡಲು ವಿಶ್ವನಾಥರಾಯರಿಗೆ ಸುತರಾಂ ಇಷ್ಟವಿಲ್ಲ. ಬೆಂಗಳೂರು, ಮೈಸೂರುಗಳಲ್ಲಿ ವಿಶ್ವನಾಥರಾಯರಿಗೆ ಬೇಕಾದಷ್ಟು ಬಳಗವಿದ್ದರೂ ಯಾರಿಗೂ—ಸ್ವೇಚ್ಛೆಯಾಗಿ, ಕಷ್ಟದ ಸೆಲೆ ಕಾಣದೆ ಬೆಳೆದಿದ್ದ ತಮ್ಮ ಮಗಳ ಹೊರೆಯನ್ನು ಹೊರಿಸಲು ಇಷ್ಟವಿರಲಿಲ್ಲ. ಲೀಲಾವತಿ ಕಾಲೇಜಿಗೆ ಸೇರುವುದಾದರೆ ಅವಳಿಗೆ ಕಾಲೇಜ್ ಹಾಸ್ಟೆಲಿನಲ್ಲಿಯೇ ವಸತಿಮಾಡಬೇಕೆಂದು ವಿಶ್ವನಾಥರಾಯರ ಇಚ್ಛೆ. ಮಗಳನ್ನು ಹಾಸ್ಟೆಲಿನಲ್ಲಿ ಇಟ್ಟು ಓದಿಸುವುದು ತಾಲ್ಲೂಕು ದಣಿ ಅಮಲ್ದಾರ್ ಆಗಿದ್ದ ವಿಶ್ವನಾಥರಾಯರಿಗೆ ಅಂತಹ ಹೊರೆಯೂ ಅಲ್ಲ. ಅವರ ಸಮಸ್ಯೆ ಎಂದರೆ ಮನೆಯಿಂದ ಒಂದು ದಿನ ಹೊರಗೆ ಹೋಗದ ಹೆಣ್ಣುಹುಡುಗಿಯನ್ನು ಒಂಟಿಯಾಗಿ ಬಿಟ್ಟಿರಬೇಕಲ್ಲಾ ಎಂಬುದು. ಲೀಲಾವತಿಯನ್ನು ಒಂಟಿಯಾಗಿ ಬಿಟ್ಟಿರುವುದರಲ್ಲಿ ಅವರಿಗೆ ಯಾವ ಅಧೈರ್ಯವಿರಧಿದ್ದರೂ, ಪೂರ್ವಾಚಾರದ ಹೆಣ್ಣಾದ ತಾಯಿ ಗಂಗಮ್ಮ ಬೆಳೆದ ಮಗಳನ್ನು ಹಾಗೆಲ್ಲ ಪರ ಊರಿನಲ್ಲಿ ಒಂಟಿಯಾಗಿ ಬಿಟ್ಟಿರುವ ವಿಷಯದಲ್ಲಿ-ತಮ್ಮ ಅಸಮ್ಮತಿಯನ್ನು ತೋರಿಸಿದುದಲ್ಲದೆ ಆ ಬಗ್ಗೆ ರಂಪವನ್ನೇ ಹೂಡಿದ್ದರು. ಅವರಿಗೆ ಮಗಳು ಕಾಲೇಜು ಕಲಿಯುವುದಕ್ಕಿಂತಲೂ, ಬೆಂಗಳೂರಿನಂತಹ ಪಟ್ಟಣವಲ್ಲಿ ಮಗಳನ್ನು ಸ್ವೇಚ್ಛೆಯಾಗಿ ಇರಲು ಬಿಡುವುದು ಹೆಚ್ಚಿನ ಅಪರಾಧವಾಗಿತ್ತು. 'ಹಾಗೊಂದು ವೇಳೆ ಲೀಲಾವತಿ ಕಾಲೇಜು ಸೇರುವುದೇ ಆದರೆ ಅವಳನ್ನು ಯಾರಾವರೂ ನೆಂಟರ ಮನೆಯಲ್ಲಿ ಬಿಡಿ, ಇಲ್ಲಾ ಅವಳಿಗೆ ಮೊದಲು ಮದುವೆಮಾಡಿ ಅನಂತರ ಕಾಲೇಜಿಗೆ ಕಳುಹಿಸಿ' ಎಂದು ಗಂಗಮ್ಮನವರು ಪಟ್ಟು ಹಿಡಿದರು. ಅವರಿಗೆ ಮೇಲ್ವಿಚಾರಕರು ಇಲ್ಲದ ಮೇಲೆ ಬೆಂಗಳೂರಿನಂತಹ ಊರಿನಲ್ಲಿ ಹುಡುಗಿಯನ್ನು ಬಿಟ್ಟರೆ ಕೆಟ್ಟುಹೋಗುತ್ತಾಳೆಂಬುದೇ ಭಯ. ಹೀಗಾಗಿ ಲೀಲಾವತಿ ಓದು ಮುಂದುವರಿಸುವ ಬಗ್ಗೆ ಅವರಿಗೆ ಪೂರ್ಣ ಅಸಮ್ಮತಿ. ವಿಶ್ವನಾಥರಾಯರಿಗೆ ಗಂಗಮ್ಮನ ಭೀತಿ ಕೇವಲ ಹುರುಳಿಲ್ಲದುದೆಂದು ಗೊತ್ತು.

ಯಾಕೆಂದರೆ ಮಗಳ ನಡೆನುಡಿಯ ಬಗ್ಗೆ ಅವರಿಗೆ ಅಷ್ಟೊಂದು ನಂಬಿಕೆ ಇತ್ತು. ಲೀಲಾವತಿ ಹುಡುಗತನದ ಚಪಲತೆ ಚಂಚಲತೆ ತೋರಿಸಿದರೂ ಅವಳ ನಡತೆಯ ಬಗ್ಗೆ ಶಂಕಿಸಬೇಕಾದ ಪ್ರಮೇಯ ವಿಲ್ಲವೆಂದು ಅವರಿಗೆ ಗೊತ್ತಿತ್ತು. ಅವಳೆಂದಿಗೂ ತನಗಿರುವ ಸ್ವಾತಂತ್ರ್ಯ ವನ್ನು ದುರುಪಯೋಗ ಪಡಿಸಿಕೊಳ್ಳುವ ವ್ಯಕ್ತಿಯಲ್ಲವೆಂಬ ಭರವಸೆ ಇತ್ತು. ಇವೇ ಭರವಸೆಯನ್ನು ಪತ್ನಿ ಗಂಗಮ್ಮನಿಗೆ ಸಿದ್ಧಪಡಿಸಿಕೊಡುವುದರಲ್ಲಿ ಮಾತ್ರ ಅವರು ಅಸಮರ್ಥರಾಗಿದ್ದರು ಏಕೆಂದರೆ ಅವರವರಲ್ಲಿ ಸಮರಸ ಕ್ಕಿಂತ ವಿರಸವೇ ಅಧಿಕವಾಗಿತ್ತು. ಒಬ್ಬರ ಮಾತು ಒಬ್ಬರಿಗೆ ಹಿತವಾಗು ತ್ತಿರಲಿಲ್ಲ. ಒಬ್ಬರ ಉಪದೇಶ, ಅಭಿಪ್ರಾಯ ಮತ್ತೊಬ್ಬರಿಗೆ ಹಿಡಿಯು ತ್ತಿರಲಿಲ್ಲ. ಮದುವೆಯ ಮಂಗಳಸೂತ್ರದಿಂದ ಅವರಿಬ್ಬರು ಗಂಡಹೆಂಡಿ ರಾಗಿ ಕೂಡಿಸಲ್ಪಟ್ಟಿದ್ದರೂ ಗಂಡ ಹೆಂಡಿರಲ್ಲಿ ಇರಬೇಕಾದ ಯಾವ ಬಗೆಯ ಮಧುರ ಬಾಂಧವ್ಯ ಅವರಲ್ಲಿ ಇರಲಿಲ್ಲ. ಹೀಗಿರುವಲ್ಲಿ ಮಗಳ ಕಾಲೇಜಿನ ವಿದ್ಯಾಭ್ಯಾಸದ ವಿಷಯದಲ್ಲಿ ಅವರು ಒಮ್ಮತಕ್ಕೆ ಬರುವುದು ಸಾಧ್ಯವೇ ಇರಲಿಲ್ಲ.

ವಿಶ್ವನಾಥರಾಯರು ಮಗಳನ್ನು ಕಾಲೇಜಿಗೆ ಸೇರಿಸುವ ಬಗ್ಗೆ ಒಂದು ನಿಶ್ಚಿತ ನಿರ್ಣಯಕ್ಕೆ ಬಂದಿದ್ದರೂ ಮಗಳನ್ನು ಮೈಸೂರಿನ ಕಾಲೇಜಿಗೆ ಕಳು ಹಿಸಬೇಕೆ? ಇಲ್ಲ ಬೆಂಗಳೂರಿನ ಕಾಲೇಜಿಗೆ ಕಳುಹಿಸಬೇಕೆ? ಎಂಬ ಪ್ರಶ್ನೆ ಬಾಧಿಸುತ್ತಿತ್ತು. ಬೆಂಗಳೂರಿನಲ್ಲಾದರೆ, ವಾರಕ್ಕೊಮ್ಮೆ ತಾವು ನೋಡಿ ಕೊಂಡು ಬರಬಹುದಾಗಿತ್ತು. ಮೈಸೂರಿನಲ್ಲಾದರೆ ತನ್ನ ಪ್ರೀತಿಯ ತಂಗಿಯಾದ ಕನಕಲಕ್ಷ್ಮಮ್ಮನವರು ಲೀಲಾವತಿಯ ಮೇಲ್ವಿಚಾರ ನೋಡಿ ಕೊಳ್ಳಬಹುದು. ಅಲ್ಲದೆ ಓದುವವರಿಗೆ ಬೆಂಗಳೂರಿಗಿಂತ ಮೈಸೂರು ನಗರವೇ ಉತ್ತಮ. ಈ ವಿಷಯ ಇತ್ಯರ್ಥ ಮಾಡಲಾರದೆ ಎರಡು ಕಾಲೇಜುಗಳಿಗೂ ಅಪ್ಲಿಕೇಷನ್ ಹಾಕಿ, ಕಾಲೇಜು ಆರಂಭವಾಗುವುದನ್ನೇ ಎದುರು ನೋಡುತ್ತಾ ಕುಳಿತಿದ್ದಾಗ, ಮೈಸೂರಿನಿಂದ ವಿಶ್ವನಾಥರಾಯರಿಗೆ ಕರೆ ಬಂದಿತ್ತು—ಅದು ಮದುವೆಯ ಕರೆ. ಕನಕಲಕ್ಷ್ಮಮ್ಮನ ಎರಡನೆಯ ಹುಡುಗಿಗೆ ಮದುವೆ ನಿಶ್ಚಯವಾಗಿ, ಸಕುಟುಂಬ ಪರಿವಾರಸಮೇತರಾಗಿ

ಮದುವೆಗೆ ಬಂದು ವಧೂವರರನ್ನು ಆಶೀರ್ವದಿಸಿ ತಮ್ಮ ಮನಸ್ಸಂತೋಷ ಪಡಿಸಬೇಕೆಂದು ಲಗ್ನಪತ್ರಿಕೆ ಕಳುಹಿಸಿ, ಆದರದ ಪತ್ರವನ್ನು ಸಹ ಬರೆದಿದ್ದರು. ತಂಗಿಯನ್ನುನೋಡಿ ಬಹಳ ಕಾಲವಾದುದರಿಂದ ವಿಶ್ವನಾಥರಾಯರು ಮದುವೆಗೆ ಹೋಗಿ ಬರಲು ನಿಶ್ಚಯಿಸಿದರು. ಅವರು ಜೊತೆಯಲ್ಲಿ ಮಗಳನ್ನೂ ಕರೆದೊಯ್ದರು. ಮದುವೆಗೆ ಹೋಗಲು ಮನಸ್ಸಿಲ್ಲದಿದ್ದ ಗಂಗಮ್ಮ ಹಲವು ಕಾರಣಗಳನ್ನು ಮುಂದುಮಾಡಿಕೊಂಡು ಮನೆಯಲ್ಲೇನಿಂತುಬಿಟ್ಟರು.

ಮದುವೆಗೆ ವಿಶ್ವನಾಥರಾಯರು ಮಗಳೊಡನೆ ಬಂದುದನ್ನು ಕಂಡು ಕನಕಲಕ್ಷ್ಮಮ್ಮನವರು ಹಿರಿಹಿರಿ ಹಿಗ್ಗಿದರು. ವಿಶ್ವನಾಥರಾಯರು ಅಪರೂಪಕ್ಕೆ ಬಂದುದರಿಂದ ಎಲ್ಲರೂ ಅವರನ್ನು ಉಪಚರಿಸುವವರೇ ಆದರು. ವಿಶ್ವನಾಥರಾಯರು ಮದುಮಕ್ಕಳಿಗೆ ತಮ್ಮ ಯೋಗ್ಯತೆಗೆ ಅನುಗುಣವಾದ ಉಡುಗೊರೆಯನ್ನೇ ಇತ್ತರು. ಹುಡುಗಿಗೆ ಒಂದು ಜತೆ ಚಿನ್ನದ ಬಳೆ. ಹುಡುಗನಿಗೆ ಒಂದು ಸವರನ್ನಿನ ಉಂಗುರ ಓದಿಸಿದರು. ಅವರ ಔದಾರ್ಯವನ್ನು ಕಂಡು ಮದುವೆಗೆ ಬಂದಿದ್ದವರೆಲ್ಲ ಅವರನ್ನು ಕೊಂಡಾಡಿದರು. ವಿಶ್ವನಾಥರಾಯರಿಗೆ ಈ ಉಡುಗೆರೆ ಏನು ಲೆಖ್ಖ. ಅವರು ಸಂಪಾದಿಸುವ ಕಾಲಕ್ಕೆ ಎರಡು ಕೈಯಲ್ಲಿಯೂ ಸಂಪಾದಿಸಿದ್ದರು. ಅವರು ಕೆಲಸಕ್ಕೆ ಸೇರಿದಲಾಗಾಯಿತು ಇದುವರೆಗೆ ಸಂಬಳದ ಒಂದು ಕಾಸನ್ನೂ ಸಂಸಾರಕ್ಕೆಂದು ಖರ್ಚುಮಾಡಿರಲಿಲ್ಲ. ತಾಲ್ಲೂಕು ಆಫೀಸಿನಲ್ಲಿ ಮೇಲು ಸಂಪಾದನೆಗೆ ಕಡಿಮೆಯೆ? ಅಲ್ಲಿ ಶಾಕಾಯಲವಣಾಯವಿಲ್ಲದೆ ಯಾವ ಕೆಲಸವೂ ನಡೆಯದು. ವ್ಯವಹಾರ ಚತುರರಾದ ವಿಶ್ವನಾಥರಾಯರಿಗೆ ಹಣ ಕೂಡಿಸಲು ಒಂದು ಮಾರ್ಗವೆ? ಸಂಪಾದನೆ ಇರುವಾಗ ಕಾಸಿಗೆ ಕಾಸು ಕೂಡಿಟ್ಟು ಕೆಲಸದಿಂದ ನಿವೃತ್ತಿಯಾದ ಮೇಲೆ ಆರಾಮವಾಗಿ ವಿಶ್ರಾಂತಿಸುಖ ಅನುಭವಿಸಬೇಕೆಂಬುದೇ ಅವರ ಆಶಯವಾಗಿತ್ತು. ಅವರು ತಮ್ಮ ಅಧಿಕಾರ ನಡೆಯುವಾಗ ಎಷ್ಟು ಸಾಧ್ಯವೋ ಅಷ್ಟೂ ಗಳಿಸಿ, ಅನಂತರ ಬೆಂಗಳೂರಿನಲ್ಲೋ ಅಥವಾ ಮೈಸೂರಿನಲ್ಲೋ ಮನೆಯೊಂದನ್ನು ಕೊಂಡುಕೊಂಡು, ಶ್ರೀರಂಗಪಟ್ಟಣದ ನಾಲೆಯ ಬಳಿ ನಾಲ್ಕು ಎಕರೆ ತರಿ ಜಮೀನನ್ನು ಕೊಂಡುಕೊಂಡು, ಮಗಳೊಡನೆ ಸಂತೃಪ್ತ ವಿಶ್ರಾಂತಿ ಜೀವನ

ನಡಸಬೇಕೆಂಬುದೇ ಅವರ ಅಭೀಷ್ಟವಾಗಿತ್ತು. ಹೀಗಾಗಿ ಅವರು ಇದು ವರೆಗೆ ಎಲ್ಲಿಯೂ ಮನೆ, ಜಮೀನು ಮಾಡಲು ಹೋಗಿರಲಿಲ್ಲ. ಅದು ಏನಿದ್ದರೂ ತಮಗೆ ರಿಟೈರ್ ಆದ ಮೇಲೆ, ಲೀಲಾವತಿಯ ಓದು ಮುಗಿದ ಮೇಲೆ—ಎಂದುಕೊಂಡು ಕೆಲಸದಿಂದ ನಿವೃತ್ತಿಯಾಗಲಿರುವ ದಿನಕ್ಕಾಗಿ ಎದುರುನೋಡುತ್ತಾ ಕುಳಿತಿದ್ದರು. ಅವರು ರಿಟೈರ್ ಆಗಲು ಇನ್ನು ಐದಾರು ವರ್ಷಗಳು ಇದ್ದುದರಿಂದ ಆ ಬಗ್ಗೆ ಅಷ್ಟಾಗಿ ಹಚ್ಚಿಕೊಂಡಿರಲಿಲ್ಲ. ಮದುವೆಯ ಗಡಿಬಿಡಿ ಕೊಂಚ ಕಡಿಮೆಯಾದ ಮೇಲೆ, ಒಂದು ದಿನ ಲೋಕಾಭಿರಾಮವಾಗಿ ಮಾತನಾಡುತ್ತಾ ಕನಕಲಕ್ಷ್ಮಮ್ಮನವರು ಹೇಳಿದರು. "ನೀನೇನಣ್ಣ ಇಡೀ ಸರಕಾರವೇ ನಿನ್ನ ತಲೆಯ ಮೇಲೆ ನಿಂತಿರುವಂತೆ ತಿಳಿದಿದ್ದಿ. ಅಲ್ಲ........, ಎಷ್ಟು ದಿನಕ್ಕೆ ಬಂತು ನೀನು ಈ ಕಡೆ ತಲೆ ಇಟ್ಟು? 'ಏನು ಕನಕ ಹೇಗಿದ್ದೀಯ?' ಎಂದು ಬಂದು ವಿಚಾರಿಸ ದಿದ್ದರೂ ತಿಂಗಳಿಗೋ ಎರಡು ತಿಂಗಳಿಗೋ ಒಂದು ಕಾಗದ ಬರೆದು ಕ್ಷೇಮ ಸಮಾಚಾರ ತಿಳಿಸಲು ಆಗದ ಅದೆಂತಹ ರಾಜಕಾರ್ಯವಪ್ಪ ನಿನ್ನದು! ಈಗ ಏನೋ ದೊಡ್ಡ ಮನಸ್ಸು ಮಾಡಿ ಬಂದಿದ್ದಿ....ಆಗ ಶ್ರೀಮತಿಯ ಮದುವೆಗೆ ಬಂದಿದ್ದೋನು ಈಗ ಶರಾವತಿಯ ಮದುವೆಗೆ ಬಂದಿದ್ದಿ— ಆರು ವರ್ಷಗಳ ಮೇಲೆ" ಎಂದು ಅಣ್ಣನನ್ನು ಹಾಸ್ಯಮಾಡಿದರು.

"ಎಲ್ಲಮ್ಮ ಹೀಗೆಯೇ ಅದೂ ಇದೂ ಕೆಲಸಗಳು. ಸರಕಾರಿ ಕೆಲಸ ವೆಂದರೆ ಏನೆಂದು ನಿನಗೇನು ಗೊತ್ತು ಹೇಳು! ಸುಮ್ಮನೆ ಬರಲಿಲ್ಲವೆಂದು ಆಕ್ಷೇಪಣೆ ಮಾಡುತ್ತೀ........ಹೋಗಲಿ....ನಾನು ಬರದಿದ್ದರೂ ನಮ್ಮ ಶಾಮಣ್ಣ ನವರಾತ್ರಿಗೆ ಬಂದಿದ್ದನಲ್ಲ....ಅವನು ನಿಮ್ಮ ಕ್ಷೇಮ ಸಮಾಚಾರ ವನ್ನೆಲ್ಲ ತಿಳಿಸಿದ........"

"ಈ ಬಾರಿ ಮದುವೆಗೆ ನೀನು ಬರುವುದಂತೂ ನನಗೆ ಖಾತ್ರಿ ಇರಲಿಲ್ಲ. ಕರೆತರಲು ಯಾರನ್ನಾದರೂ ಕಳುಹಿಸುವ ಬದಲು ಕಾಗದ ಬರೆಯ ಬೇಕಾಯಿತು. ಯಾಕೆಂದರೆ ಮದುವೆ ನಿಶ್ಚಯವಾದದ್ದು ಹಾಗೆ. ಎಲ್ಲ ಇದ್ದಕ್ಕೆ ಇದ್ದಂತೆ ಗೊತ್ತಾಯಿತು ನೋಡು....ಹೀಗಾಗಿ ನಿಮ್ಮೂರಿಗೆ ಯಾರೂ ಬರಲಾಗಲಿಲ್ಲ."

“ ಕಂಕಣ ಬಲ ಒದಗಿ ಬಂದರೆ ಎಲ್ಲವೂ ಹಾಗೆಯೇ. ಈ ಕ್ಷಣದಲ್ಲಿ ಮದುವೆ ಗೊತ್ತಾಗಿ, ಇನ್ನೊಂದು ಕ್ಷಣದಲ್ಲಿ ಮದುವೆ ನಡೆದೇಹೋಗುತ್ತೆ– ಅದು ಯಾರಿಗೂ ಕಾಯುತ್ತ ನಿಲ್ಲುವುದಿಲ್ಲ. ಆದರೆ ಕಂಕಣ ಬಲವಿಲ್ಲದಿದ್ದ ಮೇಲೆ ಯಾರು ಎಷ್ಟು ಜಪ್ಪಯ್ಯ ಅಂದರೂ ಏನೂ ಆಗುವುದಿಲ್ಲ. ನಡೆಯುತ್ತಿರುವ ಮದುವೆ ಎಷ್ಟೋ ಬಾರಿ ನಿಂತು ಹೋಗುತ್ತದೆ” ಎಂದರು. ವಿಶ್ವನಾಥರಾಯರು.

“ ಹೋಗಲಿ....ನಿಮ್ಮ ಲೀಲೂಗೆ ಎಲ್ಲಾದರೂ ಗಂಡು ನೋಡಿದ್ದೀಯಾ ? ಅವಳಿಗೂ ನಮ್ಮ ಶರಾವತಿಯ ವಯಸ್ಸಲ್ಲವೇ ? ” ಎಂದರು ಏನನ್ನೋ ಜ್ಞಾಪಿಸಿಕೊಂಡು.

“ ಹೌದು ಲೀಲಾ ಶರಾವತಿಗಿಂತ ಮೂರು ತಿಂಗಳು ದೊಡ್ಡವಳು. ನಾಳೆ ಜುಲೈಗೆ ಹದಿನಾರು ತುಂಬಿ ಹದಿನೇಳಾಗುತ್ತೆ.”

“ಹಾಗಾದರೆ ಅವಳಿಗೂ ಮದುವೆ ಮಾಡಬೇಕು–ಸಾಲದೇ ವಯಸ್ಸು.”

ಹೂಂ ಗುಟ್ಟಿದರು ವಿಶ್ವನಾಥರಾಯರು ಅನ್ಯಮನಸ್ಕರಾಗಿ.

“ ಯಾಕೆ ಏನೋ ಯೋಚನೆ ಮಾಡುತ್ತಿದ್ದಿ ? ಎಲ್ಲಾದರೂ ವರಾನ್ವೇಷಣೆ ನಡಸಿದ್ದೀಯಾ ?........ನಿಂಗೇನಪ್ಪ–ಕಡಿಮೆ. ಹುಡುಗಿ ಚಿನ್ನದ ಬೊಂಬೆ ಹಾಗೆ ಇದ್ದಾಳೆ. ಗುಣ, ರೂಪ, ಕುಲ, ಗೋತ್ರ ಒಂದೂ ನೋಡುವಂತಿಲ್ಲ. ನೀನು ಮದುವೆ ಮಾಡ್ತೀನಿ ಅಂದರೆ ಕಾಲಿಗೆ ಬಿದ್ದು ಮದುವೆ ಮಾಡಿಕೊಳ್ಳೋ ಜನ ಸಿಕ್ಕುತ್ತಾರೆ ” ಎಂದರು ಕನಕಲಕ್ಷಮ್ಮ.

ಈ ಮಾತು ಕೇಳಿ ವಿಶ್ವನಾಥರಾಯರಿಗೆ ನಗು ಬರದೆ ಇರಲಿಲ್ಲ.

“ ಹೌದಮ್ಮ, ದೇವರ ದಯೆಯಿಂದ ಅವನು ಯಾವುದಕ್ಕೂ ಕಡಿಮೆ ಮಾಡಿಲ್ಲ. ಮನಸ್ಸು ಮಾಡಿದರೆ ಈ ಕ್ಷಣ ಲೀಲನ ಮದುವೆ ಮಾಡಬಹುದು. ಆದರೆ ಮದುವೆ ಮಾಡಿಕೊಳ್ಳುವ ಹುಡುಗಿಗೇ ಮದುವೆ ಇಷ್ಟವಿಲ್ಲದಿರೋವಾಗ ಯಾರಿಗೆ ಮದುವೆ ಮಾಡೋದು ? ”

“ ಈಗಿನ ಕಾಲದ ಹುಡುಗಿಯರೇ ಹೀಗೆ–ನಮ್ಮ ಶರಾವತಿಯೂ ಮದುವೆಯ ಮಾತು ತೆಗೆದಾಗ ಹೀಗೆಯೇ ಆಡುತ್ತಿದ್ದಳು. ಅವಳ ಮಾತನ್ನು ನಾವು ಕೇಳಿದೆವೇನು ? ಮಕ್ಕಳು—ಅವಕ್ಕೇನು ತಿಳಿಯುತ್ತೆ. ಹಿರಿಯರಾದ

ನಾವು ಮಕ್ಕಳ ಹಿತಕ್ಕೆ ಯಾವುದು ಸರಿ, ಯಾವುದು ಒಪ್ಪು ಎಂದು ನಿರ್ಧರಿಸಿ, ಅದರಂತೆ ನಡೆಯಬೇಕೇ ಹೊರತು ಹುಡುಗರಿಗೇ ಈ ವಿಷಯ ನಿರ್ಧರಿಸಲು ಬಿಟ್ಟರೆ—ಯಾವ ಕೆಲಸವೂ ನಡೆಯುವುದಿಲ್ಲ. ಇಷ್ಟಕ್ಕೂ ಹುಡುಗರಿಗೆ ಈ ವಿಷಯಗಳೇನು ತಾನೇ ಗೊತ್ತು ? ಯಾರೋ ಮದುವೆ ಬೇಡವೆಂದರೆ ತಾವೂ ಮದುವೆ ಬೇಡುವೆನ್ನುತ್ತಾರೆ. ಯಾಕೆ? ಏನು? ಎಂದು ವಿಚಾರಿಸುವ ವಿವೇಕವೆಲ್ಲಿದೆ ಅವರಿಗೆ?....ಅವರ ಮಾತೊಂದು ಮಾತೆ !"

" ನಮ್ಮ ಲೀಲು ವಿಷಯ ನಿಂಗಿನ್ನೂ ಗೊತ್ತಿಲ್ಲ. ಅದಕ್ಕೇ ನೀನು ಹೀಗೆ ಹೇಳುತ್ತಿದ್ದಿ. ಅವಳು ಎಲ್ಲ ಹುಡುಗಿಯರಂತೆ ಸರಿಸಿಕೊಂಡು ಹೋಗುವ ಹುಡುಗಿ ಅಲ್ಲ. ಅವಳದೇ ಒಂದು ತರಹ. ಅವಳು ಬೇಡ ವೆಂದದ್ದನ್ನು ಬೇಕೆಂದು ಅನ್ನಿಸಲು ಆ ಪರಬ್ರಹ್ಮನಿಂದಲೂ ಸಾಧ್ಯವಿಲ್ಲ. ಅಷ್ಟೊಂದು ಮೊಂಡು ಹಠದ ಹುಡುಗಿ ಅವಳು. ಅವಳು ಮದುವೆಗೆ ಒಪ್ಪದೇ ಇರುವಾಗ ಅವಳನ್ನು ಬಲವಂತಪಡಿಸುವ ಬದಲು ಅವಳು ಮದು ವೆಗೆ ಒಪ್ಪುವ ತನಕ ಕಾಯುವುದೇ ಸರಿಯಾದ್ದೆಂದು ನಾನೆಂದೋ ನಿರ್ಧಾ ರಕ್ಕೆ ಬಂದಿದ್ದೇನೆ. ಆದುದರಿಂದಲೇ ನಾನು ಮತ್ತೆ ಮದುವೆಯ ಪ್ರಸ್ತಾಪ ಮಾಡಿಲ್ಲ. ನೋಡೋಣ, ಅವಳೆಷ್ಟು ದಿನ ಹೀಗಿರುತ್ತಾಳೋ........"

"ಅವಳಿಷ್ಟು ಮೊಂಡು ಹಠಮಾರಿ ಹುಡುಗಿಯಾಗಲು ನೀನೇ ಕಾರಣ. ಒಬ್ಬಳೇ ಮಗಳೆಂದು ಮುದ್ದುಮಾಡಿ ಕೆಡಿಸಿ ಬಿಟ್ಟಿದ್ದಿ—ಹಿರಿಯರ ಮಾತನ್ನು ಈಗಲೇ ಇಷ್ಟು ಉಪೇಕ್ಷೆಮಾಡುವ ಹುಡುಗಿ—ಮುಂದೆ ಹೇಗೆ ಬದುಕು ತ್ತಾಳೋ ನಾ ಕಾಣೆ. ಆಗಲಿ. ನಾನೂ ಒಂದು ಬಾರಿ ಅವಳನ್ನು ಕೇಳಿಯೇ ಬಿಡುತ್ತೇನೆ—ಬಹುಶಃ ಲೀಲು ನಾವು ಊಹಿಸುವಷ್ಟು ಕೆಟ್ಟಿರಲಾರಳು."

ಎಂದು ಪಕ್ಕದ ಕೋಣೆಯಲ್ಲಿ ಇತರರೊಂದಿಗೆ ಹರಟೆ ಕೊಚ್ಚುತ್ತಾ ಕುಳಿತಿದ್ದ ಲೀಲಾವತಿಯನ್ನು ಕೂಗಿದರು. ಲೀಲಾವತಿ ಆಡುತ್ತಿದ್ದ ಮಾತನ್ನು ಅಷ್ಟಕ್ಕೇ ನಿಲ್ಲಿಸಿ ಹೊರಗೆ ಬಂದು,

" ಕರೆದಿರಾ ಅತ್ತೆ ? " ಎಂದಳು ರಾಗವಾಗಿ.

" ಹೂಂ, ಒಂದು ನಿಮಿಷ ಇಲ್ಲಿ ಬಂದು ಹೋಗು ಮಗು—ನಿಮ್ಮ ತಂದೆ ಏನೋ ಹೇಳಬೇಕೂಂತ ಇದ್ದಾರೆ" ಎಂದು ಲೀಲಾವತಿಯನ್ನು

ಬಳಿಗೆ ಬರಮಾಡಿಕೊಂಡು, ಅವಳ ತಲೆಯನ್ನು ಪ್ರೀತಿಯಿಂದ ನೇವರಿಸಿದರು.

" ಏನಣ್ಣ ಅದು ? "

" ನಿಮ್ಮ ಅತ್ತೆ ಅದೇನೋ ನಿನ್ನ ಕೂಡ ಮಾತನಾಡಬೇಕು ಅಂದಳು—" ಎಂದು ಅಷ್ಟಕ್ಕೇ ಮಾತು ನಿಲ್ಲಿಸಿ ಕನಕಲಕ್ಷ್ಮಮ್ಮನ ಮುಖ ನೋಡುತ್ತ ಕುಳಿತರು. ಕನಕಲಕ್ಷ್ಮಮ್ಮ ಆ ನೋಟದ ಇಂಗಿತ ಅರಿತು ಕೊಂಡು—ನೇರವಾಗಿ ವಿಷಯ ಪ್ರಸ್ತಾನಕ್ಕೆ ಬಂದರು.

" ಮಗು ! ವಿಶ್ವ ನಿನ್ನ ಮದುವೆ ವಿಷಯ ತಲೆಯಲ್ಲಿ ತುಂಬಿಕೊಂಡು, ಅದನ್ನು ನಿನ್ನೊಂದಿಗೆ ಖಡಾ ಖಂಡಿತವಾಗಿ ಹೇಳಲಾರದೆ ತುಂಬಾ ವ್ಯಾಕುಲಗೊಂಡಿದ್ದಾನೆ. ನಾವು ಹಿರಿಯರೆಲ್ಲ ಹೇಳುವುದು—ಮಾಡುವುದು ನಿನ್ನ ಒಳ್ಳೆಯದಕ್ಕೇ ಎಂದು ತಿಳಿ ಮಗು; ನೀನು ಬೇರೆಯಲ್ಲ, ನಮ್ಮ ಶರಾವತಿ ಬೇರೆಯಲ್ಲ—ನೋಡು, ಹೆಣ್ಣು ಹುಡುಗಿಯರೇ ಆಗಲಿ, ಗಂಡು ಹುಡುಗರೇ ಆಗಲಿ ಅವರಿಗೆ ಸರಿಯಾದ ವಯಸ್ಸಿನಲ್ಲಿ ಮದುವೆ ಮುಂಜಿ ಮಾಡಿದರೇನೇ ಚೆನ್ನ. ಕಾಲ ಮಿಂಚಿದ ಮೇಲೆ ಮದುವೆ, ಮುಂಜಿ ಮಾಡಿದರೆ ಅದರಲ್ಲಿ ಸ್ವಾರಸ್ಯವೇ ಇರುವುದಿಲ್ಲ. ನೋಡು ನಮ್ಮ ಶರಾವತಿ—ಅವಳೂ ನಿನ್ನ ವಯಸ್ಸಿನವಳೇ. ನಮ್ಮ ಮಾತಿನಂತೆ ಮದುವೆಗೆ ಒಪ್ಪಿ, ಮದುವೆಯಾಗಿಲ್ಲವೆ ? ಅದರಂತೆ ನೀನೂ ಮದುವೆಗೆ ಒಪ್ಪಿಗೆ ಕೊಡಬಾರದೆ ? ಮದುವೆಯಿಂದ ಶರಾವತಿಗೆ ಏನು ತೊಂದರೆಯಾಗಿದೆ ? ಮದುವೆಯಾದರೆ ನಿನಗೆ ಯಾವ ರೀತಿಯಿಂದಲೂ ತೊಂದರೆಯಾಗುವುದಿಲ್ಲ....

" ನನಗಿನ್ನೂ ಓದುವ ಆಸೆ ಇದೆ........"

ಲೀಲಾವತಿ ದಿಟ್ಟವಾಗಿ ಹೇಳಿದಳು ಕನಕಲಕ್ಷ್ಮಮ್ಮನ ಎಲ್ಲ ಮಾತನ್ನು ಕೇಳಿಕೊಂಡು.

" ನಿನಗೆ ಓದುವ ಆಸೆ ಇದ್ದರೆ ಓದಬೇಡವೆಂದು ಯಾರು ಹೇಳುತ್ತಾರೆ ? ಮದುವೆಯಾದರೆ ನಿನ್ನ ಓದಿಗೆ ಭಂಗ ಬರುವುದೆಂದು ತಿಳಿದಿರುವೆಯಾ ! ಎಂದಿಗೂ ಇಲ್ಲ. ನೀನು ಒಪ್ಪಿಗೆ ಕೊಟ್ಟರೆ, ನಿನ್ನ ಓದು ಬರಹಗಳಲ್ಲಿ ಆಸಕ್ತಿ ಇರುವ ಗಂಡನ್ನೇ ಹುಡುಕಿ ತರುತ್ತೇವೆ. ಮದುವೆಯೊಂದು ಆಗಲಿ—ಅನಂತರ ನೀನು ಎಷ್ಟು ಬೇಕೋ ಅಷ್ಟೂ ಓದುವೆಯಂತೆ."

ಲೀಲಾವತಿ ಆ ಮಾತಿಗೆ ಆ ಕ್ಷಣ ಉತ್ತರ ಹೇಳದೆ ನೆಲದ ಕಡೆ ನೋಡುತ್ತಾ ಅನ್ಯಮನಸ್ಕಳಾಗಿ ಕುಳಿತಳು. ತನ್ನ ಮಾತು ಲೀಲಾವತಿಯ ಮನಸ್ಸಿಗೆ ನಾಟದೆ ಎಂದು ತಿಳಿದುಕೊಂಡು ಕನಕಲಕ್ಷ್ಮಮ್ಮನವರು ಮುಂದು ವರೆಸಿದರು.

"ನೋಡು ಮಗು. ವಿಶ್ವನಿಗೂ ವಯಸ್ಸಾಯಿತು. ಇರುವ ಒಬ್ಬ ಮಗಳನ್ನು ಸತ್ಪಾತ್ರನಿಗೆ ಧಾರೆ ಎರೆದುಕೊಟ್ಟು ತನ್ನ ಜವಾಬ್ದಾರಿಯನ್ನು ಕೆಳಗಿಡುವ ಆಸೆ ಅವನಿಗೆ. ಅಲ್ಲದೆ ವಯಸ್ಸಾದ ಮಕ್ಕಳನ್ನು ಮದುವೆ ಮಾಡದೆ ಮನೆಯಲ್ಲಿ ಇಟ್ಟುಕೊಂಡರೆ ಹೆತ್ತವರ ಮನಸ್ಸಿಗೆ ಸುಖವಿರುವು ದಿಲ್ಲ............"

"ನಾನು ಕಾಲೇಜಿಗೆ ಸೇರಬೇಕೆಂದಿದ್ದೇನಲ್ಲಾ........" ಎಂದಳು ಬೇರೇನೂ ತೋಚದೆ ಲೀಲಾವತಿ. ತಂದೆಯ ಎದುರು ಖಡಾಖಂಡಿತವಾಗಿ ನುಡಿವಂತೆ ಅತ್ತೆಯ ಮುಂದೆ ನುಡಿಯುವ ಧೈರ್ಯ ಅವಳಿಗೆ ಯಾಕೋ ಇರಲಿಲ್ಲ.

"ಮತ್ತೆ ಅದೇ ಮಾತನ್ನು ಹೇಳುತ್ತಿದ್ದೀಯಲ್ಲ—ನೀನು ಕಾಲೇಜು ಸೇರುವುದನ್ನು ಯಾರು ಬೇಡವೆಂದರು. ಮಹರಾಯಳಾಗಿ ಕಾಲೇಜು ವಿದ್ಯಾಭ್ಯಾಸ ಮುಗಿಸು. ಈಗೇನು ಎಷ್ಟೋ ಜನ ಹುಡುಗಿಯರು ಮದುವೆ ಯಾಗಿ ಕಾಲೇಜಿನಲ್ಲಿ ಓದುತ್ತಿದ್ದಾರೆ. ಅಂತಹದರಲ್ಲಿ ನೀನು ಕಾಲೇಜಿಗೆ ಹೋದರೆ ಏನು ತಪ್ಪು. ಮದುವೆಯ ಪಾಡಿಗೆ ಮದುವೆ ನಡೆಯಲಿ—ಕಾಲೇ ಜಿನ ಪಾಡಿಗೆ ಕಾಲೇಜು ನಡೆಯಲಿ. ನೀನೂ ಎಷ್ಟು ಬೇಕೋ ಅಷ್ಟು ಓದು.... ಬಿ.ಎ. ಅಲ್ಲದಿದ್ದರೆ ಎಂ.ಎ. ಮಾಡು...."

ಈ ವಿಷಯ ಹೇಳುವಷ್ಟು ಸುಲಭವಲ್ಲವೆಂದು ಲೀಲಾವತಿಗೂ ಗೊತ್ತು. ಕನಕಲಕ್ಷ್ಮಮ್ಮನವರು ಒಮ್ಮೆ ಲೀಲಾವತಿ ಮದುವೆಯಾದಳೆಂದರೆ– ಅವಳ ಓದಬೇಕೆನ್ನುವ ಎಲ್ಲ ಉತ್ಸಾಹ ಕಾಲಕ್ರಮದಲ್ಲಿ ತಣ್ಣಗಾಗಿ, ಗೃಹಸ್ಥಾಶ್ರಮದಲ್ಲಿ ಪರ್ಯವಸಾನವಾಗುತ್ತದೆಂದು ಅವರಿಗೆ ಗೊತ್ತಿತ್ತು. ಹೀಗಾಗಿ ಕಾರ್ಯಸಾಧಿಸಿಕೊಳ್ಳುವ ಹಂಚಿಕೆಯಲ್ಲಿ ಆ ಮಾತು ಹೇಳಿದ್ದರು. ಕನಕಲಕ್ಷ್ಮಮ್ಮನವರ ಸವಿಮಾತಿಗೆ ಮರುಳಾಗುವ ಹುಡುಗಿ ಲೀಲಾವತಿಯಾಗಿ ರಲಿಲ್ಲ. ಅವಳು ಸದ್ಯಕ್ಕೆ ಹಾಕಿದ್ದ ಗಾಳದಿಂದ ಪಾರಾಗಲು ಹೇಳಿದಳು.

"ನನಗೆ ನನ್ನ ಓದು ಮುಗಿಯೋ ತನಕ ಮದುವೆಯಾಗಲು ಇಷ್ಟವಿಲ್ಲ."

"ಅಂದರೇ ಇಂಟರ್ ಮಿಡಿಯೆಟೇ?"

ಅಲ್ಲವೆಂದು ಲೀಲಾವತಿ ತಲೆಯಲ್ಲಾಡಿಸಿದಳು.

"ಆಗಲಿ—ನಿನ್ನ ಇಷ್ಟದಂತೆಯೇ ಆಗಲಿ. ನಿನ್ನ ಓದು ಮುಗಿಯುವ ತನಕ ನಿನ್ನ ಮದುವೆ ಸುದ್ದಿಗೆ ಬರುವುದಿಲ್ಲ. ನಿನ್ನ ಓದು ಮುಗಿದ ಮೇಲಾದರೂ ಮದುವೆ ಮಾಡಿಕೊಳ್ಳುತ್ತಿ ತಾನೆ?"

—ವಿಶ್ವನಾಥರಾಯರು ನಡುವೆ ತಲೆ ಹಾಕಿ ನುಡಿದರು.

ಸದ್ಯಕ್ಕೆ ಲೀಲಾವತಿಗೆ ಹೋದ ಉಸಿರು ಮತ್ತೆ ಬಂದಂತಾಯಿತು. ಅವಳು ವಿಶ್ವನಾಥರಾಯರನ್ನೂ, ಕನಕಲಕ್ಷ್ಮಮ್ಮನನ್ನೂ ತೃಪ್ತಿಯಿಂದೊಮ್ಮೆ ನೋಡಿ, ಅಲ್ಲಿ ಇದ್ದಷ್ಟೂ ಅವರು ತನ್ನನ್ನು 'ಪೀಡಿಸು'ವರೆಂದು ಅಲ್ಲಿಂದ ಕಾಲ್ತೆಗೆದಳು.

ಲೀಲಾವತಿ ಅಲ್ಲಿಂದ ಕಾಲ್ತೆಗೆದ ಮೇಲೆ ಕನಕಲಕ್ಷ್ಮಮ್ಮ ಅಣ್ಣನನ್ನು ಟೀಕಿಸಿದರು:

"ನಿನಗೆ ಮಗಳ ಮೇಲೆ ಮೋಹ ಹೆಚ್ಚು. ಒಂದು ಮಾತು ಗಟ್ಟಿಯಾಗಿ ಹೇಳಿದರೆ ಅವಳ ಮನಸ್ಸೆಲ್ಲಿ ನೋಯುವುದೋ ಎಂದು ನೀನು ಇರುವುದರಿಂದಲೇ ಲೀಲಾವತಿಗೆ ನಿನ್ನ ಮಾತು—ಅಪಥ್ಯವಾಗಿರುವುದು."

ಈ ಮಾತು ವಿಶ್ವನಾಥರಾಯರಿಗೆ ಪ್ರಿಯವೇ ಆಯಿತು. ಅವರು ಆ ಮಾತು ಅಕ್ಷರಶಃ ನಿಜವೆನ್ನುವಂತೆ ಗಹಗಹಿಸಿ ನಕ್ಕರು.

"ಅಂದ ಹಾಗೆ ಲೀಲಾ ಕಾಲೇಜು ಸೇರಬೇಕೆಂದಿದ್ದಾಳೆ. ಅವಳಿಗೆ ಶಾಮಣ್ಣನಂತೆಯೇ ತಾನೂ ಕಾಲೇಜ್‌ನಲ್ಲಿ ಕಲಿಯಬೇಕೆಂಬ ಆಸೆ. ಏನೋ ಹುಡುಗಿ ಆಸೆ ಪಡುತ್ತಾಳೆ—ಓದಲಿ, ಎಂದು ನಾನೂ ಸುಮ್ಮನಿದ್ದೇನೆ...." ಎಂದರು ವಿಶ್ವನಾಥರಾಯರು, ಏನೋ ಜ್ಞಾಪಿಸಿಕೊಂಡು.

"ಓದಿಕೊಳ್ಳಲಿ ಬಿಡು—ಓದುವ ವಯಸ್ಸಿನಲ್ಲಿ ಎಲ್ಲರಂತೆ ಅವಳಿಗೂ ಓದುವ ಆಸೆ. ಈಗೇನು ಗಂಡುಹುಡುಗರ ಕಾಲೇಜು—ನಮ್ಮ ದಿವಾಕರ ಓದುವ ಕಾಲೇಜಿನಲ್ಲಿ ಹುಡುಗರ ಸಂಖ್ಯೆಯಷ್ಟೆ ಹುಡುಗಿಯರೂ ಓದು

ತ್ತಿದ್ದಾರಂತೆ. ಹೀಗಿರುವಲ್ಲಿ ಲೀಲಾವತಿ ಓದಿದರೇನು ತಪ್ಪು ? .... ಆದರೆ ಅವಳು ಕಾಲೇಜು ಸೇರುವುದಾದರೆ ಬೆಂಗಳೂರಿಗೆ ಬರಬೇಕು .... ಅವಳ ಊಟವಸತಿಗೆ ಏನು ಮಾಡಿದ್ದಿ ?

" ಹಾಸ್ಟೆಲಿನಲ್ಲಿ ಬಿಡಬೇಕೆಂದಿದ್ದೇನೆ."

" ನೀನೇನಾದರೂ ತಿಳಿ—ಹೆಣ್ಣು ಹುಡುಗಿಯರನ್ನು ಮೇಲ್ವಿಚಾರಕರಿಲ್ಲದೆ ಸ್ವೇಚ್ಛೆಯಾಗಿ ಬಿಡುವುದು ನನಗೆ ಅಷ್ಟಾಗಿ ಒಪ್ಪಿಗೆಯಾಗುವುದಿಲ್ಲ. ಒಂಟಿಯಾಗಿ ಬಿಟ್ಟರೆ ಹುಡುಗಿಯರು ಕೆಡುತ್ತಾರೆಂದಲ್ಲ. ಕೆಡುವ ಹುಡುಗಿಯರು ಎಲ್ಲಿದ್ದರೆ ತಾನೆ ಕೆಡುವುದಿಲ್ಲ. ಆದರೂ ಹಾಸ್ಟೆಲ್ ಜೀವನವೆಂದರೆ ಅವರದೇ ಒಂದು ತರಹ. ಅಲ್ಲಿ ಅನೇಕ ಬಗೆಯ ಆಕರ್ಷಣೆಗಳಿವೆ. ಇವು ಹುಡುಗಿಯರ ಮನಸ್ಸನ್ನು ಕೆಡಿಸಿ, ಸಂಸಾರದ ವಿಷಯದಲ್ಲಿ ಆಸಕ್ತಿ ಕಡಿಮೆಯಾಗುವಂತೆ ಮಾಡಿಬಿಡುತ್ತವೆ. ಆದುದರಿಂದ ನನ್ನ ಅಭಿಪ್ರಾಯ ಕೇಳುವುದಾದರೆ ಲೀಲಾವತಿಯನ್ನು ಹಾಸ್ಟೆಲಿನಲ್ಲಿ ಬಿಡುವುದು ಬೇಡವೇ ಬೇಡ. ಅವಳು ಕಾಲೇಜು ಸೇರಲು ಬೆಂಗಳೂರೇ ಅನ್ನುವುದೇನು ? ಇಲ್ಲಿನ ಮಹಾರಾಣಿ ಕಾಲೇಜಿಗೆ ಸೇರಬಹುದಲ್ಲ—ನಮ್ಮ ಮನೆಯಲ್ಲಿಯೇ, ಇದ್ದು ಎಷ್ಟು ವರ್ಷ ಬೇಕೋ ಅಷ್ಟು ವರ್ಷ ಓದಿಕೊಳ್ಳಲಿ. ನಾನು ಬೇಡವೆನ್ನುವುದಿಲ್ಲ. ಹೇಗೂ ದಿವಾಕರ ಬೇರೆ ಕಾಲೇಜು ಓದುತ್ತಿದ್ದಾನೆ. ತಿಳಿಯದೆ ಇರುವುದನ್ನು ಅವನಿಂದಲೇ ಹೇಳಿಸಿಕೊಳ್ಳಬಹುದು. ಒಂದು ಖಾಯಿಲೆ ಕಸಾಲೆಯಾದರೆ ನಾವು ನೋಡಿಕೊಳ್ಳಬಹುದು........" ಎಂದಳು.

ವಿಶ್ವನಾಥರಾಯರಿಗೆ ಈ ಸಲಹೆ ಒಪ್ಪಿಗೆಯಾಗಿ ಆ ಕ್ಷಣಕ್ಕೆ ಹಾಗೆಯೇ ಆಗಲಿ ಎಂದು ಬಿಡುವ ಆಸೆ. ಆದರೆ ಮಗಳನ್ನೊಮ್ಮೆ ಕೇಳಿ ಅನಂತರ ಯಾವುದನ್ನೂ ತಿಳಿಸುವುದು ಶ್ರೇಯಸ್ಕರವೆಂದು ಅವರು, ಯೋಚಿಸಿ ತಿಳಿಸುವುದಾಗಿ ಹೇಳಿದರು.

" ಇದು ಯಾವ ದೊಡ್ಡ ವಿಷಯವೆಂದು ಯೋಚಿಸಿ ಹೇಳಬೇಕು. ಲೀಲಾವತಿಗೆ ಬೆಂಗಳೂರಿಗಿಂತ ಈ ಊರೇ ಹೆಚ್ಚು ಹಿಡಿಸಿದೆ,ಎಂದು ಅವಳೇ ಹೇಳಿದ್ದಾಳೆ. ಅಲ್ಲದೆ ಈ ಮನೆಯೇನು ಅವಳಿಗೆ ಬೇರೆ ಮನೆಯೇ...."

" ಸುಮ್ಮನೆ ನಿಮಗೇಕೆ ಇಲ್ಲದ ತೊಂದರೆ ಕೊಡಬೇಕು ? "

" ಇದೀಗ ಚೆನ್ನಾಯಿತು? ಬೆನ್ನಿನಲ್ಲಿ ಬಿದ್ದ ಅಣ್ಣನ ಮಗಳಿಗೆ ಒಂದು ತುತ್ತು ಅನ್ನವಿಲ್ಲವೆ ನನ್ನ ಮನೆಯಲ್ಲಿ? ಯಾಕೋ ಬರಬರುತ್ತಾ ನಿನ್ನ ಸ್ವಭಾವವೇ ಬದಲಾಗುತ್ತಿದೆ. ನಾವು ದೂರವಿದ್ದಮಾತ್ರಕ್ಕೆ ನಮ್ಮ ಪ್ರೀತಿ ವಿಶ್ವಾಸಗಳು ದೂರವಾಗಿವೆ ಎಂದು ತಿಳಿದೆಯಾ ಹೇಗೆ? ಇನ್ನೊಮ್ಮೆ ಆ ಮಾತು ಎತ್ತಿದರೆ ನನಗೆ ತುಂಬಾ ನೋವಾಗುತ್ತೆ. ಲೀಲಾವತಿಯನ್ನು ಒಂದು ಮಾತು ಕೇಳಬೇಕೆಂದು ನಿನ್ನ ಆಸೆ ಏನೋ....ಅವಳ ಆಸೆ ನನಗೆ ಗೊತ್ತು, ಕೇಳು ಹೇಳುತ್ತೇನೆ. ಈ ಮನೆಯಲ್ಲಿ ಅವಳಿಗೆ ಎಷ್ಟು ಸ್ವಾತಂತ್ರ್ಯ ಇದೆ. ಮದುವೆಯಲ್ಲಿ ಅವಳು ಎಷ್ಟು ಓಡಾಡಿದ್ದಾಳೆ—ಎಂಬುದನ್ನು ನೀನೇ ಕಣ್ಣಾರ ಕಂಡಿದ್ದಿ. ಈ ಮನೆಯಲ್ಲಿ ಏನಾದರೂ ಸಂಕೋಚವಿದ್ದರೆ ಅದು ನಿನಗೇ ಹೊರತು, ಲೀಲಾವತಿಗಲ್ಲ—ಅವಳೆಂದೋ ನಮ್ಮ ಮನೆಯವ ಳಾಗಿಬಿಟ್ಟಿದ್ದಾಳೆ! "

" ಹಾಗಾದರೆ ಲೀಲಾವತಿನ್ನ ನಿನ್ನ ಕೊನೆ ಮಗ ದಿವಾಕರನಿಗೇ ಮದುವೆಮಾಡಿಕೊಂಡು ಬಿಡು. ಹೇಗೂ ಲೀಲಾ ನಿಮ್ಮ ಮನೆಯವಳೇ ಆಗಿದ್ದಾಳೆ. ಆಗ ಈ ಮನೆ ಅವಳದೇ ಆಗಿಬಿಡುತ್ತೆ...." ಎಂದರು ವಿಶ್ವನಾಥರಾಯರು.

ಈ ಮಾತು ಕೇಳಿ ವಿಸ್ಮಯಾನಂದ ಸೂಚಕವಾದ ನಸುನಗೆಯೊಂದು ಕನಕಲಕ್ಷ್ಮಮ್ಮನವರ ಮುಖದ ಮೇಲೆ ತೇಲಿತು. ಅವರ ಕಣ್ಣ ಹೊಳಪು ಅವರ ಕುತೂಹಲವನ್ನು ಪ್ರತಿಬಿಂಬಿಸುತ್ತಿತ್ತು. ಅವರ ಮನಸ್ಸು ತನ್ನ ಮಗ ಲೀಲಾವತಿಯ ಕೈ ಹಿಡಿಯುವಷ್ಟು ಪುಣ್ಯಶಾಲಿಯೇ ಎಂದು ಪ್ರಶ್ನಿಸಿತು. ಯಾಕೆಂದರೆ ಲೀಲಾವತಿಯನ್ನು ಕನಕಲಕ್ಷ್ಮಮ್ಮ ಎಲ್ಲ ರೀತಿಯಲ್ಲಿ ಮೆಚ್ಚಿ ಕೊಂಡಿದ್ದರು. ಇಂತಹ ರೂಪವತಿಯೂ, ಸತ್ಕುಲಪ್ರಸೂತೆಯೂ, ಸದ್ಗುಣ ಶಾಲಿನಿಯೂ ಆದ ಲೀಲಾವತಿಯನ್ನು ತಮ್ಮ ಮನೆಗೆ ಭಾಗ್ಯದೇವತೆಯಾಗಿ ಬರಮಾಡಿಕೊಳ್ಳುವ ಭಾಗ್ಯ ತಮಗೆ ಇದೆ ಎಂದು ತಿಳಿದಾಗ ಅವರ ಸಂತೋ ಷಕ್ಕೆ ಮೇರೆಯಿಲ್ಲದಾಯಿತು. ಅವರ ಬಹಳ ಕಾಲದ ಕನಸು ನನಸಾಗು ವಂತೆ ತೋರಿತು. ಲೀಲಾವತಿ ಹುಟ್ಟಿದಲಾಗಾಯಿತು ಕನಕಲಕ್ಷ್ಮಮ್ಮನವ ರಿಗೆ, ತಮ್ಮ ಎರಡನೆಯ ಮಗ ದಿವಾಕರನಿಗೆ ಅವಳನ್ನು ತಂದುಕೊಂಡು

ತವರು ಮನೆಯ ನೆಂಟಸ್ಥನ ಉಳಿಸಬೇಕೆಂಬ ಆಸೆ ಇತ್ತು. ಇದನ್ನು ಒಂದೆರಡು ಬಾರಿ, ಮಗನ ಮುಂದೆಯೂ, ವಿಶ್ವನಾಥರಾಯರ ಮುಂದೆಯೂ ವ್ಯಕ್ತಪಡಿಸಿದ್ದರು. ಆದರೆ ಆಗಿನ್ನೂ ಇಬ್ಬರೂ ಚಿಕ್ಕವರಾಗಿದ್ದುದರಿಂದ ಈ ವಿಷಯ ಇಷ್ಟು ಪ್ರಾಮುಖ್ಯತೆಗೆ ಬಂದಿರಲಿಲ್ಲ. ಈಗ ದಿವಾಕರ ಎರಡನೆ ವರ್ಷದ ಸೈಕಾಲಜಿ ಬಿ.ಎ. ಆನರ್ಸ್ ನಲ್ಲಿ ಓದುತ್ತಿದ್ದ. ಅವನು ಎಲ್ಲ ರೀತಿಯಿಂದ ಲೀಲಾವತಿಗೆ ಅನುರೂಪನಾದ ವರನಾಗಿದ್ದ. ಈ ವಿಷಯ ವನ್ನು ಕೂಲಂಕಷವಾಗಿ ವಿಚಾರಮಾಡಿದ್ದ ವಿಶ್ವನಾಥರಾಯರಿಗೆ ತಮ್ಮ ಮಗಳನ್ನು ದಿವಾಕರನಿಗೆ ಕೊಡುವ ವಿಷಯದಲ್ಲಿ ತುಂಬಾ ಆಸಕ್ತಿ ಇತ್ತು. ಅವರು ಮೈಸೂರಿಗೆ ಬಂದಲಾಗಾಯಿತು—ದಿವಾಕರನ ಗುಣ, ನಡೆನುಡಿ ಗಳನ್ನು ಕಣ್ಣಿಟ್ಟು ನೋಡುತ್ತಾ ಬಂದಿದ್ದರು. ಎಲ್ಲ ವಿಷಯದಲ್ಲಿ ದಿವಾ ಕರ ಅವರ ಪ್ರಶಂಸೆಗೆ ಪಾತ್ರನಾಗಿದ್ದ. ಹೀಗಾಗಿ ಈ ಪ್ರಸಂಗದಲ್ಲಿ ಮನದ ಲ್ಲಿದ್ದ ಆಸೆಯನ್ನು ನಾಲಗೆ ಹೊರಗೆ ಹಾಕಿತ್ತು.

"ನೋಡು, ವಿಶ್ವ ನನ್ನ ಮನಸ್ಸಿನಲ್ಲಿ ಇರುವುದನ್ನು ನೀನು ಅದು ಹೇಗೆ ಕಂಡುಕೊಂಡೆಯೋ ಕಾಣೆ. ನಿಮ್ಮ ಲೀಲಾನ್ನ ನಮ್ಮ ಮನೆಗೆ ತಂದು ಕೊಳ್ಳಬೇಕೆಂದು ನಮ್ಮ ಮನೆಯವರೆಲ್ಲರ ಆಸೆ. ಆದರೆ ನೀನು ಈ ಮೊದಲೇ ಬೇರೆಲ್ಲಿಯಾದರೂ—ಲೀಲೂಗೆ ವರ ಗೊತ್ತುಮಾಡಿಬಿಟ್ಟಿ ದ್ದೀಯೋ ಎಂದು ನಾನು ಒಮ್ಮೆಲೇ ಈ ಪ್ರಸ್ತಾಪಮಾಡಲಿಲ್ಲ. ಈಗ ನಿನ್ನ ಆಸೆಯೂ, ನಮ್ಮ ಆಸೆಯೂ ಒಂದೇ ಆಗಿದ್ದು, ರೋಗಿಬಯಸಿದ್ದು ವೈದ್ಯ ಹೇಳಿದ್ದೂ ಒಂದೇ ಆದಂತಾಯಿತು." ಎಂದರು ಉಬ್ಬಿನಿಂದ.

ಇದೇ ವೇಳೆಗೆ ಕನಕಲಕ್ಷ್ಮಮ್ಮನ ಯಜಮಾನರು—ರಾಘವೇಂದ್ರರಾ ಯರು ಅಲ್ಲಿಗೆ ಬಂದರು. ಕನಕಲಕ್ಷ್ಮಮ್ಮ ತನ್ನ ಗಂಡನಿಗೆ ವಿಶ್ವನಾಥರಾಯರ ಅಭಿಪ್ರಾಯ ತಿಳಿಸಿದರು.

ಅವರು "ಎಲ್ಲವೂ ಋಣಾನುಬಂಧ. ದೈವ ಸಂಕಲ್ಪದಲ್ಲಿ ನಿಮ್ಮ ಹುಡುಗಿ ನಮ್ಮ ಮನೆ ಸೇರಬೇಕೆಂದಿದ್ದರೆ-ಅದನ್ನು ತಪ್ಪಿಸಲು ಯಾರಿಂದಾಗು ತ್ತದೆ....ಮುಖ್ಯ ದೇವರು ನಮ್ಮೆಲ್ಲರ ಆಸೆಯನ್ನೂ ನಡಸಿಕೊಡಬೇಕು." ಎಂದರು.

ಈ ಮಾತು ಕೇಳಿ ವಿಶ್ವನಾಥರಾಯರು ಮನಸ್ಸಿನಲ್ಲಿ ಮಂಡಿಗೆ ತಿನ್ನುತ್ತಾ ಅಲ್ಲಿಂದ ಹೊರಟರು.

ಮದುವೆಯ ಶಾಸ್ತ್ರಗಳೆಲ್ಲ ಮುಗಿದಿದ್ದುವು. ಬೀಗರು ಊರಿಗೆ ಹೊರಡುವ ತಯಾರಿ ನಡಸಿದರು. ದಿವಾಕರ ಬೀಗರನ್ನು ಬೀಳ್ಕೊಡುವ ಮುನ್ನ ಅಪರೂಪಕ್ಕೆ ಬಂದಿರುವ ಎಲ್ಲರನ್ನೂ ಬೃಂದಾವನಕ್ಕೆ ಕರೆದುಕೊಂಡು ಹೋಗುವ ಆಸೆ ವ್ಯಕ್ತಪಡಿಸಿದ. ಹೆಣ್ಣಿನಕಡೆಯ ಅನೇಕರು ಬೃಂದಾವನ ನೋಡಿರಲಿಲ್ಲವಾದುದರಿಂದ—ದಿವಾಕರನ ಸೂಚನೆಗೆ ಬೆಂಬಲವಿತ್ತರು. ದಿವಾಕರ ಪೂರ್ವಭಾವಿಯಾಗಿ ಸ್ಪೆಷಲ್ ಬಸ್ಸು ಒಂದನ್ನು ಗೊತ್ತು ಮಾಡಿದ. ಮನೆಯಿಂದಲೇ ಮೊಸರು ಅನ್ನ, ಹುಳಿಯನ್ನಗಳನ್ನು ಮಾಡಿಸಿ ತೆಗೆದುಕೊಂಡು ಹೊರಟರು. ವೇಳೆಗೆ ಸರಿಯಾಗಿ ಮನೆಯವರೆಲ್ಲ ಬಸ್ಸಿನಲ್ಲಿ ಕುಳಿತು, ಬೃಂದಾವನ ಸೇರಿದರು. ಬೃಂದಾವನಕ್ಕೆ ಬಂದೊಡನೆಯೇ ಬಂದಿದ್ದ ಜನ ತಮ್ಮ ವಯಸ್ಸು, ಅಭಿರುಚಿಗಳಿಗೆ ಅನುಗುಣವಾಗಿ, ಬೇರೆ ಬೇರೆ ಗುಂಪುಗಳಾಗಿ ಒಡೆದರು. ಕೆಲವು ಹರೆಯದ ಗಂಡಸರು ಅವರವರ ಹೆಂಡತಿಯರನ್ನು ಕಟ್ಟಿಕೊಂಡು ಹೊರಟರು. ಸಮವಯಸ್ಸಿನ ಹುಡುಗ ಹುಡುಗಿಯರು ಒಂದುಗೂಡಿ ನಡೆದರು. ಇಳಿ ವಯಸ್ಸಿನ ಮುತ್ತೈದೆಯರು, ವೃದ್ಧರು ಒಂದೊಂದು ಗುಂಪಾದರು. ಮದುಮಗ, ಮದುಮಗಳು—ಇವರಿಗೆ ಹಿಮ್ಮೇಳವಾಗಿ ದಿವಾಕರ ಲೀಲಾವತಿಯರು ಒಂದು ಗುಂಪಾಗಿ ನಡೆದರು. ಅವರು ಬೃಂದಾವನದ ಸೊಬಗಿನ ದೃಶ್ಯಗಳನ್ನು ನೋಡುತ್ತಾ, ಹರಟುತ್ತಾ ನಡೆದರು. ಇಂದು ದಿವಾಕರ ಎಲ್ಲರಿಗಿಂತ ಹೆಚ್ಚಿನ ಉತ್ಸಾಹದಲ್ಲಿ ಇದ್ದ. ಈ ಪ್ರವಾಸದ ಮೇಲ್ವಿಚಾರಕನೆಂದಲ್ಲ. ಅವನಿಗೆ ತಾನು ಲೀಲಾವತಿಯ ಜತೆಯಲ್ಲಿ ಇರುವುವೇ ಹೆಮ್ಮೆಯುಂಟುಮಾಡಿತ್ತು. ಲೀಲಾವತಿಯ ಮಾತು, ಅವಳ ಸಾನ್ನಿಧ್ಯ ಅವನಿಗೆ ಸ್ವರ್ಗಲೋಕದ ಸುಖ ತಂದು ಕೊಟ್ಟಿತ್ತು. ಅದೇನು ಕಾರಣವೋ ಏನೋ ಮದುವೆಗೆ ಲೀಲಾವತಿ ಬಂದ ಲಾಗಾಯಿತು—ಅವಳ ಸಹವಾಸದಲ್ಲಿ ತಾನಿರಬೇಕೆನ್ನುವ ಬಯಕೆ ದಿವಾಕರನಿಗೆ ಆಗುತ್ತಿತ್ತು. ಮದುವೆಯ ಮನೆಯಲ್ಲಿ ಗಂಡಿನ ಕಡೆಯುವರಿಗೆ ಉಪಚಾರ ಮಾಡುವುವರಲ್ಲಿ, ಅವರಿಗೆ ಬೇಕಾದ ತಿಂಡಿತೀರ್ಥಗಳನ್ನು ಒದಗಿಸು

ವುದರಲ್ಲಿ, ಆರತಕ್ಷತೆಗೆ ಆಹ್ವಾನಿತರನ್ನು ಇದಿರುಗೊಳ್ಳುವುವರಲ್ಲಿ, ಗಂಡಸರ ಮೇಲ್ವಿಚಾರಣೆ ದಿವಾಕರ ವಹಿಸಿದ್ದರೆ, ಹೆಂಗಸರ ಮೇಲ್ವಿಚಾರಣೆ ಲೀಲಾವತಿ ವಹಿಸಿದ್ದಳು. ಅವಳಿಗೆ ಯಾರೂ ಯಾವ ಕೆಲಸವನ್ನು ಹೇಳದಿದ್ದರೂ ಅವಳಾಗಿ ಅವಳು ಮೇಲೆ ಬಿದ್ದು ಆ ಕೆಲಸಗಳನ್ನು ಗಂಟುಹಾಕಿಕೊಂಡಿದ್ದಳು. ಇದರಿಂದ ದಿವಾಕರನಿಗೆ ಲೀಲಾವತಿಯ ವಿಷಯದಲ್ಲಿ ಅಪೂರ್ವವಾದ ಪ್ರೀತಿಗೌರವಗಳು ಉಂಟಾಗಿದ್ದುವು. ಬಾರಿ ಬಾರಿಗೆ ಒದಗುತ್ತಿದ್ದ ಸಾಮೀಪ್ಯದಿಂದ ಅವರಲ್ಲಿ ಅಪರಿಚಿತಭಾವ ಅಳಿದು ಬಹುಕಾಲದ ಸ್ನೇಹದ ಸಲಿಗೆ ಬಂದು ಬಿಟ್ಟಿತ್ತು. ಅವರು ಸದಾಕಾಲ ಒಟ್ಟಿಗೆ ಇರುತ್ತಿದ್ದರು. ಯಾವ ಕೆಲಸವನ್ನಾಗಲಿ ಮಾಡಲು ಇಬ್ಬರೂ ಸಿದ್ಧರಾಗಿ ಮುಂದೆ ಬರುತ್ತಿದ್ದರು. ಅವರ ಹೊಂದಾಣಿಕೆ, ಸಲಿಗೆ ನಡೆವಳಿಕೆಯನ್ನು ಕಂಡು, ಕೆಲವರು ಭಾವಿಸತಿಪತಿಯರ ಚಿತ್ರ ಕಂಡರೆ, ಮತ್ತೆ ಕೆಲವರು ಆದರ್ಶ ಅಣ್ಣತಂಗಿಯರ ಚಿತ್ರ ಕಂಡರು. ಹೇಗೇ ಇರಲಿ–ಇವರಿಬ್ಬರು ಎಲ್ಲರ ದೃಷ್ಟಿಪಥಕ್ಕೆ ಬಿದ್ದಿದ್ದರು.

ಚೆದುರಿದ್ದ ಗುಂಪು ಫಲಾಹಾರಕ್ಕೆಂದು ಮತ್ತೆ ಒಂದುಗೂಡಿತು. ಎಲ್ಲರೂ ಕೈತುತ್ತು ಹಾಕಿಸಿಕೊಂಡು, ತಂದುದನ್ನ ಮುಗಿಸಿ, ಮತ್ತೆ ಸುತ್ತಾಟಕ್ಕೆ ಹೊರಟರು. ದಿವಾಕರ ಲೀಲಾವತಿ ಹಾಗೂ ನೂತನ ದಂಪತಿಗಳು ಬೃಂದಾವನದ ಉತ್ತರ ಪಾರ್ಶ್ವದ ತಟಾಕದ ಬಳಿಗೆ ಬಂದಾಗ ಅಲ್ಲಿದ್ದ ದೋಣಿಯಲ್ಲಿ ಕುಳಿತುಕೊಳ್ಳುವ ಅಪೇಕ್ಷೆಯಾಗಿ, ನಾಲ್ವರೂ ದೋಣಿ ಏರಿದರು.

ದೋಣಿ ಸಾಗಿತು. ಅಲ್ಲಿಯ ತನಕ ಲೀಲಾವತಿ ದೋಣಿಯಲ್ಲೇ ಕುಳಿತಿರಲಿಲ್ಲ. ಅವಳು ಜಲಪ್ರಯಾಣ ಮಾಡುತ್ತಿದ್ದುದು ಇದೇ ಮೊದಲನೆಯ ಸಲ. ಜತೆಗೆ ದಿವಾಕರ ಬೇರೆ ಸ್ಥಳ ಸಂಕೋಚದಿಂದ, ಲೀಲಾವತಿಗೆ ತೀರಸನಿಯದಲ್ಲಿಯೇ ಕುಳಿತಿದ್ದ. ಇದರಿಂದ ಲೀಲಾವತಿ ಪುಳುಕಿತಳಾಗಿದ್ದಳು. ಚೆಂಗುಲಾಬಿಯ ಅವಳ ಮುಖ ಉದ್ವೇಗದಿಂದ ರಕ್ತವರ್ಣ ತಳೆದಿತ್ತು. ಅವಳ ಸುಂದರವದನ ನೀರಿನಲ್ಲಿ ಇನ್ನಿಷ್ಟು ಸುಂದರವಾಗಿ ಪ್ರತಿಫಲಿಸಿತು. ದಿವಾಕರನಿಗೆ ಲೀಲಾವತಿಯ ಆ ಚೆಲುವು, ಆ

ಗೆಲವು ಮನೋಮೋಹಕವಾಗಿ ಕಂಡಿತು. ಅವನಿಗೆ ಲೀಲಾವತಿ ಆ ಕ್ಷಣಕ್ಕೆ ಸ್ವರ್ಗಲೋಕದ ಅಪ್ಸರೆಯಂತೆ ತೋರಿದಳು. ಅವನು ಭಾವೋನ್ಮಾದದಲ್ಲಿ ಅವಳನ್ನೇ ನೋಡುತ್ತಾ ಏನೋ ಕನಸು ಕಾಣುತ್ತಾ ಕುಳಿತ. ಅವನ ದೃಷ್ಟಿಯನ್ನೊಮ್ಮೆ ಲೀಲಾವತಿಯ ದೃಷ್ಟಿ ಸಂಧಿಸಿದಾಗ, ತನ್ನನ್ನು ತನ್ಮಯನಾಗಿ ನೋಡುತ್ತಾ ಕುಳಿತ ದಿವಾಕರನನ್ನು ನೋಡಿ ಅವಳ ಮುಖದಲ್ಲಿ ಮಂದಹಾಸ ಮೂಡಿತು. ಅದಕ್ಕೆ ಮಾರುತ್ತರವೆಂಬಂತೆ ದಿವಾಕರನ ಮುಖದಲ್ಲಿಯೂ ಮಂದಹಾಸದ ಸುಳಿ ಎದ್ದಿತು. ಅವನು ಏನನ್ನೋ ನೆನೆಸಿಕೊಂಡು ತನ್ನಲ್ಲೇ ನಕ್ಕ. ಆದರೆ ಆ ನಗುವನ್ನು ಕಂಡ ಲೀಲಾವತಿ, ತಾನು ಆ ತನಕ ಕೆಳಗಿನ ದನಿಯಲ್ಲೇ ಹೇಳುತ್ತಿದ್ದ ಹಾಡನ್ನು ನಿಲ್ಲಿಸಿ, ದಿವಾಕರ ನಕ್ಕಿದ್ದು ಏಕೆಂದು ಕತ್ತು ಕೊಂಕಿಸಿ ಪಿಸುದನಿಯಲ್ಲಿ ಕೇಳಿದಳು. ದಿವಾಕರ ಏನೂ ಇಲ್ಲವೆಂದು ಕತ್ತು ಕೊಂಕಿಸಿದ.

" ಹಾಗಾದರೆ ನೀವು ನಕ್ಕಿದ್ದು ಯಾಕೆ ? "

" ನೀನು ಏನೋ ಹಾಡಿಕೊಳ್ಳುತ್ತಿದ್ದೆ. ಅದನ್ನು ಕೊಂಚ ಗಟ್ಟಿಯಾಗಿ ಹೇಳಿದರೆ ನಾವುಗಳೂ ಕೇಳಿ ಕೃತಾರ್ಥರಾಗುತ್ತೇವೆ. "

" ಓ ! ಅದೋ........!" ಎಂದು ಮುಗುಳುನಕ್ಕು,

" ಏನೂ ಹಾಡುತ್ತಿರಲಿಲ್ಲ. ಕುವೆಂಪುರವರ ' ದೋಣಿ ಸಾಗಲಿ ಮುಂದೆ ಹೋಗಲಿ, ದೂರ ತೀರವ ಸೇರಲಿ ' ಗೀತ ನೆನಪಾಯಿತು. ಹಾಗೇ ಪಲುಕುತ್ತಿದ್ದೆ " ಎಂದಳು.

ಉಳಿದವರೂ ಲೀಲಾವತಿ ಹಾಡು ಹೇಳಬೇಕೆಂದು ಬಲವಂತ ಮಾಡಿದರು. ಆಗ ನಿರ್ವಾಹವಿಲ್ಲದೆ ಲೀಲಾವತಿ ಆ ಗೀತವನ್ನು ಸುಶ್ರಾವ್ಯವಾಗಿ ಹಾಡಿದಳು.

ಹಾಡು ಮುಗಿದ ಮೇಲೆ ತನ್ನ ಸಂತೋಷದ ಮೆಚ್ಚಿಕೆಯನ್ನು ಮೊದಲು ತೋರಿಸಿದವನೆಂದರೆ ದಿವಾಕರ. ಆ ಗೀತ, ಆ ಸನ್ನಿವೇಶ, ಅವನ ಮೇಲೆ ವಿಚಿತ್ರಪರಿಣಾಮವನ್ನುಂಟುಮಾಡಿತ್ತು. ಆ ಪರಿಣಾಮದ ಅರ್ಥವೇನು? ಅದು ತನ್ನನ್ನು ಎಲ್ಲಿಗೆ ಒಯ್ಯುವುದೆಂದು ಆ ಗಳಿಗೆಯಲ್ಲಿ ಅವನು ತಿಳಿಯದೆ ಹೋದ.

೩

ಮದುವೆಗೆಂದು ಬಂದಿದ್ದವರೆಲ್ಲರೂ ತಮ್ಮ ತಮ್ಮ ಅನುಕೂಲ ನೋಡಿಕೊಂಡು ತಮ್ಮೂರುಗಳಿಗೆ ಹೊರಟರು. ವಿಶ್ವನಾಥರಾಯರಿಗೆ ತಮ್ಮ ರಜ ಮುಗಿಯುತ್ತ ಬಂದುದರಿಂದ ಅವರೂ ಹೊರಟು ನಿಂತರು. ಹೊರಡುವ ಮುನ್ನ ಲೀಲಾವತಿಯು ಸದ್ಯಕ್ಕೆ ಸೋದರತ್ತೆಯ ಮನೆಯಲ್ಲಿಯೇ ಇದ್ದುಕೊಂಡು ಮಹಾರಾಣಿ ಕಾಲೇಜಿಗೆ ಸೇರಿಕೊಳ್ಳಬೇಕೆಂದು ನಿರ್ಣಯವಾಗಿದ್ದರೂ—ಕಾಲೇಜು ತೆರೆಯುವ ಹೊತ್ತಿಗೆ ಬಂದರಾಯಿತೆಂದು ಅವಳೂ ತಂದೆಯೊಡನೆ ಹೊರಬಿದ್ದಳು. ಇದನ್ನು ಕಂಡ ಕನಕಲಕ್ಷ್ಮಮ್ಮನವರು "ನೀನಿನ್ನೂ ನಾಲ್ಕು ದಿನವಿದ್ದು ಹೋಗಬಾರದೆ? ಹೋಗಿ ಅಲ್ಲೇನು ಮಾಡುತ್ತಿ. ಕಾಲೇಜು ತೆರೆಯುವ ಹೊತ್ತಿಗೆ ವಿಶ್ವನೇ ಬಂದು ನಿನ್ನ ಸರ್ಟಿಫಿಕೇಟ್, ಬಟ್ಟೆ ಬರೆ ತಂದುಕೊಡುತ್ತಾನೆ. ಅವನು ರಜವಿಲ್ಲವೆಂದು ಆತುರದಲ್ಲಿ ಹೋದರೆ, ಅವನ ಹಿಂದೆ ನೀನೇಕೆ ಹೋಗಬೇಕು?" ಎಂದು ಲೀಲಾವತಿಯ ಪ್ರಯಾಣಕ್ಕೆ ಅಡ್ಡ ಬಂದಿದ್ದರೂ, ಲೀಲಾವತಿಗೆ ತಂದೆಯನ್ನು ಬಿಟ್ಟು ಇರಲು ಮನವಾಗದೆ ಅವಳು ತಂದೆಯೊಂದಿಗೆ ಹೊರಡಲು ಹಠಮಾಡಿದಳು. ಮುಂದೆ ಕಾಲೇಜು ಆರಂಭವಾದ ಮೇಲೆ ತಾನು ತಂದೆಯಿಂದ ದೂರವಿರಬೇಕಾಗುವುದೆನ್ನುವ ವಿರಹ ಅವಳನ್ನು ಈಗಿನಿಂದಲೇ ಭಾದಿಸತೊಡಗಿತ್ತು. ಹೀಗಾಗಿ ಲೀಲಾವತಿ ಯಾರ ಮಾತನ್ನೂ ಲೆಕ್ಕಿಸದೆ ತಂದೆಯೊಡನೆ ಹೊರಟೇಬಿಟ್ಟಳು. ಹೊರಡುವ ಮುನ್ನ ಅವರ ಹಾಸಿಗೆ ಬಟ್ಟೆಗಳನ್ನು ಕಟ್ಟುವುದರಲ್ಲಿ ನೆರವಾಗುತ್ತಿದ್ದ ದಿವಾಕರನನ್ನು ನೋಡಿ ವಿನೋದವಾಗಿ ವಿಶ್ವನಾಥರಾಯರೆಂದರು.

"ದಿವೂ ನಿನ್ನ ಮದುವೆ ಹೋಳಿಗೆ ಯಾವಾಗ ಹಾಕಿಸುತ್ತೀಯಪ್ಪ?"

"ಹೋಳಿಗೆ ತಿನ್ನಲು ಮದುವೆಯೇ ಬೇಕೇ ಮಾವಯ್ಯ?"

"ಅಲ್ಲ ಕಾಣಯ್ಯ—ನಿನ್ನ ಮದುವೆಯ ಹೋಳಿಗೆ ನಾನು ಹೇಳಿದ್ದು."

"ಅದಿರಲಿ—ನಿಮ್ಮ ಮಗಳ ಮದುವೆಯ ಹೋಳಿಗೆ ಎಂದು ಹಾಕಿಸುತ್ತೀರಿ. ಅದನ್ನು ಮೊದಲು ಹೇಳಿ."

" ನೀವೆಲ್ಲ ಒಪ್ಪಿಗೆ ಕೊಟ್ಟ ದಿನವೇ."

" ಹೊಳೆಯ ನೀರಿಗೆ ದೋಣಿನಾಯಕನ ಅಪ್ಪಣೆಯೇ ಅನ್ನೋ ಹಾಗೆ ಮದುವೆಯ ಹೋಳಿಗೆಗೆ ನಮ್ಮ ಅಪ್ಪಣೆ ಯಾಕೆ ಬೇಕು ? "

" ಹೌದಪ್ಪ ಬೇಕು........ನೀವು ಒಪ್ಪದಿದ್ದರೆ ಹೋಳಿಗೆ ಎಲ್ಲಿ ? "

" ನಿಮ್ಮ ಮಾತು ಚೆನ್ನಾಗಿದೆ ಮಾವ. ಮದುವೆ ಮಾಡೋರು ನೀವು."

ಅವನ ಮಾತು ಪೂರೈಸುವ ಮುನ್ನ ವಿಶ್ವನಾಥರಾಯರು ನುಡಿದರು–

" ಮದುವೆಮಾಡಿಕೊಳ್ಳುವವರು ನೀವು........"

ದಿವಾಕರ ನಗುತ್ತಲೆಂದ :

" ನಾವೋ ಲೀಲಾವತಿಯೋ ? "

" ಇಬ್ಬರೂ."

" ಅಂದರೆ?"

" ನೀನೂ ಮತ್ತು ಲೀಲಾವತಿಯೂ ದೊಡ್ಡಮನಸ್ಸುಮಾಡಿದರೆ...."

" ಈಗ ಚೆನ್ನಾಯಿತು. ಹೋಳಿಗೆ ಹಾಕಿಸಿ ಮಾವ ಅಂದರೆ ನೀನೇ ನನ್ನ ಅಳಿಯನಾಗು ಅಂತೀರಲ್ಲಾ!"

" ಇದರಲ್ಲಿ ಏನು ತಪ್ಪು ? "

" ತಪ್ಪೂ ಇಲ್ಲ, ಸರಿಯೂ ಇಲ್ಲ. ಮುಖ್ಯ ಹೋಳಿಗೆಯ ಆಸೆಗೆ ನಿಮ್ಮ ಲೀಲಾವತೀನ ಮದುವೆ ಆಗಬೇಕೂಂತ ಅನ್ನಿ! "

ಎಂದು ದಿವಾಕರ ನಗೆಯಾಡಿದ. ಇದೇ ವೇಳೆಗೆ ಒಳಗೆ ಸೇರಿದ್ದ ಲೀಲಾವತಿ ಅಲ್ಲಿ ಹಠಾತ್ತನೆ ಕಾಣಿಸಿಕೊಂಡಳು. ಅವಳ ಕೈಯಲ್ಲಿ ತಂದೆಗೆಂದು ತಂದ ಕಾಫಿ ಲೋಟವಿತ್ತು.

"ದಿವೂ ನೀನು ಅದೆಲ್ಲಿ ಹೋಗಿಬಿಟ್ಟಿದ್ದಿ ? ನಾನು ಕಾಫಿ ಲೋಟ ತಗೊಂಡು ನಿನಗೋಸ್ಕರ ಎಲ್ಲೆಲ್ಲಿ ಹುಡುಕಿದೆ ಗೊತ್ತೆ? ನೀನು ಮಾವನ ಜತೆಯಲ್ಲಿ ಹರಟೆಗೆ ಕುಳಿತುಬಿಟ್ಟದ್ದಿ ಅಂತ ತಿಳೀಲಿಲ್ಲ." ಎಂದು ಟೀಕಿಸಿದಳು.

ವಿಶ್ವನಾಥರಾಯರು ಇನ್ನೂ ನಗೆಮಾತಿನ ಗುಂಗಿನಲ್ಲೇ ಇದ್ದವರು ಮಗಳ ಕಡೆ ನೋಡುತ್ತ ಹೇಳಿದರು.

" ಮದುವೆಗೆ ಮುಂಚೆಯೇ ಗಂಡನನ್ನ ಈ ರೀತಿ ತರಾಟೆಗೆ ತೆಗೆದುಕೊಂಡರೆ ಹೇಗೆ ಲೀಲಾ ? " ಎಂದರು ವಿನೋದವಾಗಿ.

" ಯಾರ ಮದುವೆ ? " ಮುಖ ಗಂಟಿಕ್ಕಿ ಲೀಲಾವತಿ ಕೇಳಿದಳು.

" ಯಾರ ಮದುವೆ ಅಂದರೆ—ಇನ್ನಾರ ಮದುವೆ? ನಿನ್ನ ಮದುವೆಯೇ!........"

" ನಿಮಗೆ ಮಾಡೋಕೆ ಬೇರೆ ಕೆಲಸವಿದ್ದರೆ ತಾನೇ. ಮೂರು ಹೊತ್ತೂ ಮದುವೆಯ ಮಾತು...."ಎಂದು ಹುಸಿಮುನಿಸುಮಾಡಿಕೊಂಡಳು.

" ನಮಗೆ ಇನ್ನು ಬೇರೆ ಏನು ಕೆಲಸವಿದೆ ಎಂದು ತಿಳಿದಿದ್ದಿ ? ಇದು ಮದುವೆಮನೆ ಕಣೇ....! "

" ಮದುವೆ ಮನೆಯಾದಾಕ್ಷಣಕ್ಕೆ ಬೇರೆ ಮಾತೇ ಇಲ್ಲವೇ ? "

" ಬೇರೆ ಮಾತು ಇನ್ನೇನು ಇದ್ದೀತು ? ಮದುವೆಯಾಗದವರಿಗೆ ಮದುವೆಯಾದವರು ಮಾಡುವ ಉಪದೇಶದ ವಿನಾ " ಈ ಮಾತು ಕೇಳಿ ಲೀಲಾವತಿಗೆ ಕೋಪವೂ ಬಂತು, ನಗೆಯೂ ಬಂತು.

" ಮಾವ, ನಿಮಗೆ ಯಾಕೋ ಮದುವೆಹುಚ್ಚು ಹಿಡಿದುಬಿಟ್ಟಿದೆ."

" ಹೌದು ಲೀಲೂ....ಸತ್ಯವನ್ನೇ ನುಡಿದಿರುವೆ. ನನಗೆ ನಿನ್ನ ಮದುವೆಯನ್ನು ನೋಡುವ ಹುಚ್ಚು ಹಿಡಿದಿದೆ."

" ಹಾಗಾದರೆ ನಿಮಗೆ ಹುಚ್ಚು ಬಿಡುವುದೇ ಇಲ್ಲ."

" ಯಾಕೆ ? "

" ನಾನು ಮದುವೆಯಾಗುವುದಿಲ್ಲ—ನಿಮಗೆ ಹುಚ್ಚು ಬಿಡುವುದಿಲ್ಲ."

" ನಮ್ಮ ದಿವಾನ ಬಿಟ್ಟು ಇನ್ನೊಬ್ಬರನ್ನು ಮದುವೆಯಾಗುವುದಿಲ್ಲವೆಂದು ತಾನೆ ನೀನು ಹೇಳುವುದು ?"

" ಥೂ ಹೋಗಿ ಮಾವ! ನಿಮಗೆ ನನ್ನ ಮಾತೆಲ್ಲ ತಮಾಷೆ ! " ಎಂದು ಹೇಳಿ ಕೈಯಲ್ಲಿದ್ದ ಕಾಫಿಲೋಟವನ್ನು ಕೈಗೆ ಎಂದಿನಂತೆ ಕೊಡದೆ, ಅವರ ಬಳಿಯಲ್ಲಿ ಇಟ್ಟು ಅಲ್ಲಿಂದ ಓಡಿಹೋಗಲು ನೋಡಿದಳು. ಆದರೆ ವಿಶ್ವನಾಥರಾಯರು ಓಡಿಹೋಗಲು ಬಿಡಬೇಕಲ್ಲ. ಅವರು ಮಗಳ ಕೈ ಹಿಡಿದು ನಿಲ್ಲಿಸಿ,

"ಅಮ್ಮಯ್ಯ ನಮ್ಮ ದಿವೂಗೂ ಒಂದು ಕಪ್ಪು ಹಾಗೇ ತಂದುಬಿಡಮ್ಮ. ಪಾಪ, ಅವನು ನಿನ್ನ ಕೆಲಸವೆಲ್ಲ ಮಾಡಿಕೊಟ್ಟು ದಣಿದಿದ್ದಾನೆ."

" ನಾನು ತರೋಲ್ಲ—ಬೇಕಿದ್ದರೆ ಒಳಗೆ ಹೋಗಿ ಕುಡೀಲಿ " ಎಂದಳು ನಿಷ್ಠುರವಾಗಿ.

" ಯಾಕೇ ಅವನ ಮೇಲೆ ಅಷ್ಟು ಸಿಟ್ಟು ? "

" ನಾನು ಲೋಟ ಹಿಡಿದುಕೊಂಡು ಕಾಲುಗಂಟೆ ಹುಡುಕಿದರೂ ಸಿಕ್ಕಲಿಲ್ಲ—" ಎಂದು ರಾಗ ತೆಗೆದಳು.

" ಈಗ ಸಿಕ್ಕಿದ್ದಾನಲ್ಲ ! "

" ಈಗ ಕಾಫಿ ಬೇಕಿದ್ದರೆ ಒಳಗೆ ಹೋಗಿ ಕುಡಿದು ಬರಬೇಕು. ಕಾಫಿ ಹೊತ್ತಿನಲ್ಲಿ ಕೈಗೆ ಸಿಗದೆ ಇದ್ದ ತಪ್ಪಿಗೆ ಇದೇ ಶಿಕ್ಷೆ."

" ನೋ ಪರ್ಸನಲ್ ಸರ್ವಿಂಗ್ "....ಎಂದು ನಗುತ್ತಾ ಅಲ್ಲಿಂದ ಮಾಯವಾದಳು. ಈ ಮಾತು ಕೇಳಿ ವಿಶ್ವನಾಥರಾಯರು,

" ಏನೊ ದಿವೂ ಈಗಿನಿಂದಲೇ ಇವಳು 'ಕ್ರೈಮು' (ತಪ್ಪು) 'ಪನಿಷ್ ಮೆಂಟು' (ಶಿಕ್ಷೆ) ಅಂತ ಆರಂಭಿಸಿದ್ದಾಳೆ. ಇನ್ನು ಮದುವೆಯಾದರೆ ಹೇಗೋ!........" ಎಂದರು ನಗುತ್ತಾ.

" ಮಾರಿಕೊಂಡು ಬಂದುಬಿಡುತ್ತಾಳೆ ಬಿಡಿ ಮಾವ."

" ಅದೇನೋ ನಿಜವೇ ಅನ್ನು. ಅಂತಿಂತಹವರಿಗೆ ಕೊಟ್ಟರೆ ಎಲ್ಲಿ ಆ ಕೆಲಸ ಮಾಡಿಬಿಡುವಳೋ ಎಂದು ಹೆದರಿಯೇ ನಿನ್ನಂತಹವನಿಗೆ ಅವಳನ್ನು ಗಂಟುಹಾಕಬೇಕೆಂದಿರುವುದು. "

" ಪರವಾಗಿಲ್ಲ ಒಳ್ಳೆ ಯೋಚ್ನೆ ನಿಮ್ಮದು. ಅವಳು ನನ್ನ ಮಾರಿಕೊಂಡು ಬರುವುದಿಲ್ಲವೆಂದು ಏನು ನಂಬಿಕೆ ? "

" ನಮ್ಮ ಲೀಲು ವಿಷಯ ನಂಗೆ ಗೊತ್ತಿಲ್ಲವೆ? ಮೊನ್ನೆ ಅವಳು ಯಾವುದೋ ಮಾತಿಗೆ ಹೇಳುತ್ತಿದ್ದಳು—ನೀನು ತುಂಬಾ ಒಳ್ಳೆಯವನಂತೆ, ಬುದ್ಧಿವಂತನಂತೆ........"

ಲೀಲಾವತಿಯ ಬಾಯಿಂದ ಬಂದಿರಬಹುದಾಗಿದ್ದ ತನ್ನ ಹೊಗಳಿಕೆಯನ್ನು ಕೇಳಿ ದಿವಾಕರನಿಗೆ ಸ್ವರ್ಗ ಮೂರು ಗೇಣು ಉಳಿಯಿತು. ಅವನು

ಮಾತನ್ನು ಮರೆತು, ಏನನ್ನೋ ಕನಸುಕಾಣುತ್ತಾ ಕುಳಿತ. ಅವನು ಅವೆಷ್ಟು ಹೊತ್ತು ಹಾಗೆ ಕುಳಿತಿದ್ದನೋ—ಅವನನ್ನು ಸ್ವಯಂ ಲೀಲಾವತಿಯೇ ಬಂದು ಎಚ್ಚರಿಸಬೇಕಾಯಿತು.

" ದಿವೂ ನೀನು ಈಚೆಗೆ ಕವಿಯಾಗಿಬಿಟ್ಟಿದ್ದಿ? " ಎಂದಳು ಲೀಲಾವತಿ.

" ಯಾಕೆ ? "

" ಕಾಫಿ ವಾಸನೆ ಬರುತ್ತಿದ್ದರೂ ನೀನು ಭಾವಸಮಾಧಿಯಲ್ಲಿ ಇದ್ದಿಯಲ್ಲ! " ಎಂದಳು. ಈ ಮಾತು ಕೇಳಿ ಮೂವರಿಗೂ ನಗು ಬಂತು.

" ನಾನು ಭಾವಸಮಾಧಿಯಲ್ಲಿ ತಪಸ್ಸುಮಾಡುತ್ತಿದ್ದೆ " ಎಂದ ದಿವಾಕರ.

" ಯಾತಕ್ಕೋಸ್ಕರ ? "

" ಮುನಿಸಿಕೊಂಡು ಹೊರಟುಹೋದ ಲೀಲಾವತೀದೇವಿ ಕಾಫಿ ಲೋಟದ ಸಮೇತ ಪ್ರತ್ಯಕ್ಷಳಾಗಲಿ ಅಂತ. "

ಈ ಮಾತು ಕೇಳಿ ಲೀಲಾವತಿಯ ಮುಖ ಲಜ್ಜೆಯಿಂದ ಕೆಂದಾವರೆಯಾಯಿತು. ಆದರೂ ಹುಸಿಕೋಪ ನಟಿಸುತ್ತ ಹೇಳಿದಳು :

" ನೀನು ಹಾಗೆಲ್ಲ ಹಾಸ್ಯಮಾಡುವುದಾದರೆ ನಾನು ಕಾಫಿ ಲೋಟವನ್ನು ಒಳಗೇ ತಗೊಂಡು ಹೋಗಿಬಿಡ್ತೀನಿ ನೋಡು. "

" ನಿನ್ನ ದಮ್ಮಯ್ಯ, ಹಾಗೆ ಮಾಡಬೇಡ " ಎಂದು ಕಾಫಿ ಲೋಟ ಕಿತ್ತುಕೊಳ್ಳಲು ಹೋದ. ಇದನ್ನು ಕಂಡು ವಿಶ್ವನಾಥರಾಯರು

" ಏನೋ ದಿವೂ....ಮದುವೆಯಾಗುವ ಮೊದಲೇ ಹೆಂಡತಿಗೆ ಇಷ್ಟು ಹೆದರಿದರೆ ಹೇಗೋ! " ಎಂದು ನಗೆಯಾಡಿದರು.

" ಥೂ ಹೋಗಿ ಮಾವ—ನಿಮಗೆ ನನ್ನ ಗೋಳಾಡಿಸುವುದು ಒಂದು ಆಟ ಅಂತ ಕಾಣುತ್ತೆ " ಎಂದಳು.

" ಯಾಕಮ್ಮ ಲೀಲು, ನಾನು ಮದುವೆ ಮಾತೆತ್ತಿದರೆ ನಿನ್ನ ಮನಸ್ಸಿಗೆ ಬೇಜಾರಾಗುತ್ತಾ ?"

" ಇನ್ನೇನು ? ಯಾರು ಯಾರನ್ನೋ ಗಂಡ ಹೆಂಡತಿ ಅಂತೀರಿ. "

“ಯಾಕೆ? ನಮ್ಮ ದಿವೂ ಹೊರಗಿನವನೆ? ನಿನ್ನ ಮದುವೆ ಆಗಬೇಕೂಂತ ಬಾಯಿಬಿಟ್ಟುಕೊಂಡು ಕುಳಿತಿದ್ದಾನೆ.”

“ಬಾಯಿಬಿಟ್ಟು ಕುಳಿತವರನ್ನೆಲ್ಲ ಮದುವೆಯಾಗಬೇಕೇನೊ!?”

“ಅಲ್ಲಮ್ಮ, ಮೊನ್ನೆ ನೀನೇ ಹೇಳುತ್ತಿದ್ದಿ—ದಿವೂ ಒಳ್ಳೆಯವನು, ಬುದ್ಧಿವಂತ, ವಿದ್ಯಾವಂತ ಅಂತ ಹೊಗಳುತ್ತಿದ್ದೆ—”

“ಹೀಗೆಂದ ಮಾತ್ರಕ್ಕೆ ಮದುವೆ ಆಗಿಬಿಡಬೇಕೇನೋ....ನೀವು ಹರಟುತ್ತ ಕುಳಿತಿರಿ—ರೈಲು ಹೊರಟುಹೋಗಿರುತ್ತೆ” ಎಂದು ವಿಶ್ವನಾಥ ರಾಯರ ಗಮನವನ್ನು ಗಡಿಯಾರದ ಕಡೆಗೆ ಸೆಳೆದು, ತಾನು ಜಡೆ ಹೆಣೆದು ಸಿಂಗಾರವಾಗಿ ಬರಲು ಒಳಗೆ ಹೊರಟುಹೋದಳು. ದಿವಾಕರ ಹೊರಗೆ ಗಾಡಿ ತರಲು ಹೊರಟ. ಆದರೆ, ವಿಶ್ವನಾಥರಾಯರು ಮಾತ್ರ ಕ್ಷಣಕಾಲ ಏನನ್ನೋ ಯೋಚಿಸುತ್ತಾ ಅಲ್ಲಿಯೇ ಕುಳಿತಿದ್ದರು.

ದಿವಾಕರನ ಮೇಲೆ ಲೀಲಾವತಿಯ ಮಾತುಗಳು ಅವನ ನಿರೀಕ್ಷೆಗೂ ಮೀರಿದ ಪರಿಣಾಮವನ್ನು ಉಂಟುಮಾಡಿದ್ದುವು. ಅವನಿಗೆ ಲೀಲಾವತಿ ತನ್ನ ಮದುವೆಯ ವಿಷಯದಲ್ಲಿ ವ್ಯಕ್ತಪಡಿಸಿದ ಅಭಿಪ್ರಾಯ—ಮುಗ್ಧ ಬಾಲೆಯ ಲಜ್ಜೆಯ ನುಡಿಗಳಾಗಿ ತೋರದೆ ಪ್ರೌಢೆಯೊಬ್ಬಳ ಮನೋ ನಿರ್ಧಾರದ ಮಾತುಗಳಾಗಿ ಭಾಸವಾಗಿತ್ತು. ವಯಸ್ಸಿಗೆ ಬಂದ ಹುಡುಗ ಹುಡುಗಿಯರಿಗೆ ಮದುವೆ ಮಾತು—ನಾಚುವ ವಿಷಯ. ಅವರು ತುಟಿ ಗಳಲ್ಲಿ ವ್ಯಕ್ತಪಡಿಸುವ ಮಾತಿಗೂ, ಹೃದಯಾಂತರಾಳದ ಮಾತಿಗೂ ಬಹಳ ವ್ಯತ್ಯಾಸ ಉಂಟೆಂಬ ವಿಷಯ ಹರೆಯನಾದ ದಿವಾಕರನಿಗೆ ಹೊಸದಲ್ಲ. ಅವನಿಗೆ ಲೀಲಾವತಿ ಹೇಳಿದ ಮಾತುಗಳು ಕೇವಲ ಲಜ್ಜೆಯ ಮಾತುಗಳಾಗಿ ತೋರದೆ ಹೃದಯಾಂತರಾಳದ ಭಾವನೆಗಳ ಪ್ರತಿಧ್ವನಿಯಂತಿದ್ದುವು. ಇದು ವರೆಗೆ ಲೀಲಾವತಿಯ ಬಗ್ಗೆ ಹೊಂಗನಸು ಕಟ್ಟುತ್ತಿದ್ದ ಅವನಿಗೆ ಈಗ ಆ ಮಾತುಗಳನ್ನು ನೆನೆಯಲೂ ಹೆದರಿಕೆಯಾಯಿತು. ಅವನಿಗೆ ಲೀಲಾವತಿ ಯನ್ನು ಕಂಡಲಾಗಾಯಿತು ಮನಸ್ಸಿನಲ್ಲಿ ಒಂದು ಬಗೆಯ ಹೊಯ್ದಾಟ ವೆದ್ದಿತ್ತು. ಅವಳ ಹೆಸರು ಹೇಳಿದರೆ, ಅವಳೊಡನೆ ಮಾತನಾಡಿದರೆ ಮೈ ರೋಮಾಂಚಗೊಳ್ಳುತ್ತಿತ್ತು. ಧ್ವನಿಯೇ ಬದಲಾಯಿಸಿ, ಹೃದಯ

ಉದ್ವೇಗದಿಂದ ಹೊಡೆದುಕೊಳ್ಳುತ್ತಿತ್ತು. ಹೀಗೇಕಾಗುವುದೋ ಅವನು ಅರಿಯದಾಗಿದ್ದ. ತನ್ನ ಹೃದಯದ ವಿಚಿತ್ರಭಾವನೆಗಳ ಸಂಚಾಲನೆ ಲೀಲಾವತಿಗೆಲ್ಲಿ ಪತ್ತೆಯಾಗುವುದೋ ಎಂದು ಅಧೀರನಾಗಿದ್ದ. ಆದರೂ ಅವನ ಮನಸ್ಸು ಲೀಲಾವತಿಯನ್ನು ನೋಡಲು, ಅವಳೊಂದಿಗೆ ಮಾತ ನಾಡಲು ಹಾತೊರೆಯುತ್ತಿತ್ತು. ಇದಕ್ಕೆ ತಕ್ಕಂತೆ ಮದುವೆಯ ಮನೆಯ ಗದ್ದಲ, ಸಡಗರ ಸಂಭ್ರಮಗಳು ಅವರಿಬ್ಬರಲ್ಲಿ ನಿಕಟಬಾಂಧವ್ಯವನ್ನು ಏರ್ಪಡಿಸಿತ್ತು. ಲೀಲಾವತಿ ತನ್ನ ತಂಗಿಯ ಮದುವೆಯೋ ಎನ್ನುವಂತೆ ಮದುವೆ ಮನೆಯಲ್ಲಿ ದುಡಿದಿದ್ದಳು. ಇದೇ ಮಾತನ್ನು ಕನಕಲಕ್ಷ್ಮಮ್ಮ ನವರು ದಿವಾಕರನೊಂದಿಗೆ ನೂರು ಬಾರಿ ಹೇಳಿ ಲೀಲಾವತಿಯ ಗುಣಗಾನ ಮಾಡಿದ್ದರು. ಆಗ ಲೀಲಾವತಿಯನ್ನು ವಧುವಾಗಿ ಮಾಡಿಕೊಳ್ಳುವ ಹಂಬಲವಾಗುತ್ತಿತ್ತು. ಇಲ್ಲಿಯ ತನಕ ಹಿರಿಯರೆಲ್ಲರೂ ಅವನ ಆಸೆಗಳಿಗೆ ಪರೋಕ್ಷವಾಗಿ ಪುಷ್ಟಿಕೊಟ್ಟಿದ್ದರು. ಆದರೆ ಹೊರಡುವ ಗಳಿಗೆಯಲ್ಲಿ ಲೀಲಾವತಿ ಏನೋ ಹೇಳಿಬಿಟ್ಟು ದಿವಾಕರನು ಕಟ್ಟಿದ್ದ ಕನಸಿನ ಗೋಪುರ ಸಿಡಿಯುವಂತೆ ಮಾಡಿದ್ದಳು. ಅವನು ಅದೇ ವಿಷಯ ಚಿಂತಿಸುತ್ತಾ ಗಾಡಿಯನ್ನು ತಂದು ವಿಶ್ವನಾಥರಾಯರ ಸಾಮಾನುಗಳನ್ನು ಗಾಡಿಗೆ ಹೇರಿ, ತಾನು ಅನ್ಯಮನಸ್ಕನಾಗಿ; ಮಂಕುಹಿಡಿದವನಂತೆ ನಿಂತುಕೊಂಡ. ಮೊದಲು ಲೀಲಾವತಿಯನ್ನು ಕಳುಹಿಸಿಕೊಡಲು ತಾನೂ ಸ್ಟೇಷನ್ನಿನ ತನಕ ಹೋಗಿ ಬರಬೇಕೆಂದು ಇದ್ದ. ಆದರೆ ಈಗ, ಅವನಿಗೆ—ಹೊಸಲುದಾಟಿ ಹೋಗಲು ಸಮಾಧಾನವಿರಲಿಲ್ಲ. ಏನೋ ಕಳೆದುಕೊಂಡಂತೆ ಆಗಿ ಅವನು ತುಂಬಾ ಪರಿತಪಿಸುತ್ತಿದ್ದ. ಇದನ್ನು ಕನಕಲಕ್ಷ್ಮಮ್ಮನವರು ಪತ್ತೆ ಮಾಡದೆ ಇರಲಿಲ್ಲ. ಅತ್ತ ವಿಶ್ವನಾಥರಾಯರೂ, ಲೀಲಾವತಿಯೂ ಗಾಡಿಯನ್ನೇರಿ ಹೊರಟು ಹೋದ ಮೇಲೆ ಇತ್ತ ಮಗನೊಡನೆ ಆ ಪ್ರಸ್ತಾಪ ಮಾಡಿದರು.

" ಯಾಕೆ ಮಂಕು ಬಡಿದವನಂತೆ ನಿಂತೆ ದಿವೂ ? ಲೀಲಾವತಿ ಹೊರಟು ಹೋದಳೆಂದು ಬೇಸರವಾಯಿತೆ ? "

ಈ ಮಾತಿಗೆ ದಿವಾಕರ ಸುಮ್ಮನೆ ನಕ್ಕುಬಿಟ್ಟ.

" ಲೀಲಾವತಿ ಊರಿಗೆ ಹೋದರೂ ಇನ್ನೊಂದು ತಿಂಗಳಿಗೇ ಇಲ್ಲೇ

ಇರಲು ಬರುತ್ತಾಳೆ. ಆಗ ಅವಳು ಮನೆಯವಳೇ ಆಗುತ್ತಾಳೆ ಬಿಡು." ಎಂದರು.

ಈ ಮಾತಿಗೂ ದಿವಾಕರ ಸುಮ್ಮನಿದ್ದ.

"ಯಾಕೆ ದಿವೂ ಮಾತನಾಡದೆ ನಿಂತೆ? ಲೀಲಾವತಿ ಏನಾದರೂ ತಾನು ಮತ್ತೆ ಬರೋ ತನಕ ನೀನು ಯಾರ ಕೂಡಾನೂ ಮಾತನಾಡ ಬಾರದು ಅಂತ ಹೇಳಿಹೋಗಿದಾಳೇನು?" ಎಂದು ಹಾಸ್ಯಮಾಡಿ ರಂಜಿಸಲು ನೋಡಿದರು.

"ಹೌದಮ್ಮ. ಎಲ್ಲಕ್ಕೂ ಅವಳ ಅಪ್ಪಣೆ ತೆಗೆದುಕೊಂಡೇ ಅಲ್ಲವೇ ನಾನು ಕೆಲಸಮಾಡೋದು" ಎಂದ ಒರಟಾಗಿ.

"ಅದನ್ನು ನಾನು ಕಾಣದೆ ಹೋಗುತ್ತೇನೆಯೇ. ಅವಳು ಹಾಕಿದ ಗೆರೆ ದಾಟೋದು ಬಿಡೋದು ನಾಳೆ ಬೆಳಗಾದರೆ ಗೊತ್ತಾಗುತ್ತಲ್ಲ. ಈಗ ಯಾಕೆ ಅದರ ಮಾತು? ಹೋಗಲಿ....ಅವಳು ನಿನಗೆ ಒಪ್ಪಿಗೆ ತಾನೆ? ಅದು ಹೇಳು ಮೊದಲು."

"ನನ್ನ ಒಪ್ಪಿಗೆ ಕಟ್ಟಿಕೊಂಡು ಏನು ಪ್ರಯೋಜನ?"

"ಯಾಕೋ ಹೀಗಂತಿ?"

"ಇನ್ನೇನನ್ನಲಿ. ಮದುವೆಯಾಗೋರು ಯಾರು? ಅವರ ಅಭಿಪ್ರಾಯ ವೇನು ಅಂತ ವಿಚಾರಿಸಿಕೊಳ್ಳದೆ–ಸುಮ್ಮನೆ ನನ್ನ ಗೋಳುಹೊಯ್ದುಕೊಂಡರೆ ಏನು ಪ್ರಯೋಜನ?"

"ನಿನ್ನ ಮಾತು ನಂಗೆ ಅರ್ಥವಾಗೊಲ್ಲಪ್ಪ?"

"ಅರ್ಥವಾಗದೆ ಇದ್ದರೆ ಹೋಗಲಿ ಬಿಡು—"

ಇಷ್ಟಕ್ಕೆ ಅವರೆಲ್ಲಿ ಬಿಡುವರು?

"ಅಲ್ಲವೋ ದಿವೂ—ನಿನ್ನ ಮನಸ್ಸಿನಲ್ಲಿ ಏನಿದೆ ಅದನ್ನ ಸ್ಪಷ್ಟವಾಗಿ ಹೇಳಬಾರದೆ? ನಿನಗೆ ತಾಯಿಯ ಬಳಿಯೂ ಸಂಕೋಚವೆ?" ಎಂದರು.

"ಅಲ್ಲಮ್ಮ ಲೀಲಾವತಿಯನ್ನು ಮದುವೆಯಾಗಲು ನನ್ನ ಅಭಿಪ್ರಾಯ ಕೇಳುವಂತೆಯೇ ನನ್ನನ್ನು ಮದುವೆಯಾಗಲು ಲೀಲಾವತಿಯ ಅಭಿಪ್ರಾಯ ವೇನಿದೆ ಅಂತ ಕೇಳಿ ತಿಳಿದುಕೊಂಡಿದ್ದೀಯಾ?"

" ಹೂಂ. ತಿಳಿದುಕೊಂಡಿದ್ದೇನೆ."

" ಏನು ತಿಳಿದುಕೊಂಡಿದ್ದಿ ? "

" ಅವಳಿಗೆ ನಿನ್ನನ್ನು ಮದುವೆಯಾಗುವುದರಲ್ಲಿ ಇಷ್ಟವಿದೆ. "

" ಇದು ನಿನ್ನ ಊಹೆಯಲ್ಲವಷ್ಟೇ " ಎಂದ ಅನುಮಾನಿಸುತ್ತಾ.

" ನನ್ನ ಮಾತಿನಲ್ಲಿ ನಿನಗೆ ನಂಬಿಕೆ ಇಲ್ಲವೆ? ಬೇಡ—ನಿಮ್ಮ ಮಾವನೇ ಹೇಳಿದನಲ್ಲ—ಲೀಲಾವತಿಗೆ ನಿನ್ನ ಕಂಡರೆ ತುಂಬಾ ಅಭಿಮಾನ ವಿದೆ. ಪ್ರೀತಿ ಇದೆ ಅಂತ. ಇದಕ್ಕಿಂತಲೂ ಬೇರೆ ಸಾಕ್ಷಿ ಬೇಕೆ ? "

" ಹೌದಮ್ಮ. ನನ್ನ ವಿಷಯದಲ್ಲಿ ಅವಳಿಗೆ ಅಭಿಮಾನ, ಪ್ರೀತಿ ಇರ ಬಹುದು. ಅವು ಇದ್ದ ಮಾತ್ರಕ್ಕೆ ನನ್ನನ್ನು ಮದುವೆಯಾಗಲು ಇಷ್ಟವಿದೆ ಎಂದಾಯಿತೆ?—ಅವಳು ಊರಿಗೆ ಹೊರಡುವಾಗ ಹೇಳಿದ ಮಾತು ಬಹುಶಃ ನೀನು ಕೇಳಲಿಲ್ಲವೆಂದು ತೋರುತ್ತೆ. ಅದನ್ನು ಕೇಳಿದ್ದರೆ ನೀನು ಹೀಗೆ ಹೇಳುತ್ತಿರಲಿಲ್ಲ " ಎಂದ.

ಈ ಮಾತು ಕೇಳಿ ಚಕಿತರಾಗಿ ಕನಕಲಕ್ಷಮ್ಮನವರು ಕೇಳಿದರು.

" ಏನು ಹೇಳಿದಳು ? ಏನು ಹೇಳಿದಳು ? "

" ಹೊಗಳಿದ ಮಾತ್ರಕ್ಕೆ ಮದುವೆಯಾಗಬೇಕೆ ? " ಎಂದು ಹೇಳಿ ದಳು. ಬಹುಶಃ ನನ್ನನ್ನು ಮದುವೆಯಾಗಲು ಅವಳಿಗೆ ಇಷ್ಟವಿಲ್ಲವೆಂದು ತೋರುತ್ತೆ. ನೀವು ಸುಮ್ಮನೆ ಅವಳನ್ನು ಪೀಡಿಸುತ್ತಿದ್ದೀರಿ."

" ಇಷ್ಟೇ ತಾನೆ? ಅವಳು ತಮಾಷೆಗೆಲ್ಲೊ ಹಾಗೆಂದಿರಬಹುದು. ಅದನ್ನೆಲ್ಲ ತಲೆಗೆ ತೆಗೆದುಕೊಳ್ಳುತ್ತಾರೇನೋ ಹುಚ್ಚ. ಅದಕ್ಕೇ ನಾನು ಹೇಳುವುದು—ನಿನಗೆ ಇಷ್ಟು ವಯಸ್ಸಾಗಿದ್ದರೂ ಇನ್ನೂ ನೀನು ಮಗು. ಸುಮ್ಮನೆ ಕಾಲೇಜಿಗೆ ಹೋಗುತ್ತಿ. ಏನು ಪ್ರಯೋಜನ. ಯಾವ ಮಾತಿಗೆ ಏನು ಅರ್ಥವೆಂದು ತಿಳಿದುಕೊಳ್ಳುವ ಶಕ್ತಿ ಇಲ್ಲ—ಶುದ್ಧ ಪೆದ್ದು" ಎಂದು ಹಾಸ್ಯಮಾಡಿದರು.

" ನೀನು ನನ್ನನ್ನು ಪೆದ್ದನೆಂದು ಕರೆದರೂ ಸಿಟ್ಟಿಲ್ಲ. ಆದರೆ ನಾನು ನೋಡಿದ ರೀತಿಯಲ್ಲಿ ಲೀಲಾವತಿಗೆ ಸದ್ಯಕ್ಕೆ ಮದುವೆ ಆಗುವ ಆಸೆ ಇಲ್ಲ. ಇದಂತೂ ಖಂಡಿತ."

"ಹೌದು. ಇದೇ ಮಾತನ್ನು ನನಗೂ ಹೇಳಿದಳು. ಹೀಗೆಂದ ಮಾತ್ರಕ್ಕೆ ಮದುವೆಯಾಗುವುದೇ ಇಲ್ಲವೆಂದು ಅರ್ಥವೆ? ಅವಳಿಗೆ ಕಾಲೇಜು ಓದುಮುಗಿಸುವ ಆಸೆ ಇದೆ, ಅಲ್ಲಿಯ ತನಕ ಮದುವೆಯಾಗದೆ ಇರಬಹುದು. ಓದುವುದೆಲ್ಲ ಪೂರೈಸಿದ ಮೇಲೆ ಮದುವೆಯಾಗದೆ ಏನು ಮಾಡುತ್ತಾಳೆ?"

ಈ ಮಾತು ಕೇಳಿ ದಿವಾಕರನಿಗೆ ಹೋದ ಜೀವ ಮರಳಿ ಬಂದಂತಾಗಿ, ಮನಸ್ಸಿಗೆ ಏನೋ ಸಮಾಧಾನವಾಯಿತು. ಸದ್ಯದ ಸ್ಥಿತಿಯಲ್ಲಿ ಅವನು ಮದುವೆಯಾಗುವ ಸ್ಥಿತಿಯಲ್ಲಿ ಇರಲಿಲ್ಲ. ಲೀಲಾವತಿ ತನ್ನ ಓದು ಮುಗಿಸುವ ಹೊತ್ತಿಗೆ ತಾನು ತನ್ನ ಓದು ಮುಗಿಸಿ ಯಾವುದಾದರೂ ಕೆಲಸದಲ್ಲಿ ಇರುತ್ತೇನೆ. ಆಗ ತನ್ನನ್ನು ಮದುವೆಯಾಗಲು ಅವಳು ಮುಂದೆ ಬರಬಹುದೇನೋ........ಇಂದಿನ ಭಾವವೇ ಅಂದೂ ಇರುವುದೆನ್ನಲು ಹೇಗೆ ಹೇಳಲು ಸಾಧ್ಯ. ಆಗ ಅವಳು ತನ್ನನ್ನೇ ಒಲಿದು ಬರಬಹುದೊ ಏನೋ, ಎಂದು ಮತ್ತೆ ಕನಸಿನ ಮಹಲನ್ನು ಕಟ್ಟತೊಡಗಿದ.

೪

ಬೇಸಿಗೆ ರಜ ಮುಗಿದು ಮತ್ತೆ ಕಾಲೇಜು ತೆರೆಯುತ್ತಿದ್ದಂತೆಯೇ ಲೀಲಾವತಿ ಮೈಸೂರಿಗೆ ಬಂದು ಮಹಾರಾಣಿ ಕಾಲೇಜು ಸೇರಿದಳು. ಲೀಲಾವತಿ ತಮ್ಮ ಮನೆಯಲ್ಲೆ ಇರಲು ಬಂದ ಮೇಲೆ ದಿವಾಕರನ ಉತ್ಸಾಹಕ್ಕೆ ಎಣೆ ಇಲ್ಲದಾಯಿತು. ಅವನ ಜೀವನ ತಿರುಗುವ ಬುಗುರಿಯಂತಾಯಿತು. ತಾನು ಏನು ಕೆಲಸಮಾಡಲಿ, ಅದನ್ನು ಲೀಲಾವತಿಯ ಮುಂದೆ ಮೊದಲು ಚರ್ಚಿಸಬೇಕು-ತಾನು ಏನು ನುಡಿಯಲಿ ಆದಕ್ಕೆ ಲೀಲಾವತಿಯ ಹಿಮ್ಮೇಳ ಬೇಕು. ಊಟ ತಿಂಡಿ, ಕಾಲೇಜು-ವಿಹಾರ ಎಲ್ಲದರಲ್ಲಿಯೂ ಲೀಲಾವತಿ ತನ್ನೊಡನೆ ಇರಬೇಕು. ಲೀಲಾವತಿ ಇಲ್ಲದಿದ್ದರೆ ಇವುಗಳೊಂದಕ್ಕೂ ಕಳೆಯಿಲ್ಲ. ಲೀಲಾವತಿ ತಿಂಗಳಿಗೊಮ್ಮೆ ತೆಗೆದುಕೊಳ್ಳುವ ಆ ಮೂರು ದಿನ ನೋಡಬೇಕು. ದಿವಾಕರನ ಜೀವನ ಭಣಭಣಗುಟ್ಟುತ್ತಿತ್ತು. ಬೆಳೆದ ಹೆಣ್ಣು ಹುಡುಗಿಯಾದ ಲೀಲಾವತಿಯೊಂದಿಗೆ ದಿವಾಕರನು ಇಷ್ಟು ಸಲಿಗೆಯಿಂದ ಇರುವುದನ್ನು ಮನೆಯವರಾರೂ ಆಕ್ಷೇಪಿಸುತ್ತಿರಲಿಲ್ಲ. ಮನೆಯವರೆಲ್ಲರ ಭಾವನೆಯಲ್ಲಿ ಅವರಿಬ್ಬರೂ ಭಾವೀ ದಂಪತಿಗಳು. ಅವರು ಪರಸ್ಪರ ಪ್ರೀತಿಸುತ್ತಿದ್ದು, ಸಲಿಗೆಯಿಂದ ಇರುವುದರಲ್ಲಿ ಯಾವ ಕುಂದೂ ಕಾಣಲಿಲ್ಲ. ಇಷ್ಟಕ್ಕೂ ಅವರಿಬ್ಬರೂ ವಿದ್ಯಾರ್ಥಿಗಳು—ತಮ್ಮ ಜವಾಬ್ದಾರಿ ಏನೆಂಬುದರ ಕಲ್ಪನೆ ಇಬ್ಬರಿಗೂ ಅರಿವಾಗಿತ್ತು. ಎಂದಮೇಲೆ ವಿದ್ಯಾರ್ಥಿ ಜೀವನದ ಸಂಯಮದ ಕೋಟೆಯಲ್ಲಿ ಅವರ ಸಲಿಗೆ ಹಿತಮಿತವಾಗಿತ್ತು. ಮನೆಯ ಸುಸಂಸ್ಕೃತ ಆವರಣವೂ ಅದಕ್ಕೆ ಪೂರಕವಾಗಿತ್ತು. ಮನೆಯವರು ಯಾರೂ ಅವರಿಬ್ಬರ ಪ್ರೀತಿಯ ನಡುವೆ ಅಡ್ಡಬರಲು ಯತ್ನಿಸುತ್ತಿರಲಿಲ್ಲ. ಮನೆಗೆ ಹಿರಿಯನಾದ ಸುಧಾಕರನಿಗೆ ಮದುವೆಯಾಗಿತ್ತು. ಹೆಂಡತಿ ಮನೆಗೆ ಬಂದು ಒಂದು ವರ್ಷವಾಗಿತ್ತು. ಮೊದಲನೆಯ ಹುಡುಗಿ ಮದುವೆಯಾಗಿ ಅತ್ತೆಮನೆ ಸೇರಿದ್ದಳು. ಎರಡನೆಯ ಹುಡುಗಿಯಾದ ಶರಾವತಿ ಅತ್ತೆಮನೆಗೆ ಹೊರಡುವ ಸನ್ನಾಹದಲ್ಲಿ ಇದ್ದಳು—ಅವಳು ಅತ್ತೆಮನೆಗೆ ಹೊರಟುಹೋದಮೇಲೆ ಮನೆಯ ಹೆಣ್ಣುಮಗಳೆಂದರೆ-

ಹಿರಿಯ ಸೊಸೆ. ಈಗ ಕಿರಿಯ ಸೊಸೆ—ಬೇರೆ ಮನೆಯನ್ನು ತುಂಬಿಕೊಂಡಿದ್ದಳು. ಅವಳು ಸೊಸೆ ಎನ್ನುವುದಕ್ಕಿಂತಲೂ-ಮುದ್ದಿನ ಮಗಳೆಂದರೆ ಹೆಚ್ಚು ಸಮಂಜಸ. ಯಾಕೆಂದರೆ ಕನಕಲಕ್ಷ್ಮಮ್ಮ ದಂಪತಿಗಳೂ ಅವಳನ್ನು ಅಷ್ಟು ಅಕ್ಕರೆಯಿಂದ ನೋಡಿಕೊಳ್ಳುತ್ತಿದ್ದರು. ಇವರ ಪ್ರೀತಿಯ ಜತೆಗೆ ಸುಧಾಕರ, ದಿವಾಕರರ ವಾತ್ಸಲ್ಯ ಬೆರೆತು ಲೀಲಾವತಿಯ ಜೀವನ ಬೆಳುದಿಂಗಳಿನಂತೆ ಆಹ್ಲಾದಕರವಾಗಿತ್ತು.

ಲೀಲಾವತಿ ಮನೆಯವರೆಲ್ಲರ ಪ್ರೇಮದ ಪ್ರತ್ಥಳಿಯಾಗಿದ್ದರೂ—ಯಾಕೋ ಸುಧಾಕರನ ಹೆಂಡತಿ ರಾಜಮಣಿಗೆ ಅವಳನ್ನು ಕಂಡರೆ ಒಂದು ಬಗೆಯ ಮತ್ಸರ ಉಂಟಾಗಿತ್ತು. ತಾನು ಹಿರಿಯ ಸೊಸೆಯಾಗಿದ್ದುಕೊಂಡು, ಅತ್ತೆ ಮಾವಂದಿರ ಪ್ರೀತಿ ವಿಶ್ವಾಸವನ್ನು ಸೂರೆಗೊಳ್ಳಬೇಕೆಂದಿದ್ದ ಅವಳಿಗೆ ತನಗೊಬ್ಬ ಪ್ರತಿಸ್ಪರ್ಧಿ ಬಂದಂತೆ ಅನಿಸಿತ್ತು. ಆ ಹುಡುಗಿ ವಯಸ್ಸಿನಲ್ಲಿ ಲೀಲಾವತಿಗಿಂತ ಮೂರು ವರ್ಷ ದೊಡ್ಡವಳು. ಆದರೂ ಅವಳು ಸಂಪ್ರದಾಯಸ್ಥ ಮನೆಯ ಹುಡುಗಿಯಾಗಿದ್ದುದರಿಂದ ಅವಳಿಗೆ ವಿಶಾಲದೃಷ್ಟಿ ಬಂದಿರಲಿಲ್ಲ. ಅಲ್ಲದೆ ಅವಳು ಹೆಚ್ಚು ಕಲಿತವಳಲ್ಲ. ಅವಳ ವ್ಯಾಸಂಗವೆಲ್ಲ ಕೇವಲ ಲೋಯರ್ ಸೆಕೆಂಡರಿಗೆ ಮುಗಿದುಹೋಗಿತ್ತು—ಲೀಲಾವತಿಯಾದರೋ ಕಾಲೇಜು ಕಲಿಯುತ್ತಿರುವ ಹುಡುಗಿ—ಆಧುನಿಕ ವಿಚಾರವುಳ್ಳ ತರುಣಿ. ಅವಳು ದಿವಾಕರನೊಂದಿಗೆ ಅಷ್ಟು ಸಲಿಗೆಯಿಂದ ಇರುವುದನ್ನು ರಾಜಮಣಿ ಒಪ್ಪಲಿಲ್ಲ. ಲೀಲಾವತಿಯ ಸಲಿಗೆಯನ್ನು—ದಿವಾಕರನನ್ನು ನಡಸಿಕೊಳ್ಳುವ ರೀತಿಯನ್ನು ಕಂಡು, ಅವಳು ಮೂಗು ಮುರಿಯುತ್ತಿದ್ದಳು. ಲೀಲಾವತಿ ಭಾವಿಪತಿ ಎನಿಸಿಕೊಂಡವನ ಜತೆಯಲ್ಲಿ ಲಜ್ಜೆನಾಚಿಕೆಗಳಿಲ್ಲದೆ ಸ್ವಚ್ಛಂದವಾಗಿ ವರ್ತಿಸುವುದೆಂದರೆ ಅದು ಸ್ತ್ರೀಲೋಕಕ್ಕಾದ ಅವಮಾನವೆಂದು ಅವಳ ಭಾವನೆ. ಈ ವಿಷಯವನ್ನು ಸೂಕ್ಷ್ಮವಾಗಿ ಲೀಲಾವತಿಗೆ ಹೇಳಿ ತಿದ್ದಲು ನೋಡಿದಳು. ಲೀಲಾವತಿ ಅವಳ ಮಾತನ್ನು ಕಿವಿಯ ಮೇಲೆ ಹಾಕಿಕೊಳ್ಳದೆ—ನಕ್ಕುಬಿಟ್ಟಳು. ದಿವಾಕರನಿಗಾದರೂ ಬುದ್ಧಿ ಹೇಳಲು ತನ್ನ ಗಂಡನಿಗೆ ಸಮಯಸಾಧಿಸಿ, ಹೇಳಿದಳು. ಸುಧಾಕರ ಒಂದು ಬಗೆಯ ವಿಚಿತ್ರ ಸ್ವಭಾವದ ವ್ಯಕ್ತಿ. ಅವನಿಗೆ ತಾನಾಯಿತು-ತನ್ನ

ಫ್ಯಾಕ್ಟರಿಯ ಕೆಲಸವಾಯಿತು—ಇಷ್ಟರಲ್ಲಿಯೇ ಅವನ ಜಗತ್ತು. ಬೆಳಿಗ್ಗೆ ಎಂಟುಗಂಟೆಗೆ ಮನೆ ಬಿಟ್ಟು ಹೊರಟವನು-ಕೃಷ್ಣಾ ಮಿಲ್ಲಿನ ಕೆಲಸ ಮುಗಿಸಿ ಕೊಂಡು ಸಂಜೆ ಐದು ಗಂಟೆಗೇ ಆವನು ಮನೆಗೆ ಹಿಂದಿರುಗುತ್ತಿದ್ದುದು. ಸಂಜೆ ಬಂದವನೇ ಕೊಂಚ ಫಲಾಹಾರ ಸೇವಿಸಿ, ಆ ದಿನದ ವೃತ್ತಪತ್ರಿಕೆ ಹಿಡಿದು-ರೇಡಿಯೋ ತಿರುಗಿಸಿ ಕುಳಿತರೆ-ಊಟಕ್ಕೆ ಕರೆ ಬರುವ ತನಕ ಏಳು ತ್ತಿರಲಿಲ್ಲ. ಅನಂತರ ಕೊಂಚ ಹರಟೆ, ನಿದ್ರೆ. ಇದು ಅವನ ದೈನಂದಿನ ಕಾರ್ಯಕ್ರಮ. ಇದರ ಮಧ್ಯೆ ಗೃಹಕೃತ್ಯದ ವಹಿವಾಟನ್ನು ನೋಡಿ ಕೊಳ್ಳುವುದಕ್ಕೆ ಆವನಿಗೆ ಪುರಸತ್ತು ಇರಲಿಲ್ಲ. ಅವನಿಗೆ ತಿಂಗಳಾಗುತ್ತಲೂ ಸಂಬಳ ತಂದು, ತಾಯಿಯ ಕೈಗೆ ಹಾಕುವುದೊಂದು ಗೊತ್ತಿತ್ತು. ಉಳಿದ ಯಾವುದೂ ಅವನಿಗೆ ಗೊತ್ತಿರಲಿಲ್ಲ.

ಲೀಲಾವತಿಗೆ ರಾಜಮಣಿ ತನ್ನ ವಿಷಯದಲ್ಲಿ ಪೂರ್ವಾಭಿಪ್ರಾಯ ಹೊಂದಿರುವಳೆಂಬ ಕಲ್ಪನೆ ಲವಲೇಶವಿರಲಿಲ್ಲ. ರಾಜ ಮಣಿಯ ಸ್ವಭಾ ವವೇ ಹಾಗೆ, ಹೆಚ್ಚು ಸಲಿಗೆಯಿಂದ ಇರುವ ವ್ಯಕ್ತಿಯಲ್ಲ ಎಂದುಕೊಂಡು, ಲೀಲಾವತಿ ಕಾರಣವಿಲ್ಲದೆ ಅವಳ ಜತೆಯಲ್ಲಿ ಹರಟಲು ಹೋಗುತ್ತಿರಲಿಲ್ಲ. ಮಾತಿಗೆ ಯಾರಾದರೂ ಬೇಕಾದರೆ-ಕನಕಲಕ್ಷಮ್ಮ, ಅವರ ಯಜಮಾನರು ರಾಘವೇಂದ್ರರಾಯರು, ಇವರು ತಪ್ಪಿದರೆ ದಿವಾಕರ ಇದ್ದೇ ಇರುತ್ತಿದ್ದ. ಏನಾದರೂ ಹೆಂಗಸರಿಗೆ ಸಂಬಂಧಿಸಿದ ಮಾತುಗಳು ಆಡುವುದಿದ್ದರೆ ಓರಗೆ ಯವಳಾದ ಶರಾವತಿ ಇದ್ದಾಳಲ್ಲ! ಇವರಾರೂ ಇಲ್ಲದಿದ್ದರೆ ಯಾರೂ ಬೇಡ ವಾದರೆ—ರೇಡಿಯೋ ಇದ್ದೇ ಇತ್ತು. ಇದರ ಜತೆಗೆ ಸೊಗಸಾದ ಕಥೆ ಪುಸ್ತಕಗಳ ರಾಶಿಯೇ ಇರುತ್ತಿತ್ತು. ಹೀಗಾಗಿ, ಲೀಲಾವತಿಯ ಜೀವನ ಸಹಜವಾಗಿ ಉಕ್ಕಿ ಹರಿಯುವ ಆನಂದ ತೃಪ್ತಿಗಳ ಹೊಳೆಯಂತೆ ಇತ್ತು. ಇಷ್ಟಾದರೂ ಒಮ್ಮೊಮ್ಮೆ ತಂದೆಯ ನೆನಪಾಗಿ ಕೊಂಚ ಅಸುಖಿಯಾಗುತ್ತಿ ದ್ದಳು. ಅವಳು ಬೇಸರಗೊಂಡಾಗಲೆಲ್ಲ ದಿವಾಕರ ಹೇಗೋ ಆದರ ಸುಳಿವು ಹಚ್ಚಿ ಅವಳನ್ನು ಆದಷ್ಟು ಮಟ್ಟಿಗೆ ಉತ್ಸಾಹಭರಿತಳನ್ನಾಗಿ ಮಾಡಲು ಪ್ರಯತ್ನಿಸುತ್ತಿದ್ದ. ಅವನ ಕಾವ್ಯಾಭಿರುಚಿ, ಕನ್ನಡ ಪ್ರೇಮ, ರಸಿಕತೆ ಸಂಗೀತಗಳು ಲೀಲಾವತಿಯ ಮನಸ್ಸನ್ನು ರಂಜಿಸಲು ಸದಾ ಸಿದ್ಧವಿರು

ತ್ತಿತ್ತು. ಈಚೆಗೆ ಲೀಲಾವತಿ ಅವನ ಪ್ರೇಮದ ಅರ್ಥವ್ಯಕ್ತಿಯಾದಮೇಲೆ ಅವನ ಕಾವ್ಯದ ಗಂಗೆ ಸ್ಫೂರ್ತಿಗೊಂಡು ಉಕ್ಕಿ ಹರಿಯುತ್ತಿತ್ತು. ಅವನ ಲೇಖಣಿಯಿಂದ ಪ್ರಣಯಗೀತೆಗಳು ಹೊನಲಾಗಿ ಹರಿಯಲು ತೊಡಗಿತ್ತು. ಮೊದಲೇ ಅಂಕೆ ಶಂಕೆಗಳಿಲ್ಲದ ಕಾಲೇಜಿನ ವಿದ್ಯಾರ್ಥಿ ಜೀವನ. ಜತೆಗೆ ಅನೇಕ ಲಲಿತಕಲೆಗಳ ಮಾತೃಕೆಯಾದ ಮಹಾರಾಜ ಕಾಲೇಜ್ ಯೂನಿಯನ್ನಿನ ಉಪಾಧ್ಯಕ್ಷ ಪದವಿ. ಇಷ್ಟೇ ಸಾಲದೆಂಬಂತೆ ಲೀಲಾವತಿಯ ಸಾನಿಧ್ಯಸುಖ—ಮಧುರವಾದ ಅವಳ ನಡೆನುಡಿ ಇವುಗಳಿಂದ ದಿವಾಕರನ ಜೀವನ ಕಾವ್ಯಮಯವಾಗಿತ್ತು.

ದಿವಾಕರ ಮನಶ್ಶಾಸ್ತ್ರದ ವಿದ್ಯಾರ್ಥಿಯಾಗಿದ್ದರೂ, ಅವನು ಮೂಲತಃ ಕವಿ. ಅಂತಲೇ ಅವನ ಒಲವು ಸಾಹಿತ್ಯದ ಕಡೆಗೆ ಇತ್ತು. ಅದರಲ್ಲಿಯೂ ಕನ್ನಡ ಸಾಹಿತ್ಯದಲ್ಲಿ ಅವನಿಗೆ ತುಂಬಾ ಆಸಕ್ತಿ, ಅಭಿರುಚಿ. ಶಾಕುಂತಲ, ಕಾದಂಬರಿ, ಮೇಘದೂತ ಕಾವ್ಯಗಳ ಸ್ವಾರಸ್ಯವನ್ನು ಚೆನ್ನಾಗಿ ತಿಳಿದ ಗುರುಮುಖದಿಂದ ಮಾಡಿಕೊಂಡಿದ್ದ. ಅವನಿಗೆ ಲೀಲಾವತಿಯ ನೆನಪಾದರೆ—ಅವಳು ಕಾದಂಬರಿಯಾಗಿ ಕಾಣಿಸಿಕೊಳ್ಳುತ್ತಿದ್ದಳು. ಇಲ್ಲವೆ ಶಾಕುಂತಲೆಯಾಗಿ ಕಾಣಿಸಿಕೊಳ್ಳುತಿದ್ದಳು. ಆಗ ತಾನು ಕಪಿಂಜಲ, ಇಲ್ಲವೆ ದುಶ್ಯಂತನೆಂಬ ಭಾವನೆ ಬರುತ್ತಿತ್ತು. ಅವನು ಲೀಲಾವತಿಯನ್ನು ವರ್ಣಿಸಬೇಕೆನಿಸಿದರೆ ಹಳೆಗನ್ನಡ ಸಾಹಿತ್ಯಕ್ಕೇ ಶರಣು ಬರುತ್ತಿದ್ದ. ತನ್ನ ಹಾಗೂ ಲೀಲಾವತಿಯ ಸಂಬಂಧ. ಅವನಿಗೆ ಯಾವಾಗಲು ತೋರುತ್ತಿದ್ದುದು.

"ಕಮಲನಿಗೆ ಕಮಲ ಬಂಧುವಿಗೆ,"

"ಕುಮುದಿನಿಗೆ ಕುಮುದೇಂದುವಿಗೆ" ಇರುವ ವಿಲಕ್ಷಣವಾದ ಸಂಬಂಧ. ಅವನ ಕಮಲಿನಿ, ಕುಮುದಿನಿಯಾದ ಲೀಲಾವತಿ ಒನ್ಮೆ ನಕ್ಕರೆ ಅವನ ಹೃದಯ ಅರಳುತ್ತಿತ್ತು. ಅವಳು ಜತೆಯಲ್ಲಿ ಇಲ್ಲದಿದ್ದರೆ, ಅದು ಮುದುಡಿಕೊಳ್ಳುತ್ತಿತ್ತು. ಅಂತೆಯೇ ಲೀಲಾವತಿಯ ಹೃತ್ಕಮಲ ದಿವಾಕರನ ಸಹವಾಸದಲ್ಲಿ ನಳನಳಿಸುವ ಮೋಹಕವಾದ ಕಮಲ ಪುಷ್ಪವಾಗಿತ್ತು. ಅವಳ ಮೈ ಬಣ್ಣವೂ ಅವಕ್ಕೆ ತಕ್ಕಂತೆ ಕಮಲದ ಕೆಂಪು

ಬಿಳುಪು ಮಿಶ್ರದಿಂದ ಆದ ಚೆಂಗುಲಾಬಿಯ ಬಣ್ಣ, ಮಾಟವಾದ ಆ ಮುಖ ಕಮಲದಲ್ಲಿ ತಿದ್ದಿಮಾಡಿದಂತಿದ್ದ ಮೂಗು, ತುಟಿ, ಕೆನ್ನೆಗಳು ಕಮಲದ ದಂಟಿನಂತೆಯೇ ಕೋಮಲವಾಗಿದ್ದುವು. ವಿಶಾಲವೂ ತೇಜಸ್ವಿಯೂ ಆಗಿದ್ದ ಅವಳ ನಯನದ್ವಯವು ಕಮಲಪುಷ್ಪದಲ್ಲಿ ಸೆರೆಸಿಕ್ಕಿದ ಕಪ್ಪು ಭ್ರಮರಗಳಂತೆ ತೋರುತ್ತಿತ್ತು. ಒಮ್ಮೊಮ್ಮೆ ಅವನ ಹೊಗಳಿಕೆಯನ್ನು ಕೇಳಿ ಲೀಲಾವತಿಗೆ ನಗುವನ್ನು ತಡೆದುಕೊಳ್ಳುವುದು ಕಷ್ಟವಾಗುತ್ತಿತ್ತು. ಅವಳೂ ದಿವಾಕರನನ್ನು ಅವನ ಕವನದ ಧಾಟಿಯಲ್ಲಿಯೇ ಚುಡಾಯಿಸಿದರೆ, ಇದರಿಂದ ಉತ್ತೇಜಿತನಾದ ದಿವಾಕರನ ಬಾಯಿಂದ ಹೊರಡುವ ಮಾತೆಲ್ಲ ಕಾವ್ಯವೇ. ಒಮ್ಮೆ ಬಾಯಾರಿಕೆಯಾದಾಗ, ನೀರು ಕೊಡಲು ಲೀಲಾವತಿಯನ್ನು ಕೇಳಿದ. ಲೀಲಾವತಿ ಯಾವುದೋ ಕೆಲಸ ಮಾಡುತ್ತಿದ್ದುದರಿಂದ, ನೀರು ತರಲು ಕೊಂಚ ತಡಮಾಡಿದಳು. ಆಗಷ್ಟೇ ಪ್ರಕಟವಾಗಿದ್ದ ನಾಡಪದಗಳೆನ್ನುವ ಕವನಸಂಗ್ರಹವನ್ನು ಓದುತ್ತಿದ್ದ ದಿವಾಕರ ಹೇಳಿದ—

“ ಮಾವನ ಮಗಳೇ ಕೋಗಿಲೆ ದನಿಯೋಳೇ
ತಾವರೆಮೊಗ್ಗಿನ ಎದೆಯೋಳೆ, ಮಾವನ ಮಗಳೆ,
ಬಾಯಾರಿ ಬಂದೆ ಕೊಡುನೀರ ॥ ”

ಇದ್ದಕ್ಕಿದ್ದಂತೆ ಇದೇನು ಬಂದಿತೆಂದು ಲೀಲಾವತಿ ಕತ್ತೆತ್ತಿ ನೋಡಿದಳು—ದಿವಾಕರ ಕಾವ್ಯೋನ್ಮಾದದಲ್ಲಿ ಇದ್ದ. ಅವಳು ಎದ್ದು ಬಂದು ಅವನ ಕೈಲಿದ್ದ ಪುಸ್ತಕವನ್ನು ಕಿತ್ತು ಮೇಜಿನ ಮೇಲೆ ಇಟ್ಟಳು—

ಆಗ ತುಂಟನಗೆ ನಗುತ್ತ, ಬಳಿಯಲ್ಲಿ ನಿಂತ ಲೀಲಾವತಿಯನ್ನು ನೋಡಿ,

“ ಸಂಗಾತಿಹೆಣ್ಣು ಜಂಬುನೇರಳೆಹಣ್ಣು,
ಮುಖಭಾವ ಮುಂಗಾರುಮಿಂಚುಹೊಳೆದಂಗ....”

ಎಂದು ಮತ್ತೊಂದು ಜಾನಪದ ಗೀತೆ ಆರಂಭಿಸಿದ.

ಆಗ ರೂಮಿನ ಹೊರಗೆ ಯಾರೋ ಬಂದ ಶಬ್ದವಾಗಲು ಅವರು ದಿವಾಕರನ ಹಾಡನ್ನು ಕೇಳಿಬಿಟ್ಟಾರೆಂದು ಹೆದರಿ, ಅವನ ಬಾಯಿಮುಚ್ಚಲು

ಹೋದಳು. ಅವಳ ಮೃದುವಾದ ಹಸ್ತಗಳನ್ನು ಬಳಿಗೆ ಸರಿಸುತ್ತಾ ಹೇಳಿದ—

" ಕೆಂಪಿನ ಹೆಣ್ಣಿಗೂ, ಸಂಪಿಗೆ ಹೂವಿಗೂ,
ಅಂತ್ರಾಟಕಿರುವ ಹುಣಿಸೆಯ ಚಿಗುರಿಗೂ,
ಎಂತವರೂ ಬಾಯಿ ಬಿಡುವರು "

ಎಂದು ಇನ್ನೊಂದು ಜನಪದಗೀತ ಹೇಳಿದ. ಇದನ್ನು ಕೇಳಿ ಲೀಲಾವತಿಗೆ ನಗು ಬರದೆ ಇರಲಿಲ್ಲ. ಜನಪದ ಗೀತೆಗಳು ಶೃಂಗಾರವನ್ನು ಎಷ್ಟು ಚೆನ್ನಾಗಿ ರೂಪಿಸಬಲ್ಲದೆಂಬುದು ಅವಳಿಗೆ ಮೊದಲಬಾರಿಗೆ ಅರಿವಾಯಿತು. ಆದರೂ ಅವಳು ಮುನಿಸಿಕೊಂಡು ನಿಂತಳು. ಅದನ್ನು ಕಂಡು ದಿವಾಕರ ಭಾವಾವೇಶದಲ್ಲಿ ಹೇಳಿದ.

" ಬೀದೀಲಿ ನಿಂತು ಬಿಡಿಮುತ್ತು ಕೇರೋಳೆ,
ನೆತ್ತೀಲಿ ಪದ್ಮದಹರಳೋಳೆ, ಸೆಟ್ಗಾತಿ
ಮುತ್ತು ಕೊಟ್ಟೇನು ತಿರುಗ್ ಹೆಣ್ಣೇ...."

ಇದನ್ನು ಕೇಳಿ ಇನ್ನು ತಾನು ಅಲ್ಲಿ ಇದ್ದರೆ ತನಗೆ ಮಾನ ಬರುವುದಿಲ್ಲವೆಂದು ಕೂಡಲೇ ಅಲ್ಲಿಂದ ಹೊರಟುಹೋದಳು. ಹೀಗೆ ದಿವಾಕರ ತನ್ನ ಕವನಗಳಿಂದ ಲೀಲಾವತಿಯನ್ನು ಗೋಳು ಹೊಯ್ದುಕೊಳ್ಳುತ್ತಿದ್ದ.

ದಿವಾಕರನಿಗೆ ಸಂಗೀತವೆಂದರೆ ಪ್ರಾಣ. ಅದಕ್ಕೆ ಬೇಕಾಗಿದ್ದ ಶಾರೀರ ಅವನಿಗೆ ಇಲ್ಲದಿದ್ದರೂ, ಸಂಗೀತ ಪ್ರೇಮದಿಂದ ಯಾರೂ ಇಲ್ಲದ ಹೊತ್ತುನೋಡಿಕೊಂಡು, ತನ್ನಲ್ಲೇ ಹಾಡಿಕೊಳ್ಳುತ್ತಿದ್ದ. ಮನೆಯಲ್ಲಿ ರೇಡಿಯೋ ಇದ್ದುದರಿಂದ, ಎಲ್ಲ ಕೇಂದ್ರಗಳಲ್ಲಿ ಪ್ರಸಾರವಾಗುತ್ತಿದ್ದ ಸಂಗೀತ ಸುಧೆಯಲ್ಲಿ ತನ್ನ ಒಲವು ಹೆಚ್ಚಾಗಿ, ಕೊಳಲು ವಾದನಕ್ಕೆಂದು ಕಂಡುಕೊಂಡಿದ್ದ. ಅವನು ಪೇಟೆಯಲ್ಲಿ ಸೊಗಸಾದ ಕೊಳಲನ್ನು ಕೊಂಡು ತಂದು, ಮನೆಯಲ್ಲಿ ಇಟ್ಟರೆ ಇತರರು ನೋಡಿಬಿಟ್ಟಾರೆಂದು, ಗೆಳೆಯನ ಕೋಣೆಯಲ್ಲಿ ಇಟ್ಟಿದ್ದು, ಪ್ರತಿದಿನ, ಒಂದೆರಡು ತಾಸು ಕೊಳಲು ಅಭ್ಯಾಸ ಮಾಡುತ್ತಿದ್ದ.

ದಿವಾಕರನಿಗೆ ಲೀಲಾವತಿಯ ಸೌಂದರ್ಯ, ನಡೆನುಡಿ ಎಷ್ಟು ಹೆಮ್ಮೆಯ ವಿಷಯವಾಗಿತ್ತೊ ಅವಳ ಕೋಕಿಲೆಯ ಕಂಠ ಶ್ರೀಯೂ ಅಷ್ಟೇ

ಹೆಮ್ಮೆಯ ವಿಷಯವಾಗಿತ್ತು. ಲೀಲಾವತಿಗೆ ಸೊಗಸಾದ ಕಂಠವಿದ್ದರೂ ಸಂಗೀತದ ಬಗ್ಗೆ ಅವಳಿಗೆ ಅಷ್ಟಾಗಿ ಆಸಕ್ತಿ ಇರಲಿಲ್ಲ. ಎಂದಾದರೂ ಬೇಸರವಾದರೆ ಹಾಡಿಕೊಳ್ಳಲು ಒಂದೆರಡು ಕೀರ್ತನೆಗಳನ್ನು ಕಲಿತಿದ್ದಳೇ ಹೊರತು, ಶಾಸ್ತ್ರೋಕ್ತವಾಗಿ ಸಂಗೀತವನ್ನು ಯಾರಿಂದಲೂ ಪಾಠಮಾಡಿಸಿ ಕೊಂಡಿರಲಿಲ್ಲ. ಅವಷ್ಟನ್ನೇ ಶುದ್ಧವಾಗಿ, ಲಲಿತವಾಗಿ, ಕಿವಿಗೆ ಇಂಪಾಗು ವಂತೆ ಹಾಡುತ್ತಿದ್ದಳು. ಇವನ್ನು ಒಮ್ಮೆ ಕದ್ದು ಕೇಳಿದ್ದ ದಿವಾಕರ ಲೀಲಾ ವತಿಗೆ ಸಂಗೀತ ಕಲಿಯಲು ಪ್ರೋತ್ಸಾಹಿಸಿದ ಈ ಮಾತಿಗೆ ಮೊದಲು ಲೀಲಾವತಿಯಿಂದ ಪುಷ್ಟಿ ಸಿಕ್ಕಲಿಲ್ಲ. ಯಾಕೆಂದರೆ ಹಿಂದೊಮ್ಮೆ ಸಂಗೀತ ಕಲಿಯಲು ಹೋಗಿ, ಬರುತ್ತಿದ್ದ ಸಂಗೀತವನ್ನು ಮರೆತು, ಸಂಗೀತವೆಂದರೆ ತಾತ್ಸಾರಗೊಳ್ಳುವ ಸ್ಥಿತಿಗೆ ಬಂದಿದ್ದಳು.

ಒಮ್ಮೆ—ಲೀಲಾವತಿ ಆಗ ಹೈಸ್ಕೂಲ್ ಮೊದಲನೆ ತರಗತಿಯಲ್ಲಿ ಓದುತ್ತಿದ್ದಳು—ಚಿಂತಾಮಣಿಗೆ ಸಂಗೀತ ವಿದ್ವಾಂಸರೊಬ್ಬರು ಬಂದರು. ಅವರು ಸಂಗೀತ ಕಛೇರಿಯೊಂದನ್ನು ಮಾಡಿಸಲು ವಿಶ್ವನಾಥರಾಯರಿಗೆ ದುಂಬಾಲು ಬಿದ್ದರು. ಯಾಕೆಂದರೆ ಊರಿಗೆ ಮರಳಲು ಕೈಯಲ್ಲಿ ಕಾಸಿರ ಲಿಲ್ಲ. ಆತನದು ಯಾವುದೋ ಕಣಿವೆ ಕೆಳಗಿನ ಊರು, ಯಾವುದೋ ಸುಪ್ರಸಿದ್ಧ ಭಾಗವತರ ವಂಶಿಕನೆಂದು ಹೇಳಿಕೊಳ್ಳುತ್ತಿದ್ದ. ನಿರ್ವಾಹ ವಿಲ್ಲದೆ ವಿಶ್ವನಾಥರಾಯರು, ತಮ್ಮ ಗುಮಾಸ್ತರ ಕಡೆಯಿಂದ ಪುರ ಪ್ರಮುಖ ರನ್ನು ಕರೆಸಿ, ಒಂದು ಭಾನುವಾರ ಸಂಗೀತ ಕಛೇರಿಯೊಂದನ್ನು ಏರ್ಪಡಿಸಿ ದರು.

ಕಛೇರಿ ಆರಂಭವಾಯಿತು. ಸೌಮ್ಯವಾಗಿ 'ವಾತಾಪಿ'ಯನ್ನು ಭಜಿಸುವುದರಿಂದ ಆರಂಭವಾದ ಸಂಗೀತ ಕಛೇರಿ ಮುಗಿಯುವ ಹೊತ್ತಿಗೆ ರಣಗರ್ಜನೆಯ ಸ್ವರೂಪ ತೆಗೆದುಕೊಂಡಿತ್ತು. ಭಾಗವತರು ಶಾಸ್ತ್ರದಲ್ಲಿ ತಮಗಿರುವ ಪಾಂಡಿತ್ಯವನ್ನು ಪ್ರದರ್ಶಿಸಲು ಹೋಗಿ, ಕಣ್ಣೆದುರಿಗೆ ಕಾಣ ದಿದ್ದ ವೈರಿಯೊಬ್ಬನ ಮೇಲೆ ಯುದ್ಧಕ್ಕೆ ಹೊರಟಂತಿತ್ತು. ಅವರ ಪಲ್ಲವಿ, ಅನುಪಲ್ಲವಿ, ರಾಗತಾಳಗಳು ಯುದ್ಧದ ಕವಾಯತಿನಂತೆ ಇದ್ದುವು. ಕಛೇರಿ ಮುಗಿಯುವ ಮೊದಲು, ಯಾರದೋ ಸಲಹೆಯಂತೆ, ಅವರ

ಪ್ರಿಯವಾದ ರಾಗವೊಂದನ್ನು ಹಾಡಿತೋರಿಸಲು ಹೋಗಿ, ಮೈಮೇಲೆ ಭೂತ ಹೊಕ್ಕಿರುವಂತೆ, ತಲೆಯನ್ನು ಅಕ್ಕಪಕ್ಕಕ್ಕೆ ಕೊಡಹಿ, ವಾದ್ಯಗಾರರ ಮೇಲೆ ಏರಿಹೋದರು—ಅವರು ಅಪಸ್ವರ ನುಡಿಸಿದರಂತೆ—ಆಗ ಸಭೆಯಲ್ಲಿ ಗದ್ದಲವಾಗಿ ಭಾಗವತರ ಕಛೇರಿ ಹಠಾತ್ತನೆ ಕೊನೆಗೊಂಡಿತ್ತು. ಅವರು ಬೆವರು ಒರೆಸಿಕೊಳ್ಳುತ್ತಾ ಸಿಟ್ಟಿನಿಂದ ಸಂಗೀತ ಕಛೇರಿಯಿಂದ ಹೊರಕ್ಕೆ ಬಂದಾಗ, ವಿಶ್ವನಾಥರಾಯರು, ಹೋಗಿ ಹಾರ ಹಾಕಿ, ತುರಾಯಿ ಕೊಟ್ಟು ಪ್ರಯಾಸದಿಂದ ಒಳಕ್ಕೆ ಮತ್ತೆ ಕರೆದುಕೊಂಡು ಬಂದು, ರೈಲು ಚಾರ್ಜಿಗೆ ಬೇಕಾದಷ್ಟು ಹಣ ವಸೂಲಾಗದೆ ಇದ್ದುದರಿಂದ ತಮ್ಮ ಕೈಯಿಂದಲೇ ಇಪ್ಪತ್ತುರೂಪಾಯಿ ಹಾಕಿ ಆ ಭಾಗವತ ಮಹಾಶಯರನ್ನು ಕಳುಹಿಸಿ ಕೊಟ್ಟರು. ಅವರು ಹೊರಡುವ ಮೊದಲು ತಮ್ಮೊಡನೆ ಉದಾರಾಂತಃ ಕರಣದಿಂದ ನಡೆದುಕೊಂಡ ವಿಶ್ವನಾಥರಾಯರಿಗೆ ಯಾವುದಾದರೂ ಉಪ ಕಾರಮಾಡಿಹೋಗಬೇಕೆಂದು, ಅವರ ಮಗಳು ಲೀಲಾವತಿಗೆ ಬಲವಂತ ವಾಗಿ, ನಾಲ್ಕು ವರ್ಣ ಕಲಿಸಿಕೊಡಲು ನಿಂತರು. ಭಾಗವತರ ಕೈಯಿಂದ ತಪ್ಪಿಸಿಕೊಳ್ಳಲಾರದೆ ಲೀಲಾವತಿ ಮೂರು ದಿನ ಸರಿಗಮಪದನಿಸಗಳ ಸಪ್ತ ವರ್ಣಗಳಲ್ಲಿ ಸರ್ಕಸ್ ಮಾಡಿ, ಬರುತ್ತಿದ್ದುದನ್ನೂ ಮರೆತುಕೊಂಡಳು. ಆ ಲಾಗಾಯಿತು ಸಂಗೀತ ಕಛೇರಿಯೆಂದರೆ ಅವಳಿಗೆ ಚಿಂತಾಮಣಿಯಲ್ಲಿ ನಡೆದ ಆ ಸಂಗೀತ ಕಛೇರಿ ನೆನಪಿಗೆ ಬಂದು, ಮೈ ಜುಂ ಎನ್ನುತ್ತಿತ್ತು. ಇದನ್ನರಿತಿದ್ದ ದಿವಾಕರ ಲೀಲಾವತಿಗೆ ಸಂಗೀತದಲ್ಲಿ ಅಭಿರುಚಿಯುಂಟುಮಾಡಲು, ಶಿವರಾಂಪೇಟೆಯ ಶ್ರೀರಾಮಮಂದಿರದಲ್ಲಿ ನಡೆಯುತ್ತಿದ್ದ ಸಂಗೀತ ಕಛೇರಿ ಗಳಿಗೆ ಕರೆದುಕೊಂಡು ಹೋಗಿ ನಿಜವಾದ ಸಂಗೀತದ ಅಲ್ಪಸ್ವಲ್ಪ ಪರಿಚಯ ಮಾಡಿಕೊಟ್ಟಿದ್ದ. ಇದರ ಜತೆಗೆ, ಮನೆಯಲ್ಲಿಯೇ ರೇಡಿಯೋ ಇದ್ದುದ ರಿಂದ, ಮದರಾಸು, ತಿರುಚಿಗಳಿಂದ ಬರುತ್ತಿದ್ದ ಸುಶ್ರಾವ್ಯವಾದ ಸಂಗೀತ ಕರ್ಣಾಟಕ ಸಂಗೀತದ ಸವಿ ಎಂತಹದೆಂದು ತಿಳಿಸಿಕೊಟ್ಟಿತ್ತು. ಹೀಗಾಗಿ ಲೀಲಾವತಿಗೆ ಮೈಸೂರಿಗೆ ಬಂದ ಮೇಲೆ ಸಂಗೀತದ ಕಡೆಗೆ ಮನಸ್ಸು ಒಮ್ಮೊಮ್ಮೆ ಹರಿಯುತ್ತಿತ್ತು. ಒಳ್ಳೆಯ ಸಂಗೀತ ಕೇಳಿದಾಗಲೆಲ್ಲ ಅವಳೂ ತನಗೆ ಬರುತ್ತಿದ್ದ ರಾಗಗಳನ್ನು ಮನಸ್ಸಿನಲ್ಲಿಯೇ ಗುಂಯ್ ಗುಟ್ಟು

  

ತ್ತಿದ್ದಳು. ಅಂತಹ ಸಮಯವನ್ನು ಸಾಧಿಸಿ, ಲೀಲಾವತಿ ಸಂಗೀತ ಕಲಿಯಬೇಕೆಂದೂ, ಬಾಯಿ ಹಾಡುಗಾರಿಕೆ ಇಷ್ಟವಿಲ್ಲದೆ ಹೋದರೆ ಯಾವುದಾದರೂ ವಾದ್ಯ ಕಲಿಯಬೇಕೆಂಗೂ ಹೇಳುತ್ತಿದ್ದ. ಕನ್ನಡದಲ್ಲಿ ಇರುವ ಅಪೂರ್ವವಾದ ರಾಗಸಂಪತ್ತು, ದಕ್ಷಿಣಾದಿ ಸಂಗೀತದಲ್ಲಿ ಕರ್ನಾಟಕ ಸಂಗೀತದ ಹಿರಿಮೆ, ಇದಕ್ಕಾಗಿ ದುಡಿದ ಪುರಂದರ, ಕನಕ, ಜಗನ್ನಾಥ ದಾಸರ ಬಗ್ಗೆ ದೀರ್ಘವಾಗಿ ಭಾಷಣಮಾಡಿ, ಲೀಲಾವತಿಗೆ ಕರ್ನಾಟಕ ಸಂಗೀತದ ಹಿರಿಮೆಯ ಕೆಲವಂಶವಾದರೂ ತಿಳಿಯುವಂತೆ ಮಾಡಿದ್ದ. ಅಲ್ಲದೆ ಆಗಾಗ್ಗೆ ತನ್ನ ಕಾಲೇಜಿನ ಉತ್ಸವಗಳಿಗೆ ಕರೆದುಕೊಂಡು ಹೋಗಿ, ಆ ಸಂದರ್ಭದಲ್ಲಿ ನಡೆಯುತ್ತಿದ್ದ ಕಾವ್ಯವಾಚನ, ಗಮಕಗಳ ಪರಿಚಯ ಮಾಡಿಕೊಟ್ಟು ಆಧುನಿಕ ಕೀರ್ತನೆಗಳನ್ನು ಮನಮೋಹಕವಾಗಿ ಹಾಡಬಹುದೆಂಬ ವಿಷಯ ಮನಗಾಣಿಸಿದ್ದ. ಈಗಲೀಗ ಲೀಲಾವತಿಗೆ ಕನ್ನಡದ ಹಾಡುಗಬ್ಬಗಳೆಂದರೆ ಪ್ರೀತಿಯುಂಟಾಗಿತ್ತು. ಬೇಂದ್ರೆ, ವಿ. ಸೀ, ಇನ್ನಿತರರ ಕವನಗಳನ್ನು ಕಲಿತುಕೊಳ್ಳುವ ಚಪಲ ಉಂಟಾಗಿತ್ತು. ಹೀಗೆ ಲೀಲಾವತಿಯ ಮನಸ್ಸು ಸಂಗೀತದ ಕಡೆಗೆ ಒಲಿಯುತ್ತಿರುವಾಗ, ಒಂದು ದಿನ ಸಂಜೆ ವಾಯು ಸೇವನೆಗೆಂದು—ಕುಕ್ಕರಹಳ್ಳಿಕೆರೆ ಏರಿಯ ಮೇಲೆ ಹೋಗಿದ್ದಾಗ ಈ ಪ್ರಸ್ತಾಪ ಲೋಕಾಭಿರಾಮವಾಗಿ ಬಂತು. ಲೀಲಾವತಿ ಆಗಷ್ಟೇ ಯಾವುದೋ ಗೀತೆಯನ್ನು ಗೊಣಗಿಕೊಳ್ಳುತ್ತಿದ್ದುದರಿಂದ, ಅದನ್ನು ಗಟ್ಟಿಯಾಗಿ ಹಾಡಲು ದಿವಾಕರ ಹೇಳಿದ. ಸಂಜೆಯ ಮಂಜುಳಗೀತ ಎಲ್ಲೆಡೆಯಲ್ಲಿ ಹಬ್ಬತೊಡಗಿತ್ತು. ಸೂರ್ಯಾಸ್ತವಾಗಿದ್ದು, ಆಕಾಶವೆಲ್ಲ ಬಣ್ಣಬಣ್ಣದ ಮೋಡಗಳಿಂದ ಸಿಂಗಾರವಾಗಿತ್ತು. ತಂಗಾಳಿ ನೀರಿನ ಕಡೆಯಿಂದ ಮೆಲ್ಲ ಮೆಲ್ಲನೆ ಬೀಸುತ್ತಿತ್ತು. ಎಲ್ಲೆಡೆಯಲ್ಲಿ ಸ್ತಬ್ಧತೆ ಆವರಿಸಿತ್ತು. ಲೀಲಾವತಿ, ದಿವಾಕರರು ಅಲ್ಲಿನ ಒಂದು ಶಿಲಾಸನದ ಮೇಲೆ ಕುಳಿತುಕೊಂಡರು. ಆಗಲೇ ದಿವಾಕರ ಲೀಲಾವತಿಯನ್ನು ಹಾಡಲು ಹೇಳಿದ್ದು. ಈ ಮಾತು ಕೇಳಿ

"ಕೆನ್ ಐ ಸಿಂಗ್? (ನನ್ನಿಂದ ಹಾಡಲಾಗುತ್ತದೆಯೆ?)" ಎಂದಳು.

ಈ ಮಾತು ಕೋಕಿಲೆ ತನ್ನ ಸಂಗಾತಿ ಕೋಕಿಲೆಯನ್ನು ತಾನು ಹಾಡಬಲ್ಲನೆ? ಎಂದು ಪ್ರಶ್ನಿಸಿದಂತೆ—ದಿವಾಕರನಿಗೆ ಅನಿಸಿತು.

" ನೀನು ಹಾಡಬಲ್ಲೆ ಮಾತ್ರವಲ್ಲ, ಇನ್ನೊಬ್ಬರನ್ನೂ ಹಾಡಿಸಬಲ್ಲೆ !" ಎಂದ ದಿವಾಕರ.

ಲೀಲಾವತಿ ಈ ಉತ್ತರದಿಂದ ಮಾತನಾಡದಿದ್ದರೂ ತನ್ನಲ್ಲೆ ನಸುನಕ್ಕಳು.

" ಲೀಲಾ, ನಿನಗೆ ದೇವರು ಎಂತಹ ದಿವ್ಯವಾದ ಕಂಠಶ್ರೀಯನ್ನು ಕೊಟ್ಟಿರುವನೆನ್ನುವ ಕಲ್ಪನೆ ಇಲ್ಲ. ದೇವರಿತ್ತಿರುವ ಈ ಅಮೋಘವಾದ ಪ್ರಸಾದವನ್ನು ನೀನು ಮೂಲೆ ಗುಂಪಾಗಿಸಿ, ಮಹಾಪರಾಧ ಮಾಡುತ್ತಿದ್ದೀಯೆ. ಮನಸ್ಸು ಮಾಡಿದರೆ ನಿಮಿಷಾರ್ಧದಲ್ಲಿ ಗಾನರಾಣಿಯಾಗ ಬಲ್ಲ ನೀನು ವೃಥಾ ನಿನ್ನ ಕಂಠಶ್ರೀಯನ್ನು ದುರ್ಲಕ್ಷಿಸುತ್ತಿರುವೆ—ನಿಜವಾಗಿಯೂ ಇದು ದೌರ್ಭಾಗ್ಯವೇ ಸರಿ " ಎಂದ.

ಈ ಮಾತು ಕೇಳಿ ಲೀಲಾವತಿಗೆ ನಗು ಬಂತು.

ಅವಳೆಂದಳು : " ದಿವಾಕರ ಈಚೆಗೆ ನಿನ್ನ ಬುದ್ಧಿ ಒಣಮರದಂತೆ ಚಿಗುರುತ್ತಿದೆ. "

" ಯಾಕೆ ? "

" ಇನ್ನೇನು ? ಸಂಗೀತದ 'ಸರಿಗಮ ಪದನಿಸ' ಬಾರದಿರುವ ನನ್ನನ್ನು ಗಾನರಾಣಿ ಎಂದು ಹೇಳುತ್ತಿರುವೆಯಲ್ಲ ? "

ಈ ಮಾತಿಗೆ ದಿವಾಕರ ಗಂಭೀರವಾಗಿ ಉತ್ತರ ಕೊಟ್ಟ " ನಿನ್ನ ಕಂಠಶ್ರೀಯೋಗ್ಯತೆ ನಿನಗೆ ತಿಳಿಯದೆ ಹೋದರೆ ಇದು ನಿನ್ನ ಮೌಢ್ಯವಲ್ಲದೆ ಬೇರೆಯಲ್ಲ." ಅವನ ಮಾತಿನಲ್ಲಿ ವಿಷಾದ ಅಡಗಿತ್ತು. ಕ್ಷಣಕಾಲ ದಿವಾಕರ ಮೌನವಾಗಿ ಕುಳಿತ. ಅದನ್ನು ಕಂಡು ಲೀಲಾವತಿ

" ನನ್ನ ಮಾತಿನಿಂದ ನಿನಗೆ ಬೇಸರವಾಯಿತೆ ದಿವೂ ? " ಎಂದಳು ಪ್ರೀತಿಯಿಂದ.

" ನಿನ್ನ ಮಾತಿನಿಂದ ನನಗೆ ಬೇಸರವಿಲ್ಲ. ಆದರೆ ನಿನ್ನ ಕಂಠಶ್ರೀಯ ಬಗ್ಗೆ ನಿನಗಿರುವ ನಿರ್ಲಕ್ಷ್ಯವನ್ನು ಕಂಡು ಬೇಸರವಾಯಿತು ಅಷ್ಟೇ " ಎಂದ.

" ನೋಡು ದಿವೂ, ನನ್ನ ವಿಷಯದಲ್ಲಿ ನಿನಗೆ ತುಂಬಾ ಹೆಮ್ಮೆ ಇದೆ ಎಂಬುದನ್ನು ನಾನು ಬಲ್ಲೆ. ಆದರೆ ನನ್ನಲ್ಲಿ ಇಲ್ಲದ ಶಕ್ತಿಯನ್ನು ಊಹಿಸಿ,

ಹುರುಳಿಲ್ಲದ ಅಭಿಮಾನ ತಳೆದರೆ ನಾನೇನು ಮಾಡಬೇಕು. ನಿಜ ಹೇಳುವುದಾದರೆ—ನಾನೆಷ್ಟು ಪ್ರಯತ್ನಿಸಿದರೂ ಸಂಗೀತಕಲೆ ನನಗೆ ಸಿದ್ಧಿಸುವುದಿಲ್ಲ. ಒಳ್ಳೆಯ ಕಂಠವಿದ್ದ ಮಾತ್ರಕ್ಕೆ ಸಂಗೀತ ಒಲಿಯುವುದೆಂದು ತಿಳಿದಿದ್ದೀಯಾ? " ಎಂದಳು ಕಳಕಳಿಯಿಂದ.

" ಶ್ರದ್ಧಾಪೂರ್ಣವಾಗಿ ಸಾಧಿಸುವ ಸಾಧಕರಿಗೆ ಸಿದ್ಧಿಸದ ಕಲೆ ಯಾವುದು? ಆದರೆ ಅವರಲ್ಲಿ ಕಲೆಯ ಅಂಶವಿರಬೇಕು. ಅದು ನಿನ್ನಲ್ಲಿ ಇದೆ ಎನ್ನಲು ನಿನಗಿರುವ ಮಂಜುಳ ಕಂಠ, ತಾಳ ಜ್ಞಾನವೇ ಸಾಕ್ಷಿ"

ಈ ಮಾತು ಕೇಳಿ ಲೀಲಾವತಿ ಆಲೋಚಿಸುತ್ತಾ ಕುಳಿತಳು.

" ಯಾಕೆ ಸುಮ್ಮನೆ ಕುಳಿತೆ ? " ಎಂದು ಪ್ರಶ್ನಿಸಿದ.

" ಇನ್ನೇನು ಮಾಡಲಿ—ನೀನು ಏನೇನೋ ದೊಡ್ಡ ದೊಡ್ಡ ಮಾತು ಹೇಳಿಬಿಟ್ಟಿದ್ದಿ. ಅವನ್ನೇ ಯೋಚಿಸುತ್ತಾ ಕುಳಿತೆ."

" ನಾನು ಹೇಳಿದ ಮಾತು ಪೂರ್ಣವಾಗಿ ಸತ್ಯವೆಂದು ತಿಳಿ. ಪ್ರಯತ್ನಕ್ಕೆ ಮೀರಿದ ಕೆಲಸವಿಲ್ಲ. ಸಾಧಿಸುವುದು-ಬಿಡುವುದು ಬೇರೆ ವಿಷಯ. ಅದು ಲಭ್ಯದ ಮಾತು. ಪುರಾಕೃತ ಕರ್ಮವಿಶೇಷದಂತೆ ಆಯಾ ವ್ಯಕ್ತಿಗೆ ಲಭಿಸುತ್ತದೆ. ಆದರೆ ಪ್ರಯತ್ನಮಾಡುವುದರಿಂದ ಏನೂ ನಷ್ಟವಿಲ್ಲ. ಈಗ ನನ್ನ ವಿಷಯವನ್ನೇ ತೆಗೆದುಕೋ. ನನಗೆ ದೇವರು ನಿನಗೆ ಕೊಟ್ಟಂತೆ ಕಂಠಶ್ರೀಯಾಗಲಿ, ತಾಳಜ್ಞಾನವಾಗಲಿ ಕೊಟ್ಟಿಲ್ಲವಾದರೂ, ನನಗೆ ಕೊಳಲು ಕಲಿಯುವ ಹುಚ್ಚು ಹತ್ತಿ, ಇನ್ನೊಬ್ಬರ ಸಹಾಯವಿಲ್ಲದೆ ತಕ್ಕ ಮಟ್ಟಿಗೆ ಕೊಳಲು ನುಡಿಸುವುದನ್ನು ಕಲಿತಿಲ್ಲವೆ? ಪ್ರಯತ್ನಪಟ್ಟರೆ ಯಾವುದೂ ಅಸಾಧ್ಯವಲ್ಲ" ಎಂದು ಹೇಳಿದ.

" ಹಾಗಾದರೆ ನಿನಗೆ ಕೊಳಲು ಬಾರಿಸುವುದು ಬರುತ್ತೇನು ? ನನಗೆ ತಿಳಿದೇ ಇರಲಿಲ್ಲ. ನನ್ನ ಮುಂದೆ ಇದುತನಕ ಒಮ್ಮೆಯಾದರೂ ಬಾರಿಸಲಿಲ್ಲವಲ್ಲ—ಕಳ್ಳ ? " ಎಂದು ದಿವಾಕರನ ಕೈಯನ್ನು ಹಿಸುಕಿದಳು.

ದಿವಾಕರ ನಸುನಕ್ಕು—

" ಏನೋ ಕೊಳಲು ಕಲಿಯಬೇಕೆನಿಸಿತು. ಕಲಿಯಲು ಆರಂಭಿಸಿದೆ. ನನ್ನದು ಯಾವ ಪಾಂಡಿತ್ಯವೆಂದು ನಿಮ್ಮೆಲ್ಲರೆದುರಿಗೆ ಊದಿ ತೋರಿಸಲಿ ?

ಮುಂದೆ ಕಾಲಬಂದಾಗ ತೋರಿಸುವುದೆಂದು ಸುಮ್ಮನಿದ್ದೆ. ಈಗ ಅಕ ಸ್ಮಾತ್ ನಾನು ಬಾಯಿಬಿಟ್ಟುಬಿಟ್ಟೆ—ದಮ್ಮಯ್ಯ, ನೀನು ಯಾರಿಗಾದರೂ ನಾನು ಕೊಳಲು ಕಲಿಯುತ್ತಿರುವ ವಿಷಯ ತಿಳಿಸಿದರೆ—ನನ್ನಾಣೆ ಇದೆ" ಎಂದ.

"ಕೊಳಲು ಕಲಿತಿರುವುದೇ ಉಂಟಂತೆ—ಅದನ್ನೇಕೆ ನುಡಿಸಬಾರದು. ಇನ್ನೊಬ್ಬರಿಗೆ ಹೇಳಿದರೆ ಅದರಲ್ಲಿ ಏನು ತಪ್ಪು?" ಎಂದಳು.

"ನಾನು ಕೊಳಲನ್ನು ಕಲಿಯುತ್ತಿರುವುದು ಒಂದು ಹಠಕ್ಕಾಗಿ. ನನ್ನ ಗೆಳೆಯನೊಬ್ಬ ನಾನು ಕೊಳಲು ಕಲಿಯುತ್ತೇನೆಂದಾಗ ಹಾಸ್ಯಮಾಡಿ ತಿರಸ್ಕಾರವಾಗಿ ನಕ್ಕ. ನನಗೆ ಈ ಮಾತಿನಿಂದ ತುಂಬಾ ಅವಮಾನ ವಾಯಿತು. ಯಾಕೆಂದರೆ ಗೆಳೆಯರ ಸಮ್ಮುಖದಲ್ಲಿ ಈ ಮಾತು ಹೇಳಿದ್ದ. ಈ ವರ್ಷದ 'ಯೂನಿಯನ್ ಡೇ'ಹೊತ್ತಿಗೆ ನಾನು ಕೊಳಲಿನ ಕಛೇರಿ ನಡಸದೆ ಹೋದರೆ ನಾನು ದಿವಾಕರನೇ ಅಲ್ಲ ಎಂದು ಶಪಥಮಾಡಿ, ಅಂದಿ ನಿಂದಲೇ ಕೊಳಲನ್ನು ಕಲಿಯಲು ಮೊದಲಿಟ್ಟೆ. ಇದುವರೆಗೆ ಗೋಪ್ಯವಾಗಿರಿ ಸಿದ್ದ ಸಂಗತಿ ಇಂದು ಬಯಲುಮಾಡಿಬಿಟ್ಟೆ. ಹೋಗಲಿ ನೀನು ಯಾರೊಂದಿಗೂ ಈ ಸುದ್ದಿ ಎತ್ತಬೇಡ."

"ಹಾಗೇ ಆಗಲಿ. ಆದರೆ ಒಂದು ಷರತ್ತು. ನೀನು ನನ್ನ ಮುಂದೆ ಕೊಳಲು ಒಂದು ಬಾರಿ ಊದುವುದಾದರೆ—ನಾನು ಈ ವಿಷಯ ಯಾರಿಗೂ ಹೇಳುವುದಿಲ್ಲ."

ಈಗ ದಿವಾಕರ ಇಕ್ಕಟ್ಟಿಗೆ ಸಿಕ್ಕಿಕೊಂಡ. ಅವನಿಗೆ ಈಗ ಲೀಲಾ ವತಿಯ ಮುಂದೆ ತನ್ನ ಕೊಳಲನ್ನು ಊದದ ಹೊರತು ಗತ್ಯಂತರವಿಲ್ಲ ವಾಯಿತು. ಅವನು—ತನ್ನ ಕೋಟಿನ ಪಾರ್ಶ್ವದಲ್ಲಿ ಬಚ್ಚಿಟ್ಟಿದ್ದ ಕೊಳ ಲನ್ನು ಹೊರತೆಗೆದು, ತನಗೆ ಬಂದ ಒಂದೆರಡು ಗೀತೆ ನುಡಿಸಿ, ನಾಗಸ್ವರ ದೊಂದಿಗೆ ಮುಗಿಸಿದ. ದಿವಾಕರನ ಕೊಳಲುವಾದನ ಲೀಲಾವತಿಯ ಮೇಲೆ ದಿವಾಕರ, ನಿರೀಕ್ಷಿಸಿದುದಕ್ಕಿಂತಲೂ ಹೆಚ್ಚಿನ ಪರಿಣಾಮ ಉಂಟುಮಾಡಿತು. ಅವಳು ದಿವಾಕರನನ್ನು ಇನ್ನೂ ಅಂಬೆಗಾಲಿಕ್ಕುವ ಅಭ್ಯಾಸಿ ಎಂದು ಭಾವಿಸಿ ದ್ದಳು. ಆದರೆ ಅವನು ತನ್ನ ರಂಗದಲ್ಲಿ ಅತ್ಯಲ್ಪಕಾಲದಲ್ಲಿಯೇ ಗೀತೆ

ಗಳನ್ನು ಸುಸ್ವರವಾಗಿ ನುಡಿಸುವ ಜಾಣ್ಮೆಯನ್ನು ಸಂಪಾದಿಸಿಕೊಂಡುದನ್ನು ನೋಡಿ ಅಚ್ಚರಿಪಟ್ಟಳು. ಅವನ್ನೇ ವ್ಯಕ್ತಪಡಿಸುತ್ತಾ ಹೇಳಿದಳು.

" ದಿವ್ಯಾ, ನೀನು ಇಷ್ಟು ಸೊಗಸಾಗಿ ಕೊಳಲು ನುಡಿಸುವೆ ಎಂದು ನಾನು ಖಂಡಿತ ತಿಳಿದಿರಲಿಲ್ಲ. "

" ಹೋಗಲಿ. ಈಗಲಾದರೂ ತಿಳಿಯಿತಲ್ಲ, ಮನಸ್ಸು ಮಾಡಿದರೆ ಮನುಷ್ಯನಿಗೆ ಯಾವುದೂ ಅಸಾಧ್ಯವಿಲ್ಲವೆಂಬ ವಿಷಯ? ನೀನೂ ನನ್ನಂತೆಯೇ ಸಂಗೀತ ಕಲಿಯಲು ಆರಂಭ ಮಾಡಬಹುದಲ್ಲ?—"

" ಆಗಲಿ. ಸಾವಕಾಶವಾಗಿ ಆರಂಭಿಸೋಣ. "

" ಯಾಕೆ ಇನ್ನೂ ಅನುಮಾನವೆ? ನಾನು—ಸಂಗೀತದ ಲವಲೇಶ ಗಂಧವಿಲ್ಲದ ನಾನು—ನಾಲ್ಕು ಗೀತೆಗಳನ್ನು ಕೊಳಲಿನಲ್ಲಿ ನುಡಿಸಬಹುದಂತೆ. ಒಳ್ಳೆಯ ಶಾರೀರವಿರುವ, ತಾಳಜ್ಞಾನವಿರುವ ನೀನು ಸಂಗೀತ ಕಲಿಯುವ ವಿಷಯದಲ್ಲಿ ಇನ್ನೂ ಹಿಂದುಮುಂದೆ ತುಳಿಯುತ್ತಿರುವುದು ಸರಿಯೋ, ನೀನೇ ಯೋಚನೆಮಾಡು " ಎಂದು ಲೀಲಾವತಿಯನ್ನು ಜರೆಯುವಷ್ಟು ಜರಿದು 'ಆಗಲಿ ಕಲಿಯುತ್ತೇನೆ' ಎಂದು ಅನ್ನಿಸಿಯೇ ಬಿಟ್ಟ. ಅದೇ ದಿನ ಮೊದಲ ಪಾಠ ಆರಂಭಿಸಿ, ಸ್ವರ ಪ್ರಸ್ತಾರ ಹೇಳಿ ಕೊಟ್ಟು ಸಂಗೀತ ಪ್ರಪಂಚದಲ್ಲಿ ಆ ಸಪ್ತಸ್ವರಗಳ ಹಿರಿಮೆ ಏನುಂಟೆಂಬುದರ ಬಗ್ಗೆ ತಾನು ಕೇಳಿ ತಿಳಿದ ನಾಲ್ಕು ಮಾತನ್ನು ಲೀಲಾವತಿಗೆ ಹೇಳಿದ. ಅನಂತರ ಲೀಲಾವತಿಯನ್ನು ಯಾವುದಾದರೊಂದು ಗೀತೆ ಹಾಡಲು ಬಲವಂತ ಮಾಡಿದ.

" ನಿನ್ನ ಅದ್ಭುತವಾದ ಮುರಳಿನಾದನ ಕೇಳಿದ ಮೇಲೆ ನಾನು ಹಾಡುವುದೆಂದರೆ ಚಿರೋಟಿಗೆ ಉಪ್ಪು ಬಡಿಸಿಕೊಂಡಂತೆ " ಎಂದು ಜಾರಿ ಕೊಳ್ಳಲು ನೋಡಿದಳು. ದಿವಾಕರನಂತಹ ಪಂಡಿತನ ಎದುರು ಹಾಡುವು ದಕ್ಕೆ ಲೀಲಾವತಿಗೆ ನಾಚಿಕೆಯಾಯಿತು.

" ಎಲೆಯಲ್ಲಿರುವುದು ಉಪ್ಪೋ ಸಕ್ಕರೆಯೋ ಎನ್ನುವುದು ರುಚಿ ನೋಡಿದಾಗಲೇ ಅಲ್ಲವೇ ತಿಳಿಯುವುದು? "

" ನಾನು ಬಾಯಿ ತೆರೆದರೆ ಸುರಿಯುವುದು ಉಪ್ಪೇ ಹೊರತು ಸಕ್ಕರೆ

ಯಲ್ಲ. ”

“ ನೀನೇಕೆ ಹಾಗೆ ತಿಳಿಯಬೇಕು. ನಿನ್ನನ್ನು ನೋಡಿದವರಿಗೆ, ನಿನ್ನ ಧ್ವನಿಯನ್ನು ಕೇಳಿದವರಿಗೆ ಹಾಗೆಂದಿಗೂ ಅನಿಸದು. ”

“ ಕೇವಲ ರೂಪ ನೋಡಿ ಬೆರಗಾಗಬೇಡ. ”

“ ಇಲ್ಲ, ರುಚಿಯನ್ನು ನೋಡಿ ಬೆರಗಾಗಿದ್ದೇನೆ. ”

“ ಎಂದು ? ”

“ ಇಂದೇ. ”

“ ಸುಳ್ಳು ! ”

“ ನಿಜ ! ”

“ ನಾನು ಇಂದು ಹಾಡಲೇ ಇಲ್ಲ. ”

“ ಹೌದು ನಿಜ. ಆದರೆ ನಿನ್ನ ಒಂದೊಂದು ಮಾತೂ ನನಗೆ ಒಂದೊಂದು ಗೀತ. ”

“ ಓ ! ಹಾಗೋ ಸಂಗತಿ. ಹಾಗಾದರೆ ನನ್ನ ಮಾತುಗಳೆಲ್ಲ ಗೀತೆಯಾದರೆ ನಾನು ? ”

“ ನೀನು ಒಂದು ಮಹಾಕಾವ್ಯ. ”

“ ನೀನು ? ”

“ ಕವಿ. ”

“ ಸರಿ ಹೋಯಿತು. ನೀನು ಕವಿ ! ನಾನು ಕಾವ್ಯ !!........ ನಿನಗೆ ಹುಚ್ಚು ಹಿಡಿದಿಲ್ಲವಷ್ಟೆ? ”

“ ಹುಚ್ಚು ಹಿಡಿದಿದೆ ಎಂದರೆ ನೀನು ನಂಬುವೆಯಾ ? ”

“ ಏನು ! ನಿನಗೆ ಹುಚ್ಚೆ ? ಇದುವರೆಗೂ ಸರಿಯಾಗಿಯೇ ಇದ್ದೆಯಲ್ಲ ? ”

“ ಹಿಡಿದಿದೆ ಲೀಲಾ....ಹಿಡಿದಿದೆ. ನಿನ್ನನ್ನು ನೋಡಿದಾರಭ್ಯ ನನಗೆ ಹುಚ್ಚು ಹಿಡಿದಿದೆ.

“ ಎಂತಹ ಹುಚ್ಚು ? ”

“ ನಿನ್ನನ್ನು ನನ್ನವಳನ್ನಾಗಿ ಮಾಡಿಕೊಳ್ಳಬೇಕೆಂಬ ಹುಚ್ಚು.”

"ನಿನ್ನವಳನ್ನಾಗಿ ಅಂದರೆ ?"

"ನನ್ನವಳು ಅಂದರೆ ನನ್ನವಳೇ, ನನ್ನ ಜೀವದ ಜೀವ. ಬಾಳಿನ ಬೆಳಕು, ಪ್ರೇಮದ ಪ್ರೇಯಸಿ, ಕಣ್ಣಿನ ಬೊಂಬೆ, ಹೃದಯ ಸಾಂರಾಜ್ಞಿಯನ್ನಾಗಿ ಮಾಡಿಕೊಳ್ಳಬೇಕೆಂಬ ಆಸೆ—"

"ಹಾಗಾದರೆ ನಿನಗೆ ನಿಜವಾಗಿಯೂ ಹುಚ್ಚುಹಿಡಿದಿದೆ !"

"ನಿನಗೆ ಈಗ ಮನವರಿಕೆಯಾಯಿತೇ ?"

"ಇದುವರೆಗೂ ತಿಳಿದಿರಲಿಲ್ಲ. ನೀನು ಎಲ್ಲರಂತೆ ಇರುವೆ ಎಂದು ತಿಳಿದಿದ್ದೆ. ಆದರೆ ಈಗ ತಿಳಿಯಿತು. ಕವಿಯಾದ ನಿನಗೂ—ಹುಚ್ಚರ ಮಾತಿಗೂ ಹೆಚ್ಚು ವ್ಯತ್ಯಾಸವಿಲ್ಲವೆಂದು."

"ಯಾಕೆ? ಪ್ರೀತಿಯ ಮಾತು ಆಡಬಾರದೆ? ಪ್ರೇಮಪೂರ್ಣ ಸಂಬೋಧನೆಗಳೆಲ್ಲ ಕೇವಲ ಗ್ರಂಥಸ್ಥವಾಗಿಯೇ ಉಳಿಯಬೇಕೇ? ಹೇಳು. ನಿನಗೆ ನನ್ನ ಎಲ್ಲ ಮಾತು ಬೇಸರವಾದರೆ ತಿಳಿಸು—ಅವುಗಳನ್ನು ಇನ್ನೊಮ್ಮೆ ಬಳಸದಂತೆ ಎಚ್ಚರ ವಹಿಸುತ್ತೇನೆ."

"ನಿನಗೆ ಹೇಗೆ ಬೇಕೋ ಹಾಗೆ ಅನ್ನು. ಅದಕ್ಕೆ ನನ್ನ ಅಭ್ಯಂತರ ವಿಲ್ಲ. ಆದರೆ ನಮ್ಮ ಜೀವನ ನಾಟಕವಾಗದೆ ಇದ್ದರೆ ಸರಿ. ನಿಜ ಹೇಳುವುದಾದರೆ ನನಗೆ ಈ ಬಗೆಯ ನಾಟಕೀಯ ಸಂಬೋಧನೆಗಳು ಅರ್ಥಶೂನ್ಯ ಮಾತುಗಳು ಮಾತ್ರವಲ್ಲ. ಒಂದು ಬಗೆಯ ತಿಳಿಗೇಡಿತನದ ಪ್ರದರ್ಶನವೇ ಸರಿ."

"ನೀನು ಮನಸ್ಸು ಪೂರ್ವಕವಾಗಿ ಈ ಮಾತುಗಳನ್ನು ಹೇಳುತ್ತಿದ್ದರೆ ನಿನ್ನನ್ನು ಅರಸಿಕಳೆಂದೇ ಕರೆಯಬೇಕು."

"ನಾನು ಎಂದು ರಸಿಕಳಾಗಿದ್ದೇನೆ? ನಿನ್ನೊಡನೆ ನನ್ನ ಎಲ್ಲ ಮಾತುಗಳು ನನ್ನ ಅರಸಿಕತನದ ಕುರುಹಾಗಿ ತೋರಿದರೆ ನಾನು ರಸಿಕತೆಗೆ ಬೇರೊಂದು ರೀತಿಯಾಗಿ ಅರ್ಥಮಾಡಿಕೊಳ್ಳಬೇಕಾಗುತ್ತದೆ. ನಾಟಕೀಯ ಸಂಭೋದನೆಗಳಾದ ಪ್ರಿಯ, ಪ್ರಾಣಕಾಂತ, ಮನಮೋಹನಾಂಗ, ಮನೋ ವಲ್ಲಭ ಎಂದು ಕರೆದ ಮಾತ್ರಕ್ಕೆ ರಸಿಕತೆ ವ್ಯಕ್ತಪಡಿಸಿದಂತೆ ಆಯಿತೆ? ನಿಜವಾದ ರಸಿಕತೆ ಜೀವನದಲ್ಲಿ ಇರಬೇಡವೆ? ನನ್ನ ಅಭಿಪ್ರಾಯವಲ್ಲಿ

ರಸಿಕತೆ ಎಂದರೆ ಬಾಯಿಗೆ ಬಂದುದನ್ನು ಹರಟುವುದಲ್ಲ. ಜೀವನದ ಬಗ್ಗೆ ಸುರಸವಾದ ದೃಷ್ಟಿ, ನಡೆನುಡಿಗಳಲ್ಲಿ ನಯ ನಾಜೂಕು, ಸಾಹಿತ್ಯಕಲೆಗಳಲ್ಲಿ ಸಹೃದಯತೆ,—ಒಂದು ಮಾತಿನಲ್ಲಿ ಹೇಳುವುದಾದರೆ—ರಸಿಕತೆ ಎಂದರೆ ಶೃಂಗಾರ ಪ್ರೇಮಮಾತ್ರವಲ್ಲದೆ ಜೀವನದ ರಂಗದಲ್ಲಿ ಸಂಸ್ಕಾರಪೂರ್ಣ ನೋಟ."

ಈ ಮಾತು ಕೇಳಿ ದಿವಾಕರ ಸೆಟೆದು ನಿಂತ.

" ಹಾಗಾದರೆ ನನ್ನ ಮಾತು ವರ್ತನೆಗಳು ನಿನ್ನ ಅಭಿಪ್ರಾಯದಲ್ಲಿ ಕೇವಲ ಅರ್ಥಶೂನ್ಯವಾದವುಗಳೇ ಸರಿ."

" ನಿಜ ಹೇಳುವುದಾದರೆ—ನೀನು ಹೇಳಿದುದೆಲ್ಲ ಅಕ್ಷರಶಃ ಸತ್ಯ."

" ಹಾಗಾದರೆ ನಿನಗೆ ನನ್ನ ವಿಷಯದಲ್ಲಿ ಪ್ರೇಮವಿಲ್ಲವೇ ? "

" ಇಲ್ಲವೆಂದು ಹೇಳಿದವರು ಯಾರು ? "

" ನಿನ್ನ ಮಾತಿನ ಧೋರಣೆಯಿಂದ ಏನು ತಿಳಿದುಕೊಂಡಿರುವೆ ? "

" ನಿನಗೆ ನನ್ನಲ್ಲಿ ಪ್ರೇಮವಿಲ್ಲವೆ? ಹೋಗಲಿ ನೀನು ಪ್ರೇಮವೆಂದರೆ ಏನೆಂದು ತಿಳಿದಿರುವೆ ? "

" ಅದೊಂದು ದೈವಿಕಭಾವನೆ."

" ದೈವಿಕ ಭಾವನೆಯೋ ಅಥವಾ ಮನಸ್ಸಿನ ಭ್ರಮೆಯೋ."

" ನೀನು ಹೇಗಾದರೂ ಅರ್ಥಮಾಡಿಕೊ. ನನ್ನ ಅಭಿಪ್ರಾಯದಲ್ಲಿ 'ಪ್ರೇಮವೆನ್ನುವುದು ಪೂಜ್ಯವೂ ಪವಿತ್ರವೂ ಆದ ವಸ್ತು' ಅದು ಜಾತಿಮತ ವಯೋಧರ್ಮವನ್ನು ಮೀರಿ ಬರುವ ಭಾವ, ಹೃದಯಾಂತರಾಳದ ಬಯಕೆ—ಅಂತೆಯೇ ಮಾತಿಗೆ ನಿಲುಕದ ದೈವಿಕಭಾವ."

" ನಿನ್ನ ಮಾತು ನನಗೆ ಅರ್ಥವಾಗುವುದಿಲ್ಲ."

" ಯಾಕೆ ? "

" ಅವುಗಳಿಗೆ ಅರ್ಥವೇ ಇಲ್ಲ ! "

" ಹಾಗಾದರೆ ನೀನು ಹೃದಯಶೂನ್ಯೆ. ಮಾನವ ಸಹಜಭಾವ ಸಂಚಾರ ಕಾಣದ ಕಲ್ಲುವಿಗ್ರಹ."

ಉದ್ವೇಗದಲ್ಲಿ ನುಡಿದ ದಿವಾಕರ.

"ದಿವಾಕರ ನೀನು ಹೇಳುವುದೆಲ್ಲ ಮುಗಿದಿದ್ದರೆ ನನ್ನದೊಂದು ಆಲಿಸು. ನೀನು ತಿಳಿದಿರುವಂತೆ ನಾನು ಹೃದಯಶೂನ್ಯ ಕಲ್ಲುವಿಗ್ರಹವಲ್ಲ. ನಿಮ್ಮೆಲ್ಲ ರಂತೆಯೇ ರಕ್ತಮಾಂಸದಿಂದ ಆಗಿರುವ ಹೆಣ್ಣು. ಆದರೆ ನಾನು ನಿನ್ನಂತೆ ಭಾವಜೀವಿಯಲ್ಲ. ಭಾವಾತಿರೇಕದಲ್ಲಿ ವಿಚಾರವನ್ನು ಮರೆಯುವ ಭಾವುಕ ಳಲ್ಲ. ಆದುದರಿಂದ ನೀನು ನನ್ನನ್ನು ಹೇಗೆ ಕರೆದರೂ ನನಗೆ ಸಿಟ್ಟಿಲ್ಲ. ಆದರೆ ಒಂದು ಮಾತನ್ನು ನೀನು ನೆನಪಿನಲ್ಲಿ ಇಟ್ಟುಕೋ. ಈ ಜಗತ್ತಿನಲ್ಲಿ ಕೇವಲ ಭಾವನಾಜೀವಿಗಳಾಗಿದ್ದರೆ ಬದುಕುವುದು ಕಷ್ಟ. ಕನಸುಗಾರರಿಗೆ ವ್ಯಾವಹಾರಿಕ ಜಗತ್ತು ಕ್ರೂರವೂ, ನಿಂದ್ಯವೂ ಆಗುತ್ತದೆ. ಅವರಿಗೆ ಬಾಳು ದುಸ್ಸಹನೀಯವೂ, ನೀರಸವೂ ಆಗುತ್ತದೆ. ಜೀವನದಲ್ಲಿ ಈ ಬಗೆಯ ನಿರಸನೀವೃಷ್ಟಿ ಬೆಳೆಯುವಂತೆ ನೋಡಿಕೊಳ್ಳಬೇಕಾದರೆ ಭಾವಜೀವನ ಬಿಟ್ಟು ವಾಸ್ತವ ಜಗತ್ತನ್ನು ಸತ್ಯವೆಂದು ಒಪ್ಪಿಕೊಂಡು ಅದರೊಡನೆ ಹೆಣಗಬೇಕು. ಕೇವಲ ಪಲಾಯನವಾದಿತನದಿಂದ ಯಾವ ಪ್ರಯೋಜನವೂ ಇಲ್ಲ.... ಇನ್ನೊಂದು ವಿಷಯ ಸ್ಪಷ್ಟಪಡಿಸಲು ಪ್ರಯತ್ನಿಸುತ್ತೇನೆ. ನೀನು ನನ್ನೊಡನೆ ಇಷ್ಟು ಸಲಿಗೆಯಿಂದ ಇದ್ದರೂ ನನ್ನನ್ನು ನೀನು ಸರಿಯಾಗಿ ಅರ್ಥಮಾಡಿ ಕೊಳ್ಳದೆ ಹೋಗಿರುವೆ. ಹೀಗಾಗಿ ಅದನ್ನು ನಾನೇ ಸ್ಪಷ್ಟಪಡಿಸಬೇಕಾಗಿದೆ."

"ಹೇಳಿಬಿಡು ಲೀಲಾ. ನಿನಗೆ ನನ್ನ ಮೇಲೆ ಪ್ರೇಮವಿದೆಯೋ ಇಲ್ಲವೋ ಹೇಳಿಬಿಡು. ಯಾಕೆ ಸುಮ್ಮನೆ ನನ್ನನ್ನು ಕಾತರದ ಬೆಂಕಿಗೆ ನೂಕುತ್ತಿ ?"

"ಹೇಳುತ್ತೇನೆ.... ನಿನ್ನಲ್ಲಿ ನನಗೆ ಪ್ರೇಮವಿಲ್ಲವೆ? ಹೀಗೆಂದು ಹೇಳಿ ದವರು ಯಾರು? ನಿನ್ನ ಬಗ್ಗೆ ನನಗಿರುವ ಭಾವನೆಗಳು ಎಂಥವೆಂದು ನೀನು ತಿಳಿಯದೆ ಹೋಗಿರುವೆ. ಅದನ್ನು ಯಾವ ಹೆಸರಿನಿಂದ ಕರೆಯಬೇಕೋ ನಾನರಿಯೆ. ಅಂತೂ ನಿನ್ನ ವಿಷಯದಲ್ಲಿ ನನಗೆ ತುಂಬಾ ಆದರವಿದೆ, ಅಭಿ ಮಾನವಿದೆ, ಪ್ರೀತಿಯಿದೆ, ಮಮತೆ ಇದೆ—ನಾನು ಹುಟ್ಟುತ್ತಲೇ ತಾಯಿಯ ಪ್ರೀತಿ ಎಂತಹದೆಂದು ತಿಳಿಯದೆ ಹುಟ್ಟಿದೆ. ತಾಯಿ ಇದ್ದೂ ಆ ತಾಯಿ ತನದ ಪ್ರೀತಿಯನ್ನು ಅನುಭವಿಸುವ ಪುಣ್ಯ ನನಗೆ ಇಲ್ಲದೆ ಹೋಯಿತು. ಅದನ್ನು ಮತ್ತೆ ಅತ್ತೆಯ ಬಳಿ ಪಡೆದುಕೊಂಡಿರುವೆ. ಅಂತೆಯೇ ಅಣ್ಣ

ನಿದ್ದೂ ಸೋದರ ವಾತ್ಸಲ್ಯ, ಪ್ರೀತಿ ಎಂತಹದೆಂದು ತಿಳಿಯದೆ ಹೋದೆ. ಏಕೆಂದರೆ—ನಾನು ಅಣ್ಣನಿಗೆ ಬೇಡವಾದ ತಂಗಿಯಾಗಿ ಬೆಳೆದೆ. ಆದರೆ ಇಂದು ಆ ಬಗೆಯ ಪ್ರೀತಿ ವಿಶ್ವಾಸಗಳನ್ನು ನಿನ್ನಲ್ಲಿ ಕಂಡೆ. ನಿನ್ನ ಪ್ರೀತಿಗಾಗಿ ನನ್ನ ಹೃದಯವೆಷ್ಟು ಹಾತೊರೆಯುವುದೆಂಬುದನ್ನು ನೀನು ಬಲ್ಲೆಯಾ ದಿವ್ಯಾ ? "

" ನಾ ಬಲ್ಲೆ. ನಿನಗೆ ನನ್ನಲ್ಲಿ ಲವಲೇಶ ಪ್ರೀತಿ ಇಲ್ಲ. ನನ್ನ ಮೇಲೆ ನಿನ್ನ ಪ್ರೀತಿ ಇದ್ದುದಾಗಿದ್ದರೆ ನೀನು ನನ್ನ ಮನಸ್ಸನ್ನು ಗಾಸಿಗೊಳಿಸುವ ಈ ಬಗೆಯ ಮಾತುಗಳನ್ನು ಎಂದಿಗೂ ಆಡುತ್ತಿರಲಿಲ್ಲ. "

" ನೀನು ಇಲ್ಲೇ ತಪ್ಪು ತಿಳಿದಿರುವುದು ದಿವ್ಯಾ. ನನ್ನ ಪ್ರೀತಿಯನ್ನು, ಪ್ರೇಮವನ್ನು—ನೀನು ಅನ್ಯಥಾ ಭಾವಿಸಿಕೊಂಡಿದ್ದೀಯೆ. ಹೀಗಾಗಿ ನಿನಗೆ ದುಃಖ ಉಂಟಾಗಿದೆ, ನಾನು ನಿನ್ನನ್ನು ಮನಮುಟ್ಟಿ ಪ್ರೀತಿಸುತ್ತಿರುವಾಗ, ನೀನು ದುಃಖಿಸುವ ಕಾರಣವೇನಿದೆ ? "

" ಹಾಗಾದರೆ ನಿನ್ನ ಪ್ರೀತಿಯ ಗತಿ ? "

" ನೀನು ಎಂದೆಂದಿಗೂ ನನ್ನವನು ಆಗಿರುವುದೇ ಆಗಿದೆ. "

" ನನ್ನ ಆಸೆಯೂ ಅದೇ ಆಗಿದೆ."

" ಹಾಗಿದ್ದರೆ ನೀನೇಕೆ ನನ್ನ ಮಾತಿನಿಂದ ವ್ಯಾಕುಲಚಿತ್ತನಾದೆ."

" ನೀನು ನನ್ನ ಪ್ರೇಮವನ್ನು ತಿರಸ್ಕರಿಸಿರುವೆ ಎಂದು ಕಳವಳವಾಯಿತು. ಆದುದರಿಂದ ವ್ಯಾಕುಲಗೊಂಡೆ."

" ನಿನ್ನ ಪ್ರೀತಿಯನ್ನು ನಾನು ತಿರಸ್ಕರಿಸಿದರೆ ನಿನಗೇಕೆ ಕಳವಳ, ವ್ಯಾಕುಲವಾಗಬೇಕು ? ನೀನು ಹೇಳಿದ್ದಂತೆ ಪ್ರೀತಿ ನಿಷ್ಕಳಂಕ ಹೃದಯದಿಂದ ಉಕ್ಕಿಬರುವ ನಿಶ್ಕಲ್ಮಷಭಾವವಾಗಿದ್ದರೆ ನಿನಗೇಕೆ ಕಳವಳವಾಗಬೇಕು ? ನೀನು ಕಳವಳಗೊಳ್ಳುವುದನ್ನು ಕಂಡೇ ನಾನು ಹಾಗೆ ಹೇಳಿದ್ದು. ನೀನು ಪ್ರೇಮದ ಭ್ರಾಂತಿ ಎಂದು. ನಿಜವಾದ ಪ್ರೇಮ ಪ್ರತಿಫಲಾಪೇಕ್ಷೆಯಿಂದಲ್ಲವೆ ಮಾಡುವ ಅನನ್ಯಭಕ್ತಿ—ಮೊನ್ನೆ ನಿಮ್ಮ ಕಾಲೇಜಿನಲ್ಲಿ ಶ್ರೀ ಶಿವಾನಂದ ಸ್ವಾಮಿಯವರು ಹೇಳಲಿಲ್ಲವೆ ? ಅದನ್ನು ಮರೆತು ಬಿಟ್ಟೆಯಾ ? "

“ ಹೌದು ಈ ಮಾತನ್ನು ನಾನೂ ಒಪ್ಪುತ್ತೇನೆ. ಪ್ರೇಮಿ ಎಂದಿಗೂ ಪ್ರತಿಫಲಾಪೇಕ್ಷೆಯಿಂದ ಪ್ರೇಮಿಸಬಾರದು. ಆದರೆ ಪ್ರತಿಫಲಾಪೇಕ್ಷೆಯಿಲ್ಲದೆ ಪ್ರೇಮಿಸುವುದು ಸಾಧ್ಯವೇ? ಪ್ರೇಮಾರ್ಪಣೆಯಿಂದ ಪ್ರೇಮಸಾಕ್ಷಾತ್ಕಾರ ವಾಗಲಾರದೆ? ”

“ ಜಗತ್ತಿನಲ್ಲಿ ಕೊಡುಗೈಯ ದಾನಿಗಳು ಪ್ರತಿಫಲಾಪೇಕ್ಷೆಯಿಂದ ದಾನಮಾಡುತ್ತಾರೆಯೆ? ಅವರು ತ್ಯಾಗಮಾಡುವುದರಲ್ಲಿಯೇ ಅನಿರ್ವಚನೀಯ ಆನಂದ ಉಂಟೆಂದು ತ್ಯಾಗಮಾಡುತ್ತಾರೆ. ಇವರಂತೆಯೇ ಭಕ್ತಿ ಭಾವ—ಪ್ರೇಮ ಭಾವ. ”

“ ಅನೇಕ ವೇಳೆ ಪ್ರತಿಫಲಾಪೇಕ್ಷೆಯಿಲ್ಲದೆ ಮಾಡಿದ ದಾನದಿಂದ ಸದ್ಗತಿ ದೊರೆಯುವುದಲ್ಲ? ”

“ ಸದ್ಗತಿ ದೊರೆಯುವುದೂ ಬಿಡುವುದೂ ಅವರವರ ಪುಣ್ಯದಿಂದಲೇ ಹೊರತು, ದಾನಮಾಡುವಿಕೆಯಿಂದ ಬಂದ ಪ್ರತಿಫಲವಲ್ಲ. ”

“ ವಿಷಯ ಗಹನವಾಯಿತು. ನಮ್ಮಿಬ್ಬರ ವಿಷಯವನ್ನೇ ತೆಗೆದುಕೊಳ್ಳೋಣ. ನಾನು ನಿನ್ನನ್ನು ಬಹುವಾಗಿ ಪ್ರೀತಿಸುತ್ತೇನೆ. ಅಷ್ಟೇ ಗಾಢವಾಗಿ ನೀನು ನನ್ನನ್ನೂ ಪ್ರೀತಿಸಬೇಕೆಂದು ಬಯಸುವುದು ತಪ್ಪೆ? ”

“ ಒಂದು ದೃಷ್ಟಿಯಲ್ಲಿ ತಪ್ಪೇ ಹೌದು. ನೀನು ಪ್ರೇಮಿಸಲು ಅಧಿಕಾರಿಯೇ ಹೊರತು ಮತ್ತೊಬ್ಬರ ಪ್ರೇಮವನ್ನು ಬಯಸುವ ಅಧಿಕಾರ ನಿನಗಿಲ್ಲ. ಏಕೆಂದರೆ ನಿನ್ನದು ಸ್ವಾರ್ಥವಾಯಿತು. ಆದರೆ ನಿಸ್ವಾರ್ಥ ಪ್ರೇಮಿಗೆ ತನ್ನನ್ನು ಇತರರು ಪ್ರೀತಿಸಲೇಬೇಕೆಂಬ ನಿಯಮವಿಲ್ಲ. ಪ್ರೀತಿಸುವುದು ತನ್ನ ಸಹಜಧರ್ಮವೆಂದು ಅವನು ತಿಳಿಯುತ್ತಾನೆ. ಇದರಿಂದಾಗಿ ಅವನು ಸುಖಿ. ಅಲ್ಲದೆ ಪ್ರೀತಿ ಪ್ರೇಮವೆನ್ನುವುದು ಕೇವಲ ಸತಿಪತಿಗಳ ಮೋಹಬಂಧ ಮಾತ್ರವೇ ಅಲ್ಲ. ಪ್ರೀತಿಯ ವ್ಯಾಸದೊಳಗೆ ತಾಯಿ ಮಕ್ಕಳು, ಅಣ್ಣ ತಮ್ಮಂದಿರು, ಗೆಳೆಯ ಗೆಳತಿಯರು, ಸೇವಕ ಭೃತ್ಯ, ಸ್ವಾಮಿ ಭೃತ್ಯ ಇವರ ನಡುವಣ ಸಂಬಂಧ ಬರಬಹುದು–ಈ ಸಂಬಂಧವೂ ಪ್ರೇಮ ಭಾವವೇ....ಸದ್ಯದ ಪರಿಸ್ಥಿತಿಯಲ್ಲಿ ನಾವಿಬ್ಬರೂ ಗೆಳೆಯ ಗೆಳತಿಯರಾಗಿ ಇರೋಣ. ಇದು ನಮ್ಮಿಬ್ಬರಿಗೂ ಶ್ರೇಯಸ್ಕರ. ನಮ್ಮ ವಿದ್ಯಾರ್ಥಿ

ಜೀವನ ಮುಗಿದ ಮೇಲೆ ನಮ್ಮಿಬ್ಬರ ಪ್ರೀತಿ ಯಾವ ದಿಕ್ಕನ್ನು ತುಳಿಯುವುದೋ ಅದಕ್ಕೆ ತಕ್ಕಂತೆ ನಮ್ಮ ಮುಂದಿನ ಬದುಕನ್ನು ರೂಪಿಸಿಕೊಳ್ಳೋಣ. ಆ ವಿಷಯವನ್ನು ಈಗ ಚರ್ಚಿಸಿ ಮನಸ್ಸನ್ನು ಕಹಿಮಾಡಿಕೊಳ್ಳುವುದು ಬೇಡ " ಎಂದು ಹೇಳಿದಳು.

ಈ ಮಾತು ಕೇಳಿ ದಿವಾಕರನ ಮುಖ ಲೀಲಾವತಿಯ ಮುಖದಷ್ಟೇ ಗಂಭೀರವಾಯಿತು. ಎದುರಿಗೆ ಇದ್ದ ಕೆರೆಯ ನೀರಿನ ಹಾಳೆಯೂ ಗಂಭೀರವಾಗಿತ್ತು. ಪೂರ್ವದ ದಿಗಂತದಲ್ಲಿ ಚಂದ್ರೋದಯವಾಗಿತ್ತು. ಒಂಟಿಕೊಪ್ಪಲಿನ ದೀಪಗಳು ಕೆರೆಯಲ್ಲಿ ಪ್ರತಿಬಿಂಬಿತವಾಗಿದ್ದುವು ಲೀಲಾವತಿ ದಿವಾಕರರಂತೆ ವಾಯುವಿಹಾರಕ್ಕಾಗಿ ಬಂದಿದ್ದವರು ಒಬ್ಬೊಬ್ಬರಾಗಿ ಗೃಹಾಭಿಮುಖರಾಗಿದ್ದರು. ಇದನ್ನು ಅರಿತ ಲೀಲಾವತಿ ದಿವಾಕರನ ಕೈ ಹಿಡಿಯುತ್ತ,

" ಹೊರಡೋಣವೇ ? " ಎಂದಳು.

ದಿವಾಕರ, ಸದ್ದಿಲ್ಲದೆ ಎದ್ದು ಮಾತಿಲ್ಲದೆ ಲೀಲಾವತಿಯನ್ನು ಅನುಸರಿಸಿ ಹೊರಟ.

ಲೀಲಾವತಿಯೊಡನೆ ದಿವಾಕರನ ಸಲಿಗೆ ಬೆಳೆದಂತೆಲ್ಲ, ಅವಳು ಅವನಿಗೆ ಅರ್ಥಮಾಡಿಕೊಳ್ಳಲಾಗದ ವ್ಯಕ್ತಿಯಾಗಿ ತೋರಿದಳು. ಒಮ್ಮೊಮ್ಮೆ ಲೀಲಾವತಿ ತನ್ನವಳೇ ಆಗುವಳೆಂದು ಅನಿಸುತ್ತಿತ್ತು. ಮತ್ತೊಮ್ಮೆ ಅವಳಿಗೂ ತನಗೂ ಹರಿದಾರಿ ದೂರವೆಂದು ಅನಿಸುತ್ತಿತ್ತು. ಲೀಲಾವತಿ ದಿವಾಕರರನ್ನು ಮನೆಯವರೆಲ್ಲ ಭಾವಿದಂಪತಿಗಳೆಂದು ಪರಿಗಣಿಸಿದ್ದರೂ ದಿವಾಕರನ ಮನಸ್ಸಿನಲ್ಲಿ ಈ ವಿಷಯದಲ್ಲಿ ಒಮ್ಮೊಮ್ಮೆ ನಂಬಿಕೆ ತಪ್ಪಿ ಹೋಗುತ್ತಿತ್ತು. ಯಾಕೆಂದರೆ ಲೀಲಾವತಿಗೆ ತನ್ನ ವಿಷಯದಲ್ಲಿ ಪ್ರೇಮವಿರುವುದೋ ಇಲ್ಲವೋ ಎನ್ನುವ ಅನುಮಾನ ಒಮ್ಮೊಮ್ಮೆ ಅವನ ಮನಸ್ಸನ್ನು ಮುತ್ತುತ್ತಿತ್ತು. ತನ್ನ ಜತೆಯಲ್ಲಿ ಇಷ್ಟೆಲ್ಲ ಸಲಿಗೆಯಿಂದ ಇರುವ ಲೀಲಾವತಿ ತನ್ನ ಹೃದಯದಲ್ಲಿ ಬೇರೆಯವರಿಗೆ ಸ್ಥಳ ಕೊಡಬಲ್ಲಳೆ? ಎಂಬ ಪ್ರಶ್ನೆಯೂ ಮೂಡುತ್ತಿತ್ತು. ಆಗ ಅವನ ಹೃದಯಾಂತರಾಳದಿಂದ ಯಾವುದೋ ಭರವಸೆ—ಏನೋ ಒಂದು ಸಮಾಧಾನ ಬರುತ್ತಿತ್ತು. ಲೀಲಾವತಿ ತನಗೆಂದೇ ಸೃಜಿಸಲ್ಪಟ್ಟಿರುವ ಹೆಣ್ಣು. ಈ ಬಗ್ಗೆ ಯಾವ ಬಗೆಯ ಸಂದೇಹಕ್ಕೂ ಎಡೆ ಕೊಡಬಾರದೆಂದು ಅವನ ಅಂತರಾತ್ಮ ಹೇಳುತ್ತಿತ್ತು. ಹೀಗೆ ಶಂಕೆ ಸಮಾಧಾನಗಳ ನಡುವೆ ಹಾದು ದಿವಾಕರನ ಮನಸ್ಸು ಲೀಲಾವತಿಯ ಪ್ರೇಮದ ಬಗ್ಗೆ ಯಾವುದನ್ನೂ ಖಚಿತಪಡಿಸಿಕೊಳ್ಳಲಾಗದೆ ಕುಂಠಿತವಾಗಿತ್ತು. ಲೀಲಾವತಿಯೂ ಪ್ರೇಮದ ಮಾತು ಬಂದಾಗಲೆಲ್ಲ—ಉಪಾಯಾಂತರದಿಂದ ಆ ಮಾತನ್ನು ತೇಲಿಸುತ್ತಾ ಬರುತ್ತಿದ್ದಳು. ತಾವು ವಿದ್ಯಾರ್ಥಿದೆಸೆಯಲ್ಲಿರುವುದರಿಂದ—ವಿದ್ಯಾರ್ಜನೆಯೇ ತಮ್ಮ ಚರಮಗುರಿಯಾಗಿರಬೇಕೆಂದು ಅವಳು ಹೇಳುತ್ತಾ, ಮದುವೆಯ ಮಾತನ್ನು ಹಾರಿಸಿ ಬಿಡುತ್ತಿದ್ದಳು. ಇದಕ್ಕೆ ತಕ್ಕಂತೆ ಸುಧಾಕರನ ಹೆಂಡತಿ ವಿನಾಕಾರಣವಾಗಿ ಲೀಲಾವತಿಯ ವಿಷಯದಲ್ಲಿ ನಂಜು ಕಾರುತ್ತಿದ್ದಳು. ದಿವಾಕರ, ಲೀಲಾವತಿಯರ ಸಲಿಗೆ ಅವಳ ಕಣ್ಣು ಕುಕ್ಕುತ್ತಿತ್ತು. ಅವಳು ಕ್ರಮಕ್ರಮವಾಗಿ ವಾಗಿ ತನ್ನ ಗಂಡನ ಕಿವಿಯಲ್ಲಿ ಲೀಲಾವತಿ ದಿವಾಕರರ ವಿಷಯದಲ್ಲಿ

ಚಾಡಿ ಹೇಳಿ ಅವನ ಮನಸ್ಸನ್ನು ಅವರ ವಿಷಯದಲ್ಲಿ ಕೆಡಿಸಲಾರಂಭಿಸಿದ್ದಳು. ಲೀಲಾವತಿ ಬೆಳಗೆಲ್ಲಾ ವ್ಯಾಸಂಗ, ಸಿಂಗಾರಗಳಲ್ಲಿ ಕಳೆದು ಹತ್ತುಗಂಟೆಗೆ ಊಟಮಾಡಿ ದಿವಾಕರನೊಡನೆ ಕಾಲೇಜಿಗೆ ಹೊರಟರೆ, ಮತ್ತೆ ಮನೆಗೆ ಸಂಜೆಗೆ ಬರುತ್ತಿದ್ದಳು. ಆ ವೇಳೆಗೆ ಕನಕಲಕ್ಷ್ಮಮ್ಮನವರು ತಿಂಡಿ ಮಾಡಿಟ್ಟಿರುತ್ತಿದ್ದರು. ಒಂದೊಂದು ದಿನ ಅಡಿಗೆ ಕೆಲಸ ಹೆಚ್ಚಾಗಿದ್ದು ಅವರು ವಿಶ್ರಾಂತಿ ತೆಗೆದುಕೊಳ್ಳುತ್ತಾ ಮಲಗಿಕೊಂಡುಬಿಟ್ಟಿದ್ದರೆ ಮಧ್ಯಾಹ್ನದ ಕಾಫಿ, ತಿಂಡಿಗಳ ಕೆಲಸ ರಾಜಮಣಿಯ ಪಾಲಿಗೆ ಬೀಳುತ್ತಿತ್ತು. ತಾವು ಮನೆಯಲ್ಲಿ ಮೂಗಿಗೆ ಕವಡೆ ಕಟ್ಟಿಕೊಂಡು ದುಡಿಯಬೇಕು. ಲೀಲಾವತಿ ಮಾತ್ರ ಮಹಾರಾಣಿಯಂತೆ ಕಾಲೇಜಿನಲ್ಲಿ ಮಜ ಮಾಡಬೇಕು—ಎಂದು ಒಮ್ಮೊಮ್ಮೆ ಅನಿಸುತ್ತಿತ್ತು. ತನ್ನ ಗಂಡ ರಟ್ಟೆಮುರಿದು ಸಂಪಾದಿಸುತ್ತಿದ್ದ ಹಣದಲ್ಲಿ—ದಿವಾಕರ,ಲೀಲಾವತಿಯರು ದಂಡದ ಕೂಳು ಕತ್ತರಿಸುತ್ತಿರುವರೆಂಬೇ ಅವಳ ಭಾವನೆ. ಲೀಲಾವತಿ ತನ್ನ ಪೌಡರ್ ಸ್ನೋ, ಬಟ್ಟೆಬರೆಗಳಿಗಾಗಿ ಊರಿನಿಂದ ಹಣ ತರಿಸಿಕೊಂಡು ಧಾರಾಳವಾಗಿ ಖರ್ಚುಮಾಡುತ್ತಾ ಆಧುನಿಕ ಕಾಲೇಜು ಹುಡುಗಿಯ ರೀತಿಯಲ್ಲಿ ಪಾರ್ಕು, ಸಿನಿಮಾ—ಕಾಲೇಜ್ ಎಂದು ಅಲೆಯುತ್ತಿದ್ದರೆ—ತಾನು ಕೊಳೆ ಬಟ್ಟೆಯಲ್ಲಿ ಅಡಿಗೆ ಮನೆಯ ಮೂಲೆಯಲ್ಲಿ ಅವರ ಚಾಕರಿ ಮಾಡುತ್ತಾ ಬಿದ್ದಿರಬೇಕಲ್ಲ ಎಂದು ಲೀಲಾವತಿಯ ಬಗ್ಗೆ ಒಂದು ಬಗೆಯ ಮಾತ್ಸರ್ಯವುಂಟಾಗಿತ್ತು. ಇದಕ್ಕೆ ಕಿರೀಟವಿಟ್ಟಂತೆ ಈಚೆಗೆ ದಿವಾಕರನ ಪ್ರೇರಣೆಯಿಂದ ಲೀಲಾವತಿ ವೀಣೆ ಕಲಿಯಲು ಆರಂಭಿಸಿದ್ದಳು. ಇದರಿಂದಾತ ಲೀಲಾವತಿಗೆ ಮನೆಯ ಕೆಲಸ ಮಾಡಲು ಪುರಸತ್ತೇ ಇರಲಿಲ್ಲ. ಅವಳು ಕೆಲಸಮಾಡಿಯೇ ತೀರಬೇಕೆಂದು ಮನೆಯಲ್ಲಿ ಯಾರೂ ಹೇಳುತ್ತಿರಲಿಲ್ಲ. ರಾಜಮಣಿಗೆ ಎಲ್ಲಿಗೆ ಕೆಲಸಬಿದ್ದರೆ ಎಲ್ಲಿ ಬೇಸರಗೊಳ್ಳುವಳೋ ಎಂದು, ಕನಕಲಕ್ಷ್ಮಮ್ಮನವರೇ ಆದಷ್ಟು ಕೆಲಸವನ್ನು ಮಾಡಿ ಮುಗಿಸುತ್ತಿದ್ದರು. ಇದನ್ನೆಲ್ಲ ಸೂಕ್ಷ್ಮವಾಗಿ ನೋಡುತ್ತಾ ಬಂದಿದ್ದ ಸುಧಾಕರನಿಗೆ ಲೀಲಾವತಿ, ದಿವಾಕರರು ಸಂಸ್ಕಾರಕ್ಕೆ ಕಿಂಚಿತ್ತು ಉಪಯೋಗವಿಲ್ಲದ ವ್ಯಕ್ತಿಗಳಾಗಿ ತೋರುವುದರಲ್ಲಿ ಆಶ್ಚರ್ಯವಿಲ್ಲ. ಈ ಅಭಿಪ್ರಾಯ ದಿನಕಳೆದಂತೆ, ಹೆಂಡತಿಯ ದುರ್ಬೋಧನೆಗಳ ನೀರುಂಡು ಬೆಳೆಯು

ತ್ತಲೇ ಹೋಯಿತು. ಅದು ಒಂದು ದಿನ ಸ್ಫೋಟಗೊಳ್ಳಲೇ ಬೇಕಾಯಿತು.

ಆ ದಿನ ಲೀಲಾವತಿ ದಿವಾಕರರು ಕಾಲೇಜಿನಲ್ಲಿ ನಡೆದ ಯಾವುದೋ ಉತ್ಸವಕ್ಕೆ ಹೋಗಿದ್ದರು. ಇಬ್ಬರೂ ಮನೆಗೆ ಬರುವ ವೇಳೆಗೆ ರಾತ್ರಿ ಒಂಭತ್ತೂವರೆ ಗಂಟೆಯಾಗಿತ್ತು. ಸಾಮಾನ್ಯವಾಗಿ ಎಂಟು ಗಂಟೆಗೆ ಎಂದೂ ಮನೆಗೆ ಹಿಂದಿರುಗಿಬಿಡುತ್ತಿದ್ದುದರಿಂದ ಎಲ್ಲರೂ ಎಂಟೂವರೆಗೆ ಊಟಕ್ಕೆ ಕುಳಿತುಕೊಳ್ಳುತ್ತಿದ್ದರು. ಯಾರಾವರೂ ಬರುವುದು ಹೊತ್ತಾದರೆ ಕೆಲವು ಕಾಲ ಅವರಿಗಾಗಿ ಇತರರು ಕಾಯುತ್ತಿದ್ದರೇ ಹೊರತು ಒಬ್ಬೊಬ್ಬರು ಒಂದೊಂದು ಬಾರಿ ಊಟಕ್ಕೆ ಏಳುತ್ತಿರಲಿಲ್ಲ. ಆ ದಿನ ತಾನು ಲೇಟಾಗಿ ಊಟಕ್ಕೆ ಬರುವ ವಿಷಯವನ್ನು ಪೂರ್ವಭಾವಿಯಾಗಿ ಕನಕಲಕ್ಷ್ಮಮ್ಮನವರಿಗೆ ಹೇಳುವುದನ್ನು ಲೀಲಾವತಿಯೂ ಮರೆತಳು, ದಿವಾಕರನೂ ಮರೆತನು. ರಾತ್ರಿ ಊಟದ ಹೊತ್ತಾಗಲು ಎಲೆ ಹಾಕಿ, ದಿವಾಕರ ಲೀಲಾವತಿಯರಿಗಾಗಿ ಎಲ್ಲರೂ ಕಾಯುತ್ತಾ ಕುಳಿತರು. ಈಗ ಬಂದಾರು, ಇನ್ನೊಂದು ಗಳಿಗೆಗೆ ಬಂದಾರೆಂದು ಒಂಭತ್ತೂವರೆಯ ತನಕ ಕಾದು, ಕಡೆಗೆ ಕಾದು ಪ್ರಯೋಜನವಿಲ್ಲವೆಂದು ಉಳಿದವರು ಇನ್ನೇನು ಊಟಕ್ಕೆ ಕೂತುಕೊಳ್ಳುವ ವೇಳೆಗೆ ದಿವಾಕರ ಲೀಲಾವತಿಯರು ಹಿಂದಿರುಗಿ ಬಂದರು. ಆಗ ಬಡಿಸುತ್ತಿದ್ದ ಕನಕಲಕ್ಷ್ಮಮ್ಮನವರು ಹೊರಗೆ ಬಂದು,

"ಯಾಕೆ ಇಷ್ಟು ಹೊತ್ತು ಮಾಡಿದಿರಿ? ಎಲ್ಲಿಗೆ ಹೋಗಿದ್ದಿರಿ?" ಎಂದು ಲೋಕಾಭಿರಾಮವಾಗಿ ಕೇಳಿದರು.

"ಕಾಲೇಜಿನಲ್ಲಿ ಇವತ್ತು "ವೆರೈಟಿ ಎಂಟರ್‌ಟೈನ್‌ಮೆಂಟ್" (ವಿವಿಧ ವಿನೋದಾವಳಿ) ಇತ್ತು. ಬರುವುದು ಹೊತ್ತಾಯಿತು." ಎಂದ.

"ಬರುವುದು ಹೊತ್ತಾಗುವುದೆಂದು ಹೇಳಿಹೋಗಬಾರದಿತ್ತೇ?" ಎಂದು ಹೇಳಿ ಅಡಿಗೆ ಮನೆಯ ಕಡೆ ಹೊರಟರು. ಆಗ ಅಡಿಗೆಮನೆಯಿಂದ ಮಗ ಸುಧಾಕರನ ಕೂಗು ಕೇಳಿಸಿತು.

"ಅಮ್ಮ, ಅನ್ನ ಎಲೇಲಿ ಹಾಕಿ ಎಲ್ಲಿಗೆ ಹೊರಟೆ. ಸಾಲದೇನು ಹೊತ್ತು. ನಿನ್ನ ಮುದ್ದುಮಗ ಬಂದ ಅಂತ ಹರಟೆಗೆ ನಿಂತೆಯೇನೋ! ಅವನೆಲ್ಲೂ ಹೋಗೊಲ್ಲ. ಸಾರು ಬಡಿಸು ಬಾ. ಆಮೇಲಿಂದ ಮಗ ಸೊಸೆಯ

ರೊಡನೆ ಬೇಕಾದಷ್ಟು ಹರಟುವಿಯಂತೆ." ಎಂದು ಬೇಸರದ ದನಿಯಲ್ಲಿ ಒದರಿಕೊಂಡ. ಈ ಮಾತು ಕೇಳಿ ದಿವಾಕರನ ಮನಸ್ಸಿಗೆ ಕೊಂಚ ನೋವಾಯಿತು.

"ನನಗೋಸ್ಕರ ನೀವು ಯಾಕೆ ಇದುತನಕ ಕಾಯಬೇಕಾಗಿತ್ತು? ನಿಮ್ಮ ಪಾಡಿಗೆ ನೀವು ಊಟಮಾಡಿಬಿಟ್ಟಿದ್ದರೆ ಆಗುತ್ತಿತ್ತು" ಎಂದ ಕೆಳದನಿಯಲ್ಲಿ. ಅಡಿಗೆಮನೆಯ ಬಾಗಿಲಿನ ಬಳಿಯೇ ಕುಳಿತಿದ್ದ ಸುಧಾಕರನಿಗೆ ಈ ಮಾತುಗಳು ಅಸ್ಪಷ್ಟವಾಗಿ ಕೇಳಿದುವು. ಇದರಿಂದ ಅವನು ಇನ್ನಿಷ್ಟು ಕೆರಳಿದ.

"ಹೌದು. ಹೊರಗೆ 'ಮಜಾ' ಮಾಡಲು ಹೊರಡುವ ರಾಯರು ಹೀಗೆ ಮೊದಲೇ ಅಪ್ಪಣೆಕೊಡಿಸಿದ್ದರೆ ನಾವು ಕಾಯುವ ಪ್ರಸಂಗ ಬರುತ್ತಿರಲಿಲ್ಲ." ಎಂದ.

ಈ ಮಾತು ಕೇಳಿ ಮನೆಯವರೆಲ್ಲರ ಕಿವಿಗಳೂ ನೆಟ್ಟಗಾದುವು. ಅವರು ಸುಧಾಕರನ ಬಾಯಿಂದ ಇಷ್ಟು ಒರಟುಮಾತುಗಳು ಕೇಳುತ್ತಿದ್ದುದು ಇದೇ ಮೊದಲನೆಯ ಬಾರಿ. ಅಣ್ಣತಮ್ಮಂದಿರು ಇದುವರೆಗೆ ರಾಮಲಕ್ಷ್ಮಣರಂತೆ ಅನ್ಯೋನ್ಯವಾಗಿದ್ದವರಿಗೆ ಇದ್ದಕ್ಕಿದ್ದ ಹಾಗೆ ವೈಮನಸ್ಯೇಕೆ ಉಂಟಾಯಿತೆಂದು ಕನಕಲಕ್ಷ್ಮಮ್ಮನವರು ಚಕಿತರಾದರು. ಹಸಿದ ವೇಳೆಯಲ್ಲಿ ಯಾರಾದರೂ ರೇಗುವುದು ಸಹಜವೆಂದು ಸುಮ್ಮನಾದರು. ಹೊರಗಿನಿಂದ ಹಸಿದು ಬಂದಿರುವ ಲೀಲಾವತಿ ದಿವಾಕರರನ್ನು ಬರುತ್ತಿದ್ದಂತೆಯೇ ಟೀಕಿಸಿದರೆ ಅವರ ಮನಸ್ಸು ನೊಂದುಕೊಳ್ಳುವುದೆಂದು ಈ ವಿರಸದ ಪ್ರಕರಣವನ್ನು ಅಷ್ಟಕ್ಕೆ ಮುಗಿಸಲು ಕನಕಲಕ್ಷ್ಮಮ್ಮನವರು ಹೇಳಿದರು.

"ಹೋಗಲಿ ಬಿಡು, ಸುಧಾಕರ. ಇವತ್ತು ಒಂದು ದಿನ ಹೊತ್ತಾಗಿ ಊಟಮಾಡಿದರೆ ಏನು ಕೊಳ್ಳೆಹೋಯಿತು? ಏನೋ ಹುಡುಗತನ—ಕಾಲೇಜಿಗೆ ಹೋಗಿದ್ದರು. ಅಲ್ಲಿ ಇಷ್ಟು ಲೇಟಾಗುತ್ತದೆಂದು ತಿಳಿದಿದ್ದರೆ ಬಹುಶಃ ಹೇಳಿ ಹೋಗುತ್ತಿದ್ದರೋ ಏನೋ. ಪಾಪ, ಅವರಿಗೆ ಗೊತ್ತಿಲ್ಲವೆಂದು ಕಾಣುತ್ತೆ. ಇದರಿಂದ ಏನಾಯಿತು ಅಂಥ ಪ್ರಮಾದ?"

"ಇನ್ನೇನಾಗಬೇಕು ಪ್ರಮಾದ. ದಿನವೆಲ್ಲ ಕತ್ತೆ ದುಡಿದ ಹಾಗೆ

ದುಡಿಯುವವನು ನಾನು. ಇರುವುದನ್ನು ತಿಂದುಕೊಂಡು ಮಜಾ ಮಾಡು ವವರು ಅವರು. ನಾನು ಸಂಪಾದಿಸಿದ ನನ್ನ ಅನ್ನ ನಾನು ತಿನ್ನಬೇಕಾದರೆ ನನಗೆ ಸ್ವತಂತ್ರವಿಲ್ಲ. ಇನ್ನೊಬ್ಬರ ಮುಖ ನೋಡುತ್ತಾ ಕೂತಿರಬೇಕಾ ಗಿದೆ ಈ ಮನೆಯಲ್ಲಿ" ಎಂದು ಗೊಣಗಿಕೊಂಡ.

"ಚೆನ್ನಾಯಿತು. ಎಷ್ಟು ದಿನದಿಂದ ಪಾಠಮಾಡಿದ್ದಿ ಈ ಮಾತು ಹೇಳೋಕೆ? ನಿನ್ನ ಮನೆಯಲ್ಲಿ ನಿನಗೆ ಸ್ವಾತಂತ್ರ್ಯವಿಲ್ಲವೆ? ನಿನ್ನ ಅನ್ನವನ್ನು ನೀನು ಉಣಲು ನಮ್ಮ ಮುಖ ನೋಡಬೇಕೆ? ನಾವೆಲ್ಲ ಪರಕೀಯರಾಗಿ ಬಿಟ್ಟೆವೆ? ಚೆನ್ನಾಯಿತು. ಇವೆಲ್ಲ ಗಿಣಿಪಾಠ. ಇನ್ನೂ ಏನೇನು ಕಲಿತಿದಿ ದ್ದೀಯೋ ಎಲ್ಲವನ್ನೂ ಒಪ್ಪಿಸಿಬಿಡು."

ಎಂದರು ಕನಕಲಕ್ಷ್ಮಮ್ಮ ನೊಂದುಕೊಂಡು.

"ಈ ಮಾತು ಯಾರೂ ಹೇಳಿಕೊಡಬೇಕಾಗಿಲ್ಲ. ನಾನೇನು ಕಣ್ಣಿಲ್ಲದ ಕುರುಡನಲ್ಲ. ಈ ಮನೆಯಲ್ಲಿ ನಡೆಯುವ ಎಲ್ಲ ವಿದ್ಯಮಾನ ಗಳು ನನಗೂ ಗೊತ್ತಿದೆ. ದುಡಿದು ತರಲು ನಾನು, ನಿಮ್ಮೆಲ್ಲರ ಗುಲಾಮ ಚಾಕರಿಮಾಡಲು ಅವಳು ಕಂಕಣ ಕಟ್ಟಿಕೊಂಡು ನಿಂತಿರುವಾಗ ನಿಮಗೆ ಯಾತರ ಚಿಂತೆ ಹೇಳು? ಮಜಾ ಮಾಡುವವರು ಮಜಾ ಮಾಡಿಕೊಂಡೇ ಇರುವುದು—ದುಡಿಯುವವರು ದುಡಿಯುತ್ತಲೇ ಇರುವುದು ಈ ಮನೆಯ ಪದ್ಧತಿ. ಇದೇನು ಹೊಸದೆ?"

ಈ ಮಾತು ಕೇಳಿ ಕನಕಲಕ್ಷ್ಮಮ್ಮನವರಿಗೆ ರೇಗಿಹೋಯಿತು.

"ಸುಧಾಕರ, ಮಾತಿನ ಮೇಲೆ ಗಮನವಿಟ್ಟು ಮಾತನಾಡು. ಮಾತು ಬರುವುದೆಂದು ಬಂದಂತೆ ಹರಟಬೇಡ. ಯಾರು ಮಜಮಾಡುತ್ತಿರುವುದು. ಯಾರು ದುಡಿಯುತ್ತಲೇ ಇರುವುದು ಅದನ್ನಾದರೂ ಬಿಡಿಸಿ ಹೇಳಬಾರದೆ? ಇದು ಯಾರ ಮನೆ ಎಂದು ತಿಳಿದಿರುವೆ? ನಾವೆಲ್ಲ ನಿನಗೆ ಕಂಡವರು-ಹಂಗಿಗೆ ಬಿದ್ದವರು-ಆಗಿಬಿಟ್ಟರೆ ಹೇಳಿಬಿಡು. ನಾವು ಒಂದು ಕ್ಷಣ ಈ ಮನೆಯಲ್ಲಿ ಇರುವುದಿಲ್ಲ. ನೀನು ಯಾರೋ ಹೇಳಿಕೊಟ್ಟ ಮಾತನ್ನು ಆಡುತ್ತಿರುವೆ—ನೀನು ಯಾರನ್ನು ಗುರಿಯಲ್ಲಿಟ್ಟುಕೊಂಡು ಈ ಮಾತುಗಳನ್ನು ಹೇಳುತ್ತಿರುವೆ ಎಂಬುದೂ ಗೊತ್ತು. ಅವನೇನು ಪರಕೀಯನಲ್ಲ—ಬೆನ್ನಿನಲ್ಲಿ ಬಿದ್ದ ತಮ್ಮ.

ಅವನಿನ್ನೂ ಓದುತ್ತಿರುವುದರಿಂದ ನಿಮ್ಮ ಹಂಗಿನಲ್ಲಿ ಇದ್ದಾನೆ ಅಷ್ಟೆ. ನಾಳೆ ಅವನೂ ನಿನ್ನಂತೆಯೇ ಓದು ಮುಗಿಸಿ ದುಡಿಯುವಂತಾದರೆ ನಿನಗೆಲ್ಲಿ ಹೊರೆಯಾಗುತ್ತಾನೆ? ಇನ್ನು ಆ ಹುಡುಗಿ—ಲೀಲಾವತಿ. ಅವಳೇನು ನಮ್ಮ ಮನೆಯಲ್ಲಿ ಹೊಟ್ಟೆಗಿಲ್ಲದೆ ಬಂದವಳಲ್ಲ. ಏನೋ ನಮ್ಮ ಮೇಲಿನ ವಿಶ್ವಾಸದಿಂದ ನಮ್ಮೊಂದಿಗೆ ಇದ್ದಾಳೆ. ಬೇಕಾದರೆ ನಾಳೆ ಬೆಳಿಗ್ಗೆ—ಕಾಲೇಜು ಹಾಸ್ಟಲು ಸೇರಿಕೋತಾಳೆ. ಆದರೆ ನಾನೇ ಬಲವಂತವಾಗಿ ಮನೆಯಲ್ಲಿ ಇರಿಸಿಕೊಂಡಿದ್ದೇನೆ. ನೀನು ಎಲ್ಲರನ್ನೂ ನೋಡುವಂತೆ ಲೀಲಾವತಿಯನ್ನು ನೋಡಬೇಡ. ಅವಳು ಸ್ವಾಭಿಮಾನದ ಹುಡುಗಿ." ಎಂದು ಏನೋ ಹೇಳುತ್ತಿದ್ದವರು, ಬಟ್ಟೆ ಬದಲಾಯಿಸಿ, ಕೈಕಾಲು ತೊಳೆದುಕೊಳ್ಳಲು ಹಿತ್ತಲಿಗೆ ಬರುತ್ತಿದ್ದ ಲೀಲಾವತಿಯನ್ನು ನೋಡಿ ತಟಕ್ಕನೆ ಮಾತು ನಿಲ್ಲಿಸಿ ಬಡಿಸಲು ಮತ್ತೆ ಸೌಟು ತೆಗೆದುಕೊಂಡರು.

ಲೀಲಾವತಿ ದಿವಾಕರರಿಗೆ ಅಡಿಗೆಮನೆಯಲ್ಲಿ ನಡೆಯುತ್ತಿದ್ದ ಮಾತು ಕತೆಯು ಸೂಕ್ಷ್ಮವಾಗಿ ಕೇಳಿಸಿದ್ದರೂ, ಅವುಗಳಾವುದೂ ತಿಳಿಯದವರಂತೆ, ಕೈಕಾಲು ತೊಳೆದುಕೊಂಡು ಬಂದು ಮತ್ತೆ ತಮ್ಮ ತಮ್ಮ ರೂಮು ಸೇರಿದರು. ಎಲ್ಲರ ಊಟ ಮುಗಿಯುತ್ತ ಬಂದಿದ್ದರೂ—ಲೀಲಾವತಿ ದಿವಾಕರರು ಊಟಕ್ಕೆ ಏಳದೆ ಇರುವುದನ್ನು ನೋಡಿ ಕನಕಲಕ್ಷ್ಮಮ್ಮನವರು

" ದಿವೂ, ಬಡಿಸಿದೆ ಊಟಕ್ಕೆ ಬಾರೋ. ಅನ್ನವೆಲ್ಲ ಆರಿಹೋಯಿತು. ಬರಬಾರದೆ? " ಎಂದರು.

" ನಂಗೆ ಹಸಿವಿಲ್ಲಮ್ಮ " ಎಂದ ದಿವಾಕರ ಕೂತೆಡೆಯಿಂದಲೇ.

" ಯಾಕೋ ದಿವೂ? "

" ಯಾಕೇನು? ಸಂಜೆ ಗಂಟಲಪೂರ್ತಿ ಹೋಟಲು ತಿಂಡಿ ತಿಂದಿದ್ದಾರೆ. ಇನ್ನೇಕೆ ಊಟಬೇಕು. ಇವರಿಗಾಗಿ ಕಾಯುವ ನಾವು ಮೂರ್ಖರು ಅಷ್ಟೇ " ಎಂದು ಆತ್ಮಗತ ಭಾಷಣಮಾಡಿದ ಸುಧಾಕರ.

" ನೀನು ಹಾಗೆಲ್ಲ ಅನ್ನಬಾರದು ಸುಧಾ " ಎಂದು ಮೆಲ್ಲನೆ ಹೇಳಿ, " ಬಾರೋ ದಿವೂ. ಎಷ್ಟು ಸೇರುತ್ತೊ ಅಷ್ಟನ್ನೇ ಊಟಮಾಡುವೆಯಂತೆ " ದಿವೂ ಮಾತನಾಡಲಿಲ್ಲ. ಕಡೆಗೆ ಕನಕಲಕ್ಷ್ಮಮ್ಮನೇ ಎದ್ದು ಹೋಗಿ ಕರೆ

ತರಬೇಕಾಯಿತು. ಹಾಗೆಯೇ ಮಂಚದ ಮೇಲೆ ಏನನ್ನೋ ಓದಿಕೊಳ್ಳುತ್ತಾ ಕುಳಿತಿದ್ದ ಲೀಲಾವತಿಯನ್ನು ಕಂಡು, "ಬಾರಮ್ಮಾ ಲೀಲಾ....ಬಡಿಸಿದ್ದಾಗಿದೆ." ಎಂದರು.

"ನಂಗೆ ಹಸಿವಿಲ್ಲ ಅತ್ತೆ." ಎಂದಳು ಸಂಕೋಚದ ದನಿಯಲ್ಲಿ. "ಈಗ ಸರಿಹೋಯಿತು. ಇಬ್ಬರೂ ಮಾತನಾಡಿಕೊಂಡು ಹಸಿವಿಲ್ಲವೆಂದು ಹೇಳುತ್ತಿದ್ದೀರೇನು?"

"ಹಾಗೆಲ್ಲಾ ಊಟದ ಹೊತ್ತಿನಲ್ಲಿ ಹಠಮಾಡಬಾರದು ಬಾಮ್ಮ. ನೀನು ಹೀಗೆಲ್ಲ ಮಾಡುವುದಾದರೆ ನಾನು ವಿಶ್ವನಿಗೆ ಕಾಗದ ಬರೆಯಬೇಕಾಗುತ್ತದೆ ನೋಡು."

"ನಂಗೆ ನಿಜವಾಗಲೂ ಹಸಿವಿಲ್ಲ ಅತ್ತೆ. ನೀವು ಬಲವಂತಮಾಡ್ತೀರಲ್ಲ ಅಂತ ಊಟಕ್ಕೆ ಏಳಬೇಕು." ಎಂದೆನ್ನುತ್ತಾ ಅವಳು ಊಟಕ್ಕೆ ಎದ್ದಳು.

ಈ ಪ್ರಕರಣದಿಂದ ಕನಕಲಕ್ಷ್ಮಮ್ಮ, ದಿವಾಕರ, ಲೀಲಾವತಿ ಇವರ ಮನಸ್ಸು ಕೊಂಚ ಕಹಿಯಾದುವು. ಕನಕಲಕ್ಷ್ಮಮ್ಮನಂತೂ ಸುಧಾಕರನ ಬಾಯಲ್ಲಿ ಇಷ್ಟೆಲ್ಲ ಹದ್ದು ಮೀರಿದ ಮಾತು ಬಂದೀತೆಂದು ತಿಳಿದಿರಲಿಲ್ಲ. ಅವನು ಮೊದಲಿನಿಂದಲೂ ವಿಧೇಯನಾದ ಮಗನೆಂದು ಹೊಗಳಿಸಿಕೊಂಡಿದ್ದವನು. ಇಂಥವನ ಬಾಯಲ್ಲಿ ಈ ಎಲ್ಲ ಒಡಕು ಮಾತು ಬರುವುದೆಂದರೆ ಈ ಮನೆಮುರುಕು ವಿದ್ಯವನ್ನು ಅವನಿಗೆ ಯಾರೋ ಹೇಳಿಕೊಡುತ್ತಿರುವರೆಂಬುದು ಸ್ಪಷ್ಟವಾಯಿತು. ಇದೆಲ್ಲ ರಾಜಮಣಿಯ ದುರ್ಬೋಧೆ ಎಂದು ಅವರಿಗೆ ತಿಳಿಯಲು ಹೆಚ್ಚು ಕಾಲ ಬೇಕಾಗಲಿಲ್ಲ. ರಾಜಮಣಿ ಇದುವರೆಗೆ ಕನಕಲಕ್ಷ್ಮಮ್ಮನವರಿಗೆ ಅಚ್ಚುಮೆಚ್ಚಿನ ಸೊಸೆಯಾಗಿದ್ದಳು. ಇದ್ದಕ್ಕಿದ್ದ ಹಾಗೆ ಅವಳಿಗೇಕೆ ಈ ಕೆಟ್ಟ ಬುದ್ಧಿ ಬಂದಿತೆಂದು ಅವರಿಗೆ ಅಚ್ಚರಿಯಾಯಿತು. ಇದೇ ಬಗೆಯ ವೈಮನಸ್ಯ ಬೆಳೆದರೆ ಕಡೆಗೊಂದು ದಿನ ಗೃಹಚ್ಛಿದ್ರವಾಗುವುದೂ ಹೆಚ್ಚಲ್ಲ. ಆ ಭಯಾನಕ ದೃಶ್ಯವನ್ನು ನೆನಸಿಕೊಂಡು ಮಮ್ಮಲ ಮರುಗಿದರು.

ಇಷ್ಟೆಲ್ಲ ಪ್ರಕರಣ ನಡೆದಾಗ ರಾಘವೇಂದ್ರರಾಯರು ಮನೆಯಲ್ಲಿ

ಇರಲಿಲ್ಲ. ಅವರು ಕಟಾವಿನ ಕಾಲವೆಂದು ಹೊಳೆನರಸೀಪುರದ ಬಳಿಯ ತಮ್ಮ ಹಳ್ಳಿಗೆ ಹೋಗಿದ್ದರು. ಅಲ್ಲದೆ, ಕೆಲವು ತಿಂಗಳ ಹಿಂದೆ ನೆರವೇರಿಸಿದ ಶರಾವತಿಯ ಫಲಶೋಭನಕ್ಕೆ ಮಾಡಿದ್ದ ಸಾಲವನ್ನು ತೀರಿಸಬೇಕಾಗಿತ್ತು. ಅವರು ಮನೆಯಲ್ಲಿ ಇದ್ದಿದ್ದರೆ ಸುಧಾಕರ ತನ್ನ ಬಾಲವನ್ನು ಇಷ್ಟು ಬಿಚ್ಚು ತ್ತಿರಲಿಲ್ಲ. ಅವನಿಗೆ ಮೊದಲಿನಿಂದಲೂ ತಂದೆಯವರನ್ನು ಕಂಡರೆ ತುಂಬಾ ಭಯಭಕ್ತಿ ಇತ್ತು. ಅವರು ಮನೆಯಲ್ಲಿ ಇಲ್ಲದ ವೇಳೆಯಲ್ಲಿ ಸುಧಾಕರನ ನಾಲಗೆ ಹತೋಟಿ ತಪ್ಪಿತ್ತು.

ಲೀಲಾವತಿ ತಮ್ಮ ಮನೆಗೆ ಬಂದಲಾಗಾಯಿತು ಅಣ್ಣ ತಮ್ಮಂದಿರಲ್ಲಿ ಯಾವುದಾದರೊಂದು ಸಣ್ಣಪುಟ್ಟ ಕಲಹಗಳು ಆಗಾಗ್ಗೆ ನಡೆಯುತ್ತಿತ್ತು. ಶರಾವತಿಯ ಮದುವೆಗೆ ಮಾಡಿದ್ದ ಸಾಲವನ್ನು ತೀರಿಸಲು ಸುಧಾಕರ ನೆರವಾಗಲಿಲ್ಲ. ಅದು ತಂದೆಯವರ ಜವಾಬ್ದಾರಿ, ಎಂದುಬಿಟ್ಟ. ರಾಘ ವೇಂದ್ರರಾಯರು ತಾನೇ ಎಲ್ಲಿಂದ ಹಣ ತಂದಾರು ? ಅವರಿಗೆ ಅರಮನೆಯ ಕಛೇರಿಯಲ್ಲಿ ಕೆಲಸವಿತ್ತು—ಇನ್ನು ಎರಡು ತಿಂಗಳಿಗೇ ಅವರು ರಿಟೈರ್ ಆಗಲಿದ್ದರು. ಆ ಕಾಲಕ್ಕೆ ಬರಲಿದ್ದ ಇನ್‌ಷೂರೆನ್ಸ್ ಹಣದಲ್ಲಿ, ಭೋಗ್ಯಕ್ಕೆ ಹಾಕಿದ್ದ ಜಮೀನನ್ನು ಬಿಡಿಸಿಕೊಳ್ಳುವ ಆಸೆಯಿಂದ ಇದ್ದರು. ಆದರೆ ಸುಧಾಕರ ತಿಂಗಳುತಿಂಗಳಿಗೆ ಮನೆ ಖರ್ಚಿಗೆ ಕೊಡುತ್ತಿದ್ದ ಹಣಕ್ಕಿಂತ ಒಂದು ಕಾಸೂ ಹೆಚ್ಚಿಗೆ ಕೊಡಲು ತನ್ನಿಂದ ಸಾಧ್ಯವಿಲ್ಲವೆಂದು ನಿರಾಕರಿಸಿದ ಮೇಲೆ ಆ ಇನ್‌ಷೂರೆನ್ಸ್ ಹಣ ಮದುವೆಯ ಸಾಲ ತೀರಿಸಲು ಇಡಬೇಕಾ ಯಿತು—ತಮಗೆ ಬರುತ್ತಿದ್ದ ವರಮಾನದಲ್ಲಿ ಮನೆಯ ಸಂಸಾರ, ದಿವಾ ಕರನ ಕಾಲೇಜು ವಿದ್ಯಾಭ್ಯಾಸ ಇವುಗಳೆಲ್ಲ ಸಾಗಬೇಕಾಗುತ್ತಿತ್ತು. ಇವನ್ನು ಅರಿತೇ ದಿವಾಕರ ಒಂದೆರಡು ಪಾಠಗಳನ್ನು ಗೊತ್ತುಮಾಡಿಕೊಂಡು, ತನ್ನ ಖರ್ಚನ್ನು ದುಟ್ಟಿಸಿಕೊಂಡು, ಒಂದು ರೇಡಿಯೋವನ್ನು ಕಂತುಗಳಲ್ಲಿ ಕೊಂಡುಕೊಳ್ಳಲು ಸಮರ್ಥನಾಗಿದ್ದ. ಮನೆಗೆ ರೇಡಿಯೋ ಬಂದದ್ದು ಮೊದಲು ಸುಧಾಕರನಿಗೆ, ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ ಜುಟ್ಟಿಗೆ ಮಲ್ಲಿಗೆ ಹೂ, ಎಂಬಂತೆ ತೋರಿದ್ದರೂ—ದಿನವೆಲ್ಲ ದುಡಿದು ಬರುವ ತನಗೆ ಅದು ಎಂತಹ ಅಪ್ಯಾಯಮಾನ ಕೊಡಬಲ್ಲದೆಂಬುದನ್ನು ಕಂಡುಕೊಂಡ ಮೇಲೆ—

ತಮ್ಮನ ಕೆಲಸವನ್ನು ಪ್ರಶಂಸಿಸದೆ ಇರಲಿಲ್ಲ. ಒಂದು ಬಾರಿ ತೆಗಳುವುದು, ಒಂದು ಬಾರಿ ಹೊಗಳುವುದು ನಡೆದಿತ್ತು. ಆದರೆ ಅತಿವೃಷ್ಟಿ, ಇಲ್ಲದೆ ಇದ್ದರೆ ಅನಾವೃಷ್ಟಿ—ಸುಧಾಕರನ ರೀತಿಯೇ ಹೀಗೆ. ಸಂಸಾರದಲ್ಲಿ ಆಸಕ್ತಿ ತೆಗೆದುಕೊಂಡರೆ—ಅವನಿಗೆ ಇರುವ ಆಸಕ್ತಿಯನ್ನು ಕಂಡು ಇತರರು ಮೂಗಿನ ಮೇಲೆ ಬೆರಳಿಡಬೇಕು. ನಿರಾಸಕ್ತಿ ವಹಿಸಿದರೆ—ಯಾರು ಉಂಡರು, ಯಾರು ಉಪವಾಸವಿದ್ದರು ಎಂದು ವಿಚಾರಿಸುವ ಗೋಜಿಗೂ ಹೋಗುತ್ತಿರಲಿಲ್ಲ. ಒಂದು ಮಾತಿನಲ್ಲಿ ಹೇಳುವುದಾದರೆ—ಸುಧಾಕರನ ಮನಸ್ಸು, ಹೊತ್ತು ತಿರುಗಿದ ಹೂವಿನಂತೆ. ಅವನ ವರ್ತನೆ ಒಂದೊಂದು ಭಾವದಲ್ಲಿ ಒಂದೊಂದು ತರಹ.

ತನ್ನ ತಾಯಿಗೆ ಲೀಲಾವತಿಯ ಮೇಲೆ ಇರುವ ಪ್ರೀತಿ ತನ್ನ ಹೆಂಡತಿಯ ಮೇಲೆ ಇಲ್ಲವೆಂದು ತಿಳಿದುಕೊಳ್ಳಲು ಸುಧಾಕರನಿಗೆ ಹೆಚ್ಚು ಕಾಲ ಬೇಕಾಗಲಿಲ್ಲ. ಲೀಲಾವತಿ ಎಷ್ಟೆಂದರೂ ಮನೆಯವಳೆನಿಸಿಕೊಂಡಳು. ರಾಜಮಣಿ ಎಷ್ಟೇ ಹೊಂದಿಕೊಂಡರೂ ಅವಳು ಕುಲದ ಹೊರಗಿನಿಂದ ಬಂದ ಪರಕೀಯಳು. ಬೆಟ್ಟಿಗೆ, ಬೆಟ್ಟಿಗೆ ಭೇದವೆಣಿಸುವುದು ಮನುಷ್ಯ ಸ್ವಭಾವವಾದರೂ ಕನಕಲಕ್ಷ್ಮಮ್ಮ ಸಾಧ್ಯವಾದಷ್ಟು ಮಟ್ಟಿಗೆ ಇಬ್ಬರು ಸೊಸೆಯರನ್ನೂ ಸಮತೆಯಿಂದ ನೋಡುತ್ತಿದ್ದರು. ಆದರೆ ಲೀಲಾವತಿ, ಆಕೆಯ ಅಣ್ಣನ ಮಗಳಾದುದರಿಂದಲೋ ಏನೋ, ಅವಳೊಡನೆ ಹೆಚ್ಚಿನ ಸಲಿಗೆ. ಅವಳೊಡನೆ ತನ್ನ ಅಂತರಂಗದ ವಿಷಯಗಳನ್ನು ಹೇಳಿಕೊಳ್ಳುತ್ತಿದ್ದುದೂ ಉಂಟು. ರಾಜಮಣಿ ಎಷ್ಟಾದರೂ ಸೊಸೆಯೆನಿಸಿಕೊಂಡವಳು. ಸೊಸೆಯೊಡನೆ ಇರಬೇಕಾದಷ್ಟು ಸಲಿಗೆ, ಪ್ರೀತಿ ವಿಶ್ವಾಸಗಳು ಇದ್ದುವೆನ್ನಲು ಅಡ್ಡಿಯಿಲ್ಲ. ಹೀಗಿದ್ದರೂ ಪೂರ್ವಾಭಿಪ್ರಾಯ ಹೊಂದಿದ್ದ ಸುಧಾಕರನಿಗೆ ತನ್ನ ತಾಯಿ ತನ್ನ ಸೊಸೆಯನ್ನು ಲೀಲಾವತಿಯನ್ನು ನೋಡಿಕೊಳ್ಳುವಂತೆ ನೋಡಿಕೊಳ್ಳುತ್ತಿಲ್ಲವೆಂದೇ ಅವನ ಎಣಿಕೆ. ಒಂದು ದಿನ ದಿವಾಕರ ಯಾರೋ ಗೆಳೆಯರನ್ನು ಬೇಡಿ, ಚಿತ್ರವೊಂದಕ್ಕೆ ಪಾಸು ತಂದಿದ್ದ. ಕನಕಲಕ್ಷ್ಮಮ್ಮನವರು, ಲೀಲಾವತಿ ಹೊರಟು ನಿಂತರು. ರಾಜಮಣಿ ಮಾತ್ರ ತನ್ನ ಗಂಡ ಬರುವ ವೇಳೆಗೆ ತಾವು ಯಾರೂ ಮನೆಯಲ್ಲಿ ಇಲ್ಲದೆ ಹೋದರೆ

ಅವರು ಸೇಗುವರೆಂದೂ ಮನೆಯಲ್ಲಿ ನಿಂತು ತಾನು ಅಡಿಗೆ ಕೆಲಸ ನೋಡಿ ಕೊಳ್ಳುವುದಾಗಿ ಹೇಳಿ, ಮನೆಯಲ್ಲಿಯೇ ಉಳಿದುಬಿಟ್ಟಿದ್ದಳು. ಸುಧಾಕರ ಕೆಲಸದಿಂದ ಬಂದ ಮೇಲೆ, ಚಾಡಿ ಹೇಳಲು ಇದೇ ತಕ್ಕ ಸಮಯವೆಂದು, ತನ್ನೊಬ್ಬಳನ್ನೇ ಮನೆಯಲ್ಲಿ ಬಿಟ್ಟುಬಿಟ್ಟು ಉಳಿದವರೆಲ್ಲ ಸಿನಿಮಾಕ್ಕೆ ಹೋಗಿರುವರೆಂದು ಹೇಳಿ, ಗಂಡನ ಮನಸ್ಸಿನಲ್ಲಿ ಉಳಿದವರ ಬಗ್ಗೆ ವಿಷಬೀಜ ಬಿತ್ತಿದಳು. ಆ ರಾತ್ರಿ—ಸುಧಾಕರ -ತಾಯಿಯ ಮೇಲಿನ ಸಿಟ್ಟಿಗೆ ಊಟ ಮಾಡದೆ, ದೊಡ್ಡ ರಂಪಮಾಡಿ, ತಾವು ಯಾಕಾದರೂ ಸಿನಿಮಾಕ್ಕೆ ಹೋದೆವೋ ಎಂದು ಅನ್ನುವಂತೆಮಾಡಿಬಿಟ್ಟಿದ್ದ.

ರಾಜಮಣಿ ಲೀಲಾವತಿ ಸಾಮಾನ್ಯವಾಗಿ ಕೂಡಿ ಇರುತ್ತಿದ್ದುದೇ ಅಪರೂಪ. ಶರಾವತಿಗೆ ಪ್ರಸ್ತವಾಗಿ ಗಂಡನ ಮನೆಗೆ ಹೋಗುವ ತನಕ, ಹೆಚ್ಚುಕಡಿಮೆ ಅವಳೇ ಲೀಲಾವತಿಯ ಸಂಗಾತಿ. ಅವಳು ಅತ್ತೆಯ ಮನೆಗೆ ಹೊರಟು ಹೋದ ಮೇಲೆ ಲೀಲಾವತಿಗೆ ಸ್ನೇಹಿತರಿಲ್ಲದಂತೆ ಆಗಿತ್ತು. ಅವಳಿಗೆ ನಚ್ಚುಮನಸ್ಸಿನ ರಾಜಮಣಿಯ ಜತೆಗಿಂತಲೂ ಒಂಟಿಯಾಗಿರುವುದೇ ಹಿತ ಕರವಾಗಿ ಇರುತ್ತಿತ್ತು. ಆದರೆ ದಿವಾಕರನು ಜತೆಯಲ್ಲಿ ಇರುತ್ತಿದ್ದುದರಿಂದ ಅವಳಿಗೆ ಅಷ್ಟಾಗಿ ಬೇಸರ ಕಾಣುತ್ತಿರಲಿಲ್ಲ. ಇದರ ಜತೆಗೆ ಲೀಲಾವತಿ ಶ್ರೀರಾಮಪೇಟೆಯಲ್ಲಿದ್ದ ಭಗಿನೀ ಸಮಾಜವೆನ್ನುವ ಸಂಸ್ಥೆಯನ್ನು ಬೆನ್ನಿಗೆ ಕಟ್ಟಿಕೊಂಡಿದ್ದಳು. ಮೊದಲಿನಿಂದಲೂ ಲೀಲಾವತಿಗೆ ಸಾರ್ವಜನಿಕ ಚಟು ವಟಿಕೆಗಳಲ್ಲಿ ತೀವ್ರ ಆಸಕ್ತಿ. ಅವಳಿಗೆ ಮನೆಯಲ್ಲಿ ಶಾಂತಿ ಸುಖಗಳು ಸಿಗುತ್ತಿರಲಿಲ್ಲವಾದ ಕಾರಣ ಅವಳು ಬಹುಮಟ್ಟಿಗೆ ತನ್ನ ಗೆಳತಿಯರ ಮನೆ ಗಳಲ್ಲಿಯೇ ತನ್ನ ವಿರಾಮವನ್ನೆಲ್ಲ ಕಳೆಯುತ್ತಿದ್ದಳು. ಅವಳು ಹೈಸ್ಕೂಲಿ ನಲ್ಲಿದ್ದಾಗ ಹೈಸ್ಕೂಲು ಹುಡುಗಿಯರನ್ನೆಲ್ಲಾ ಸೇರಿಸಿ, ವಿದ್ಯಾರ್ಥಿನಿ ಸಂಘ ಸ್ಥಾಪಿಸಿ, ಅದರ ಕಾರ್ಯದರ್ಶಿನಿಯಾಗಿ ಕೆಲಸ ಮಾಡಿದ್ದಳು. ಮೈಸೂರಿಗೆ ಬಂದಾಗಲೂ ಈ ಸಾರ್ವಜನಿಕ ಸೇವೆಯ ಹುಚ್ಚು ಅವಳನ್ನು ಭಗಿನೀ ಸಮಾಜಕ್ಕೆ ಸೇರುವಂತೆ ಮಾಡಿತ್ತು.

ಭಗಿನೀ ಸಮಾಜ—ಮಧ್ಯಮವರ್ಗದ ಹೆಣ್ಣುಮಕ್ಕಳ ಸಂಸ್ಥೆ. ಅದ ರಲ್ಲಿ ಅನೇಕ ಆಟಪಾಟಗಳ ಜತೆಗೆ, ಉಪಯುಕ್ತವಾದ ಕಸಬುಗಳು,

ಸಾಹಿತ್ಯ, ಸಂಗೀತಗಳನ್ನು ಹೇಳಿಕೊಡುವ ತರಗತಿಗಳು ನಡೆಯುತ್ತಿದ್ದುವು. ಲೀಲಾವತಿಗೆ ಭಗಿನೀ ಸಮಾಜದವರು ನಡಸುತ್ತಿದ್ದ ಚಟುವಟಿಕೆಗಳು ಏನೇನೂ ತೃಪ್ತಿಕೊಡದೆ ಹೋಯಿತು. ಅವಳು ಸಂಸ್ಥೆಯ ಕಾರ್ಯ ಚಟುವಟಿಕೆಗಳನ್ನು ಇನ್ನಿಷ್ಟು ವಿಸ್ತರಿಸಲು ಮನಸ್ಸುಮಾಡಿದಳು. ಇದನ್ನು ಕಾರ್ಯಗತಗೊಳಿಸಲು, ತನ್ನ ಸ್ನೇಹಿತೆಯರನ್ನು ಅದರ ಸದಸ್ಯರನ್ನಾಗಿ ಮಾಡಿ, ಅವರ ಬೆಂಬಲದಿಂದ, ಕಾರ್ಯದರ್ಶಿಯ ಸ್ಥಾನ ಗಿಟ್ಟಿಸಿದಳು. ಸಂಘದ ಎಲ್ಲ ಚಟುವಟಿಕೆಗಳಿಗೆ, ಹಣಾಭಾವವೇ ದೊಡ್ಡ ತೊಂದರೆಯೆಂಬುದನ್ನು ಗಮನಿಸಿ, ಸಂಸ್ಥೆಗಾಗಿ ಒಂದು ನಿಧಿ ಕೂಡಿಸಲು ಮನಸ್ಸು ಮಾಡಿದಳು. ಮೊದಲು ಸರಿಯಾದ ಪ್ರಚಾರ ನಡಸಿ, ಆ ಬಡಾವಣೆಯ ಹೆಣ್ಣುಮಕ್ಕಳನ್ನೆಲ್ಲ ಸದಸ್ಯೆಯರನ್ನಾಗಿ ಮಾಡಿದಳು. ಸಂಘಕ್ಕೆ ಬರುವ ವೃತ್ತಪತ್ರಿಕೆಗಳು, ಆಟಪಾಟಗಳನ್ನು ಹೆಚ್ಚು ಆಕರ್ಷಕವಾಗಿ ಮಾಡಿ, ಹೆಚ್ಚು ಜನ ಭೇಟಿ ಕೊಡುವಂತೆ ಮಾಡಿದಳು. ಹಳೆಯ ಕಟ್ಟಡವನ್ನು ಬಿಟ್ಟು ವಿಶಾಲವಾದ ಕಟ್ಟಡವನ್ನು ಬಾಡಿಗೆಗೆ ತೆಗೆದುಕೊಂಡು, ಕಾರ್ಯರಂಗವನ್ನು ವಿಸ್ತರಿಸಿದಳು. ಸಂಘಕ್ಕೆ ಅವರಿವರ ಕಾಲುಕಟ್ಟಿ ಒಳ್ಳೆ ಲೈಬ್ರರಿಯನ್ನು ಸಂಪಾದಿಸಿಕೊಟ್ಟಳು. ಹಿಂದಿ ಶಾಲೆಯನ್ನು, ಹೊಲಿಗೆ ಶಾಲೆಯನ್ನು ಹೊಸದಾಗಿ ಆರಂಭಿಸಿದಳು. ಸಂಘದ ಕಲಾವಿದೆಯರನ್ನು ಕೂಡಿಹಾಕಿ, ಅವರಿಂದ ವಿವಿಧವಿನೋದಾವಳಿಯನ್ನು ಏರ್ಪಡಿಸಿ, ಪುರಪ್ರಮುಖರಿಗೆಲ್ಲ ಟಿಕೀಟು ಕಟ್ಟಿ, ಸಾಕಷ್ಟು ನಿಧಿಯನ್ನು ಕೂಡಿಸಿದಳು. ಈ ಎಲ್ಲ ಪ್ರಯತ್ನಗಳಲ್ಲಿ--ಕೆಲಸಕಾರ್ಯಗಳಲ್ಲಿ ಅವಳಿಗೆ ಆ ವರ್ಷ ಮುಗಿಯುತ್ತ ಬಂದುದು ನೆನಪಿಗೆ ಬರಲಿಲ್ಲ.

ಫೆಬ್ರವರಿ ತಿಂಗಳ ವೇಳೆಗೆ ಪರೀಕ್ಷೆಗಳು ಆರಂಭವಾದುವು. ಲೀಲಾವತಿ ತಾತ್ಕಾಲಿಕವಾಗಿ ತನ್ನ ಎಲ್ಲ ಚಟುವಟಿಕೆ ಸಂಗೀತಾಭ್ಯಾಸಗಳನ್ನು ಒತ್ತಟ್ಟಿಗೆ ಸರಿಸಿ, ತಿಂಗಳ ಕಾಲ ಪಟ್ಟಾಗಿ ವ್ಯಾಸಂಗಮಾಡಿ, ಪರೀಕ್ಷೆಗೆ ಕುಳಿತು, ಉತ್ತಮರೀತಿಯಲ್ಲಿ ಉತ್ತರಿಸಿ ಬಂದಳು. ದಿವಾಕರನು ಈ ಬಾರಿ ಕೊನೆಯ ಆನರ್ಸ್‌ನಲ್ಲಿ ಇದ್ದುದರಿಂದ, ಬಹಳ ಕಷ್ಟ ಪಟ್ಟು ಹಗಲು ರಾತ್ರಿ ಓದುತ್ತಿದ್ದ. ಇದು ಲೀಲಾವತಿಯನ್ನು ಹುರುಪುಗೊಳಿಸಿತ್ತು.

ಪರೀಕ್ಷೆಗಳು ಮುಗಿದು ಬೇಸಿಗೆರಜ ಆರಂಭವಾಯಿತು. ಲೀಲಾವತಿ

ಊರಿಗೆ ಹೋಗಿ, ಊರು ಬೇಸರವಾಗಿ ತಿಂಗಳ ಮೊದಲೇ ಮೈಸೂರಿಗೆ ಬಂದುಬಿಟ್ಟಳು. ಮೈಸೂರಿನಂತಹ ನಗರಜೀವಿಗೆ ಚಿಂತಾಮಣಿಯ ಕುಗ್ರಾಮ ಸರಿಹೋಗಲಿಲ್ಲ. ಮತ್ತೆ ಕಾಲೇಜು ಆರಂಭವಾಯಿತು. ದಿವಾಕರ, ಲೀಲಾವತಿಯರು ಉತ್ತಮ ರೀತಿಯಲ್ಲಿಯೇ ತೇರ್ಗಡೆಯಾಗಿದ್ದರು. ದಿವಾಕರನಿಗೆ ಅವನ ಪ್ರೊಫೆಸರರು—ಎಂ. ಎ. ಓದಲು ಸಲಹೆ ಮಾಡಿದ್ದರ ಮೇಲೆ ಅವನು ಈ ವರ್ಷ ಎಂ. ಎ. ಮುಗಿಸುವ ಯೋಚನೆಯಲ್ಲಿದ್ದ. ಲೀಲಾವತಿಯದು ಈ ಬಾರಿ ಸೀನಿಯರ್ ಇಂಟರ್. ಅವಳು ಪರೀಕ್ಷೆಗೆ ಕಟ್ಟಬೇಕಾದ ವಿದ್ಯಾರ್ಥಿನಿ. ಈ ವರ್ಷ ಕಳೆದ ವರ್ಷದಂತೆ, ವೃಥಾ ಕಾಲ ಹರಣಮಾಡದೆ ವ್ಯಾಸಂಗದ ಕಡೆ ಗಮನಕೊಟ್ಟಿದ್ದಳು. ಇಂಟರ್‌ಮಿಡಿಯೇಟ್ ಪರೀಕ್ಷೆಯಲ್ಲಿ ಮೊದಲನೆಯ ವರ್ಗವನ್ನು ಗಿಟ್ಟಿಸಿಕೊಳ್ಳಬೇಕೆಂಬುದೇ ಅವಳ ಸಂಕಲ್ಪ. ಅದಕ್ಕಾಗಿ ಅವಳು ವರ್ಷದ ಆರಂಭದಿಂದಲೇ ಓದಲು ತೊಡಗಿದ್ದಳು.

ಅವಳ ಶ್ರಮ ನಿರರ್ಥಕವಾಗಲಿಲ್ಲ. ಪರೀಕ್ಷೆಯ ವೇಳೆಯಲ್ಲಿ ಲೀಲಾವತಿ ಲೀಲಾಜಾಲವಾಗಿ ಎಲ್ಲ ಪ್ರಶ್ನೆಗಳಿಗೂ ಉತ್ತರ ಬರೆದು ಬಂದಳು. ವರ್ಷದ ಶ್ರಮವೆಲ್ಲ ಸಾರ್ಥಕವಾಗಿತ್ತು. ಪರೀಕ್ಷೆಯ ಎಲ್ಲ ಹೊರೆ ತಲೆಯಿಂದ ಇಳಿದಾಗ, ಉಸಿರಾಡಲು ಪುರಸತ್ತು ಸಿಕ್ಕಿದಾಗ, ತಂದೆಯಿಂದ ಲೀಲಾವತಿ ಹಾಗೂ ದಿವಾಕರರಿಗೆ ಊರಿಗೆ ಬರಲು ಕಾಗದ ಬಂತು. ದಿವಾಕರನಿಗೆ ಬೇಸಿಗೆಯ ರಜದಲ್ಲಿ 'ಪೈವಸಿ' ಪರೀಕ್ಷೆ ಇದ್ದುದರಿಂದ ಲೀಲಾವತಿಯೊಬ್ಬಳೇ ಊರಿಗೆ ಹೋದಳು.

ಊರಿಗೆ ಹೋದ ಮೇಲೆ ಲೀಲಾವತಿ ಹೊಸಬಗೆಯ ಚಿಂತೆಗೆ ಎಳೆಯಲ್ಪಟ್ಟಳು. ಮೈಸೂರಿನಲ್ಲಿ ಇದ್ದಷ್ಟು ದಿನ ಅವಳನ್ನು 'ಮದುವೆ' ಮಾತಿನಿಂದ ಯಾರೂ ಕಾಡಲಿಲ್ಲ. ಚಿಂತಾಮಣಿಗೆ ಬಂದೊಡನೆಯೇ, ತಾಯಿ ಗಂಗಮ್ಮ ಗಂಡನೊಡನೆ ಲೀಲಾವತಿಯ ಮದುವೆಯ ಪ್ರಸ್ತಾಪ ಎತ್ತಿದರು. ಅವರಿಗೆ, ಲೀಲಾವತಿ ಹತ್ತೊಂಭತ್ತು ವರ್ಷದ ಹುಡುಗಿಯಾಗಿದ್ದು, ಇನ್ನೂ ಮದುವೆ ಮಾಡದೆ ಇರುವುದು ತುಂಬಾ ಅವಮಾನದ ವಿಷಯವಾಗಿತ್ತು. ಧರ್ಮಾಭಿಮಾನಿಗಳಾದ ಅವರಿಗೆ, ತಮಗೆ ಇದು ಶ್ರೇಯಸ್ಕರವಲ್ಲವೆಂದೂ

ಅನಿಸಿತ್ತು. ಅಲ್ಲದೆ, ಸ್ವಾಮಿಗಳ ಕಿವಿಯ ತನಕ ಈ ವಿಷಯ ಹೋದರೆ ಅವರು ತಮ್ಮನ್ನು ಬಹಿಷ್ಕರಿಸಿಬಿಡುವರೆಂಬ ಹೆದರಿಕೆ ಒಂದೇ ಸಮನೆ ಬಾಧಿ ಸುತ್ತಿದ್ದರಿಂದ ವಿಶ್ವನಾಥರಾಯರೊಡನೆ ದಿನಬೆಳಗಾದರೆ ಲೀಲಾವತಿಯ ಮದುವೆಯ ಪ್ರಸ್ತಾಪಮಾಡುತ್ತ ಬಂದರು. ಇದನ್ನು ದಿನವಹಿ ಕೇಳಿ ಕೇಳಿ ಲೀಲಾವತಿಗೂ ಬೇಸರವಾಯಿತು. ಇಲ್ಲಿದ್ದರೆ ಮದುವೆಮಾತಿನಿಂದ ತನ್ನನ್ನು ಕೊಲ್ಲುತ್ತಾರೆಂದೂ, ಏನೋ ನೆಪ ಹೇಳಿ ಮೈಸೂರಿಗೆ ಬಂದಳು. ಮೈಸೂರಿನಲ್ಲಿಯೂ ಅದೇ ಮಾತೇ. ರಾಮೇಶ್ವರಕ್ಕೆ ಬಂದರೂ ಶನೇಶ್ವರನ ಕಾಟ ಬಿಡಲಿಲ್ಲವೆಂಬಂತಾಯಿತು. ಈ ವರ್ಷವಷ್ಟೇ ದಿವಾಕರ ಎಂ. ಎ. ಮುಗಿಸಿದ್ದ. ಅವನಿಗೆ ಬೊಂಬಾಯಿ ಸರಕಾರದ, ಇಂಟಲ್‌ಜೆನ್ಸ್ ಖಾತೆ ಯಲ್ಲಿ ಇನ್ನೂರು ರೂಪಾಯಿನ ಕೆಲಸ ಸಿಕ್ಕಿತ್ತು. ಅವನು ಬೊಂಬಾಯಿಗೆ ಹೊರಡುವ ಪ್ರಯತ್ನದಲ್ಲಿ ಇದ್ದ. ಅವನು ಬೊಂಬಾಯಿಗೆ ಹೊರಡುವ ಮುನ್ನ ಅವನ ಮದುವೆ ಮಾಡಿಬಿಡುವ ಆಸೆಯಾಯಿತು ಕನಕಲಕ್ಷ್ಮಮ್ಮನಿಗೆ. ಹುಡುಗಿ ಹೇಗೂ ಮನೆಯಲ್ಲಿಯೇ ಇದ್ದಾಳೆ. ಒಂದು ದಿನ ಆಯಿತು ಅನ್ನಿಸಿಬಿಟ್ಟರೆ—ತಮ್ಮ ಜವಾಬ್ದಾರಿ ಮುಗಿದಂತೆ, ಎಂದು ಲೀಲಾವತಿ ದಿವಾಕರರ ಮದುವೆ ಮಾತು ನಡಸುತ್ತಿದ್ದರು. ಲೀಲಾವತಿಗೆ ತಾನು ಡಿಗ್ರಿ ತೆಗೆದುಕೊಳ್ಳುವ ತನಕ ಮದುವೆ ಮಾಡಿಕೊಳ್ಳಲೇ ಬಾರ ದೆಂದು ಇಷ್ಟ. ಅವಳ ಅಭಿಪ್ರಾಯದಲ್ಲಿ ಮದುವೆಯಾದರೆ—ವಿದ್ಯೆಗೆ ಕೊನೆಬಂದಂತೆಯೇ ಸರಿ. ಆದುದರಿಂದ ಇನ್ನು ಕೆಲವು ಕಾಲ ಮದುವೆಯ ಸುದ್ದಿಯನ್ನು ಎತ್ತಬಾರದೆಂದು ತಂದೆಗೆ ಖಡಾಖಂಡಿತವಾಗಿ, ತಿಳಿಸಿಬಿಟ್ಟಿ ದ್ದಳು. ದಿವಾಕರನಿಗೂ ತಾನು ಬೊಂಬಾಯಿಗೆ ಹೋಗಿ, ಕೆಲಕಾಲ ದುಡಿದ ನಂತರ ಮದುವೆಯಾಗುವುದು ಒಳ್ಳೆಯದೆಂದು ಅನಿಸಿದುದರಿಂದಲೂ, ಲೀಲಾವತಿ, ಇನ್ನು ಎರಡು ವರ್ಷ ಕಳೆದರೆ ಪದವೀಧರಳಾಗುತ್ತಿದ್ದುದರಿಂದ ಲೀಲಾವತಿಯ ಅಭಿಪ್ರಾಯಕ್ಕೆ ತನ್ನ ಪ್ರೋತ್ಸಾಹ ಕೊಟ್ಟ. ಇದರಿಂದಾಗಿ ಕನಕಲಕ್ಷ್ಮಮ್ಮನವರ ಎಲ್ಲ ಹಾರಾಟ ಸದ್ಯಕ್ಕೆ ನಿಷ್ಪ್ರಯೋಜನವಾಯಿತು.

ಲೀಲಾವತಿಗೆ ಆದಷ್ಟು ಕಾಲ ತನ್ನ ಮದುವೆಯ ಗಂಡಾಂತರವನ್ನು ಮುಂದಕ್ಕೆ ಹಾಕಬೇಕೆಂಬ ಆಸೆ. ಇದರ ಜತೆಗೆ, ಎಂ. ಎ. ತನಕ ಓದುವ

ಆಸೆ ಇದ್ದುದರಿಂದ ಅವಳು ಪಾಸು ಕೋರ್ಸು ತೆಗೆದುಕೊಳ್ಳದೆ, ಇಂಗ್ಲಿಷ್ ಆನರ್ಸ್ಸ ಕ್ಲಾಸಿಗೆ ಸೇರಿದಳು. ಇಂಗ್ಲಿಷಿನಲ್ಲಿ ಶೇಕಡ ಎಪ್ಪತ್ತರ ಮೇಲೆ ಗಣ ಬಂದಿದ್ದುದರಿಂದ ಅವಳಿಗೆ ಸೀಟು ಸಿಕ್ಕಲು ತೊಂದರೆಯಾಗಲಿಲ್ಲ.

" ನೀನು ಸುಮ್ಮನೆ, ಪಾಸುಕೋರ್ಸು ತೆಗೆದುಕೊಳ್ಳದೆ ಆನರ್ಸು ಏಕೆ ತೆಗೆದುಕೊಂಡೆ? ಆನರ್ಸು ತೆಗೆದುಕೊಂಡು ಏನು ಮಾಡುತ್ತೀಯೆ?" ಎಂದು ದಿವಾಕರ ಸುಮ್ಮನೆ ಕೇಳಿದ್ದಕ್ಕೆ " ಎಂ. ಎ. ಓದುತ್ತೇನೆ." ಎಂದಳು.

" ಆಮೇಲೆ? "

ಮದುವೆಯಾಗಿ ಸಂಸಾರಸ್ಥಳಾಗುತ್ತೇನೆ, ಎಂಬ ಉತ್ತರವನ್ನು ಲೀಲಾವತಿಯ ಬಾಯಿಂದ ನಿರೀಕ್ಷಿಸಿದ್ದ. ಆದರೆ ಲೀಲಾವತಿ ಹೇಳಿದಳು:

" ಯಾವುದಾದರೂ ಕೆಲಸಕ್ಕೆ ಸೇರಿಕೊಳ್ಳುತ್ತೇನೆ."

" ಏನು ನೀನು ಕೆಲಸಕ್ಕೆ ಸೇರಿಕೊಳ್ಳುವುದೇ ? "

" ಯಾಕೆ ಸೇರಿಕೊಳ್ಳಬಾರದು?"

" ಇದರಲ್ಲಿ ತಪ್ಪೇನಿಲ್ಲ. ಆದರೆ ಅಂತಹ ಪ್ರಸಂಗ ನಿನಗೆ ಏನು ಬಂದಿದೆ ? "

" ನಾನು ಹೊಟ್ಟೆಪಾಡಿಗಾಗಿ ಕೆಲಸಕ್ಕೆ ಸೇರಬೇಕೆನ್ನುವುದಿಲ್ಲ. ಇಷ್ಟೆಲ್ಲ ಕಲಿತ ಮೇಲೆ—ಕಲಿತುದನ್ನು ಸದ್ವಿನಿಯೋಗಪಡಿಸದ ಮೇಲೆ ವಿದ್ಯೆ ಕಲಿತು ಪ್ರಯೋಜನವೇನು ? "

" ಹಾಗಾದರೆ ನಿನ್ನ ಮದುವೆ ? "

" ಸದ್ಯಕ್ಕಂತೂ ಇಲ್ಲ. ಮುಂದೆ ನೋಡಿಕೊಳ್ಳೋಣ " ಎಂದಳು.

ಈ ಮಾತು ಕೇಳಿ ದಿವಾಕರನ ಮುಖ ಕಳೆಗುಂದಿತು. ಅವನಿಗೆ ತೀರಾ ಉತ್ಸಾಹಭಂಗವಾಗಿತ್ತು. ಜೋಲುಮೋರೆ ಹೊತ್ತು ಆ ಸ್ಥಳದಿಂದ ನಡೆದುಬಿಟ್ಟ.

# ೬

ಲೀಲಾವತಿಯ ಮದುವೆಯ ವಿಷಯವನ್ನು ನಿರ್ಧರಿಸಬೇಕಾಗಿದ್ದ ವ್ಯಕ್ತಿ ಅವಳು ವಿನಾಬೇರೆಯಲ್ಲವೆಂಬುದು ಎಲ್ಲರಿಗೂ ತಿಳಿದಿತ್ತು. ತಂದೆ ವಿಶ್ವನಾಥ ರಾಯರು ಮದುವೆಯ ವಿಷಯದಲ್ಲಿ ಮಗಳಿಗೆ ಸಂಪೂರ್ಣ ಸ್ವಾತಂತ್ರ್ಯವನ್ನು ಕೊಟ್ಟಿದ್ದರು. ಲೀಲಾವತಿ ಎಲ್ಲ ಹುಡುಗಿಯರಂತೆ ಮದುವೆಗೆ ಒಪ್ಪಿಗೆ ಇತ್ತು, ತಂದೆತಾಯಿಗಳ ಕೆಲಸದಲ್ಲಿ ಸಹಕರಿಸಿದರೆ, ಇದರಿಂದ ವಿಶ್ವನಾಥರಾಯರಿಗೆ ತುಂಬಾ ಸಂತೋಷವಾಗುತ್ತಿತ್ತು, ಹಾಗಿಲ್ಲದೆ ಲೀಲಾವತಿ ಮದುವೆ ಬೇಡವೇ ಬೇಡವೆಂದು ಹಠಹಿಡಿದು ಕುಳಿತರೆ ಅವಳಿಗೆ ಬಲವಂತವಾಗಿ ಮದುವೆಮಾಡಲು ಅವರು ಸಿದ್ಧರಿರಲಿಲ್ಲ. ಅವರೆಂದಿಗೂ ತಮ್ಮ ಮಗಳಿಗೆ ಸೇರದಿದ್ದ ವಿಷಯವನ್ನು ಅವಳಿಂದ ಬಲವಂತವಾಗಿ ಮಾಡಿಸಲು ಒಪ್ಪುತ್ತಿರಲಿಲ್ಲ. ಮಗಳ ಮೇಲೆ ಅಷ್ಟೊಂದು ವ್ಯಾಮೋಹ ಅವರಿಗೆ. ಕನಕಲಕ್ಷ್ಮಮ್ಮನವರೂ, ಗಂಗಮ್ಮನವರೂ ಲೀಲಾವತಿಯ ಮದುವೆಯ ವಿಷಯದಲ್ಲಿ ಉತ್ಸುಕರಾಗಿದ್ದರೂ ಲೀಲಾವತಿಯನ್ನು ಒಲಿಸಿಕೊಳ್ಳದೆ ತಮ್ಮ ಪ್ರಯತ್ನ ಫಲಕಾರಿಯಾಗದೆಂದು ಅವರಿಗೆ ಗೊತ್ತಿತ್ತು. ಇದರಂತೆ ದಿವಾಕರನು ಲೀಲಾವತಿಯ ಕೈಹಿಡಿಯಲು ಎರಡು ವರ್ಷಗಳಿಂದ ಹಾತೊರೆಯುತ್ತಿದ್ದರೂ, ಅವನ ಆಸೆಯನ್ನು ನೆರವೇರಿಸುವುದೂ, ನಿರಾಶೆಗೊಳಿಸುವುದೂ ಲೀಲಾವತಿಯ ನಿರ್ಧಾರವನ್ನು ಅವಲಂಬಿಸಿತ್ತು. ಹೀಗಾಗಿ ಲೀಲಾವತಿಯ ಮದುವೆಯ ವಿಷಯದಲ್ಲಿ ಯಾರೂ ತೀರ್ಪು ಕೊಡಲು ಅಸಮರ್ಥರಾಗಿದ್ದರು. ಲೀಲಾವತಿ ಮತ್ತೆ ಒಂದೆರಡು ವರ್ಷ ತನಗೆ ಮದುವೆ ಬೇಡವೆಂದು ಹೇಳಿದ ಮೇಲೆ ಈ ವಿಷಯದಲ್ಲಿ ಅವಳ ಮನ ಒಲಿಸಲು ಹೋಗುವುದು ವ್ಯರ್ಥವೆಂಬುದು ಅವಳ ಸ್ವಭಾವವನ್ನು ಚೆನ್ನಾಗಿ ಬಲ್ಲವರೆಲ್ಲರಿಗೂ ಗೊತ್ತಿದ್ದ ವಿಷಯ. ಆದರೂ, ಕನಕಲಕ್ಷ್ಮಮ್ಮನವರು ಈ ವಿಷಯವನ್ನು ಪದೇ ಪದೇ ಒತ್ತಿ ಹೇಳುತ್ತಿದ್ದರೆ ಒಂದಲ್ಲ ಒಂದು ದಿನ ಅವಳ ಮನಸ್ಸಿಗೆ ಈ ವಿಷಯ ನಾಟಿ ತಮ್ಮ ಆಲೋಚನೆಗೆ ಬೆಂಬಲ ಸಿಗುವುದೆಂಬ ಆಸೆಯಿಂದ, ಸಮಯ ಬಂದಾಗಲೆಲ್ಲಾ ಲೀಲಾವತಿಯೊಂದಿಗೆ ಈ ವಿಷಯ ಚರ್ಚಿಸುತ್ತಿದ್ದರು.

ಒಮ್ಮೆ ಯಾವುದೋ ಮಾತಿಗೆ ಮಾತು ಬಂದು– ಲೀಲಾವತಿ ಹೇಳಿದಳು. ಅವಳ ಗೆಳತಿಯೊಬ್ಬಳಿಗೆ ಅವಳ ಇಷ್ಟದ ವಿರುದ್ಧ ಮದುವೆ ಯಾಗಿತ್ತು. ಅವಳಿಗೆ ತಾನು ಒಬ್ಬ ಪದವೀಧರೆಯಾಗಬೇಕೆಂದು ಆಸೆ ಯಿತ್ತು. ತಂದೆತಾಯಿಗಳು ಉಪಾಯಾಂತರದಿಂದ, ಮದುವೆಯಾದ ಮೇಲೂ ಅವಳ ಓದು ಮುಂದುವರಿಸಬಹುದೆಂಬ ಸುಳ್ಳು ಆಶ್ವಾಸನವಿತ್ತು, ಮದುವೆಗೆ ಅವಳ ಅನುಮತಿ ದೊರಕಿಸಿಕೊಂಡು, ಮದುವೆಮಾಡಿಯೇ ಬಿಟ್ಟರು. ಗಂಡನಾಗಿದ್ದವನಿಗೆ ದೆಹಲಿಯಲ್ಲಿ ಭಾರಿ ಕೆಲಸವಿತ್ತು. ಅವನಿಗೆ ಒಂಟಿಜೀವನ ಸಾಕೆನಿಸಿ, ಸಹಧರ್ಮಿಣಿಗಾಗಿ ಹಾತೊರೆಯುತ್ತಿದ್ದ. ಇಂಥ ವನಿಗೆ ಮದುವೆಯಾದ ತನ್ನ ಹೆಂಡತಿಯನ್ನು ಕಾಲೇಜಿನಲ್ಲಿ ಇನ್ನು ಎರಡು ವರ್ಷ ಓದಲು ಬಿಡುವುದು ಸಾಧ್ಯವಾಗಲಿಲ್ಲ. ಅವನು ಮದುವೆಮಾಡಿ ಕೊಳ್ಳುವಾಗ, ಕಾಲೇಜಿನ ಓದಿಗೆ ತನ್ನ ಅಭ್ಯಂತರವಿಲ್ಲವೆಂದು ಹೇಳಿ ಮದುವೆಯಾಗಿದ್ದರೂ, ಮದುವೆಯಾದ ಮೂರು ತಿಂಗಳಿಗೆ ತನ್ನ ಮಾತನ್ನು ಮುರಿದು, ಹೆಂಡತಿಯನ್ನು ತನ್ನೊಡನೆ ಕಳುಹಿಸಿಕೊಡಲು, ಅತ್ತೆ ಮಾವಂದಿ ರನ್ನು ಪೀಡಿಸಿದ. ಕೊಟ್ಟಹೆಣ್ಣು ಕುಲಕ್ಕೆ ಹೊರಗೆಂದು ಹಿರಿಯರು ನಿಷೇಕ ಪ್ರಸ್ಥ ನೆರವೇರಿಸಿಕೊಟ್ಟರು. ಅದಾದ ಮಾರನೆಯ ದಿನವೇ ಗಂಡ ಹೆಂಡತಿಯನ್ನು ದೆಹಲಿಗೆ ಕರೆದೊಯ್ದುಬಿಟ್ಟ. ಆ ಹುಡುಗಿ ಗಂಡನ ಮನೆಗೆ ಹೋಗುವ ಮುನ್ನ ಲೀಲಾವತಿಯೊಂದಿಗೆ—ತನ್ನ ಮನದ ಆಸೆಗಳೆಲ್ಲಕ್ಕೆ ಮದುವೆಯು ಶೂಲಪ್ರಾಯವಾಗಿ ಬಂದೆರಗಿತೆಂದು ಹೇಳಿಕೊಂಡು ಕಣ್ಣೀರು ಸುರಿಸಿದ್ದಳು. ಇದೇ ಕರುಣ ಕಥೆಯನ್ನು ತನ್ನ ಅತ್ತೆಯವರಿಗೆ ನಿರೂಪಿ ಸುತ್ತಾ ಲೀಲಾವತಿ ಎಂದಳು:

"ಯಾರು ಎಷ್ಟೇ ಹೇಳಲಿ. ಒಮ್ಮೆ ಮದುವೆಯಾಯಿತೆಂದರೆ ಅವಳ ಓದಿಗೆಲ್ಲ ಮಣ್ಣುಹಾಕಿದಂತೆಯೇ. ಇದನ್ನು ಅರಿತೇ ನಮ್ಮ ಹಿರಿ ಯರು—'ವಿವಾಹಂ ವಿದ್ಯಾನಾಶಾಯ' ಎಂದು ಹೇಳಿರುವುದು" ಎಂದು ತನ್ನ ಮಾತನ್ನು ಸಮರ್ಥಿಸಿಕೊಂಡಳು. ಈ ಮಾತನ್ನು ಕನಕಲಕ್ಷ್ಮಮ್ಮನವರು ಒಪ್ಪಲಿಲ್ಲ. ಅವರ ಅಭಿಪ್ರಾಯದಲ್ಲಿ ಮದುವೆಯ ಪಾಡಿಗೆ ಮದುವೆ, ಓದಿನ ಪಾಡಿಗೆ ಓದು ಸಾಗಿಸುವುದರಲ್ಲಿ ಯಾವ ಬಗೆಯ ತೊಂದರೆ ಕಾಣ

ಲಿಲ್ಲ. ಅಷ್ಟಕ್ಕೂ ಯಾರೋ ಒಬ್ಬರು ವಚನ ಭ್ರಷ್ಟರಾದ ಮಾತ್ರಕ್ಕೆ ಎಲ್ಲರೂ ಹಾಗೆಯೇ ಮಾಡುತ್ತಾರೆಯೇ ? ಹಿರಿಯರ ಕೆಲಸವೇನಿದ್ದರೂ, ಮದುಮಕ್ಕಳನ್ನು ಒಂದು ಮಾಡುವುದು. ಅವರು ಕೂಡಲೇ ಸಂಸಾರ ಹೂಡಲೇಬೇಕೆಂಬ ನಿಯಮವೇನಿಲ್ಲವಲ್ಲ? ಅದು ಅವರಿಬ್ಬರ ಅನುಕೂಲತೆ ಗಳನ್ನು ಅವಲಂಬಿಸಿಕೊಂಡಿರುವ ಮಾತು. ಅವರಿಬ್ಬರೂ ಮದುವೆಯಾದ ಮೇಲೂ ಕೆಲವು ಕಾಲ ಓದಿಕೊಂಡೇ ಇರಬಯಸುವುದಾದರೆ ತಾವು ಗಳಾರೂ ಯಾವ ಕಾರಣಕ್ಕೂ ಅಡ್ಡಿಬರುವುದಿಲ್ಲವೆಂದು ಅವರ ವಾದ. ಲೀಲಾವತಿಗೆ ಕನಕಲಕ್ಷ್ಮಮ್ಮ ಹಾಗೂ ವಿಶ್ವನಾಥರಾಯರ ಮಾತಿನಲ್ಲಿ ನಂಬಿಕೆ ಇದ್ದರೂ ಮದುವೆಯಾದ ಅನಂತರ ಓದುವ ವಿಷಯದಲ್ಲಿ ಏಕೋ ಅವಳ ಮನಸ್ಸು ಹಿಂದೆಗೆಯುತ್ತಿತ್ತು. ಅವಳಿಗೆ ಮದುವೆ ಎಂದರೆ ಒಂದು ಬಗೆಯ ಬಂಧನ. ಸ್ವಾತಂತ್ರ್ಯಕ್ಕೆ ಇದರಿಂದ ಅಡ್ಡಿ. ಮಾನಸಿಕವಾಗಿಯೂ ಅಷ್ಟೇ. ಕೇವಲ ಪಾಠಪ್ರವಚನಗಳಿಗೆ ಮೀಸಲಾಗಬೇಕಾದ ಮನಸ್ಸಿನಲ್ಲಿ- ಗಂಡನ ಬಗೆಯದಾದ ಚಿಂತೆಯನ್ನು ತುಂಬಿಟ್ಟರೆ ಇದರಿಂದ, ವ್ರತವೂ ಕೆಡುವುದಲ್ಲದೆ ಸುಖವೂ ದೊರೆಯದೆಂದು ಅವಳ ಭಾವನೆ. ಹೀಗಾಗಿ ಯಾರೆಷ್ಟು ಹೇಳಿದರೂ ತಾನು ವಿದ್ಯಾರ್ಥಿನಿಯಾಗಿರುವ ವರೆಗೆ ಮದುವೆ ಮಾಡಿಕೊಳ್ಳುವುದಿಲ್ಲವೆಂದು ಖಡಾಖಂಡಿತವಾಗಿ ಹೇಳಿಬಿಟ್ಟಳು. ಕೇವಲ ವಾಗ್ವಾದದಲ್ಲಿ ಲೀಲಾವತಿಯನ್ನು ಒಪ್ಪಿಸಬಹುದೆಂಬ ನಂಬಿಕೆ ಕನಕ ಲಕ್ಷ್ಮಮ್ಮನವರಿಗೆ ಬಿಟ್ಟುಹೋದ ಮೇಲೆ ಕನಕಲಕ್ಷ್ಮಮ್ಮನವರು ಲೀಲಾವತಿಯ ಮನ ಒಲಿಸಲು ಬೇರೊಂದು ಮಾರ್ಗ ಆಶ್ರಯಿಸಿದರು. ಲೀಲಾವತಿಗೆ ತನ್ನ ತಂದೆಯ ಸುಖದಲ್ಲಿ ಅತಿಯಾದ ಆಸಕ್ತಿ ಇರುವುದನ್ನು ಅವರು ಕಂಡು ಕೊಂಡಿದ್ದರು. ಅವಳನ್ನು ವಿಚಾರವಾಹಿನಿಯಿಂದ ಒಲಿಸಿಕೊಳ್ಳಲಾಗದ ಮೇಲೆ, ಅವಳ ಅಂತಃಕರಣಕ್ಕೆ ಮೊರೆಯಿಡುವುದರ ಮೂಲಕ ಒಪ್ಪಿ ಸಲು ಪ್ರಯತ್ನಿಸಿದರು.

" ನೋಡಮ್ಮ ಲೀಲಾ. ನಿನಗೆ ಹೆಸರಿಗೆ ತಾಯಿ ಇದ್ದರೂ-ನಿನ್ನನ್ನು ಬಾಲ್ಯದಿಂದಲೂ ಸಾಕಿ ಸಲಹಿದವರು ನಿಮ್ಮ ತಂದೆ ಎಂಬುದು ನಿನಗೇ ತಿಳಿದಿದೆ. ನಿನ್ನ ವಿಷಯದಲ್ಲಿ—ಅವನಿಗೆ ಇರುವ ಪ್ರೀತಿ ವಾತ್ಸಲ್ಯ

ಎಷ್ಟೆಂಬುದನ್ನು ನಾವು ಹೇಳಬೇಕಾಗಿಲ್ಲ. ನಿನಗಾಗಿ, ನಿನ್ನ ಸುಖಕ್ಕಾಗಿ ಅವನು ಏನು ತ್ಯಾಗಮಾಡಲೂ ಸಿದ್ಧನಿದ್ದಾನೆ. ಅವನಿಗಾಗಿ ನೀನು ನಿನ್ನ ಸುಖವನ್ನು ಕೆಲಮಟ್ಟಿಗೆ ಬಲಿಕೊಡಲಾರೆಯ ? ಇದರಿಂದ ನಿನಗೇ ಕಲ್ಯಾಣ ವಾಗುತ್ತದೆ. ನೀನು ಮದುವೆಯಾದರೆ ಅಸುಖಿಯಾಗುವುದಾಗಿ ನಾವು ತಿಳಿದಿದ್ದರೆ ನಾವುಗಳೆಲ್ಲ ನಿನ್ನ ಮದುವೆಗೆ ಪ್ರಯತ್ನಿಸುತ್ತೇವೆಯೇ ? ನಮಗೆ ನಿನ್ನ ಸುಖದಲ್ಲಿ ಆಸಕ್ತಿ ಇಲ್ಲವೆಂದು ತಿಳಿದಿರುವೆಯಾ ? ನಮಗೆ ಬೇಕಾಗಿರು ವುದೆಲ್ಲ—ನೀನು ಸುಖವಾಗಿ ಇರುವುದು. ಆ ದಾರಿಗೊಯ್ಯುವ ಮೊದಲ ಪ್ರಯತ್ನ ನಿನ್ನ ಮದುವೆಯ ಪ್ರಯತ್ನ. ನೀನು ಇಲ್ಲದ, ಸಲ್ಲದ ಕಲ್ಪನೆ ಗಳನ್ನು ಮಾಡಿಕೊಂಡು, ಮದುವೆಯ ಬಗ್ಗೆ ನಿರ್ಲಕ್ಷ್ಯದಿಂದ ಇರುವುದು— ನಿಮ್ಮ ತಂದೆಗೆ ಎಷ್ಟು ನೋವು ಉಂಟುಮಾಡಿದೆ ಗೊತ್ತೆ ? ಅವನು ನಿನ್ನ ಮೇಲಣ ಪ್ರೇಮದಿಂದ, ತನ್ನ ಮನದ ಕೊರಗನ್ನು ನಿನ್ನ ಮುಂದೆ ತೋಡಿ ಕೊಳ್ಳಲಾರದವನಾಗಿದ್ದಾನೆ. ಅವನ ಆಸೆ ಏನಿದೆ ಎಂಬುದು ನನಗೆ ಗೊತ್ತು. ತಾನು ಕೆಲಸದಿಂದ ನಿವೃತ್ತನಾಗುವ ಮೊದಲು, ಮಗಳ ಮದುವೆಯನ್ನು ಅದ್ದೂರಿಯಿಂದ ಮಾಡಿ, ಅನಂತರ ಮಗಳ ಜತೆಯಲ್ಲಿ ವಿಶ್ರಾಂತಿ ಸುಖ ಅನುಭವಿಸಬೇಕೆಂದಿದ್ದಾನೆ. ಈ ಆಲೋಚನೆಯಿಂದ—ಇದೇ ಮೈಸೂರಿ ನಲ್ಲಿ ಮನೆ ಕೊಂಡುಕೊಳ್ಳುವ ತರಾತುರಿಯಲ್ಲಿ ಇದ್ದಾನೆ. ಮೊನ್ನೆ ಬರೆದ ಕಾಗದದಲ್ಲಿ—ಈ ಎಲ್ಲ ವಿಷಯಗಳನ್ನೂ ಕುರಿತು ಬರೆದಿದ್ದಾನೆ. ಹೀಗಿರು ವಾಗ, ನೀನು ಸುಮ್ಮನೆ 'ಮದುವೆ ಬೇಡ' ವೆಂದು ಹೇಳುತ್ತಾ ಬಂದರೆ ಇದರಿಂದ ನಿಮ್ಮ ತಂದೆಗೆ ತುಂಬಾ ದುಃಖವಾಗುತ್ತದೆ. ನಿನಗಾಗಿ ಏನು ಮಾಡಲೂ ಸಿದ್ಧವಿರುವ ನಿನ್ನ ತಂದೆಗೆ ನೀನು ಪ್ರತಿಯಾಗಿ ಮಾಡುವುದು ಇದನ್ನೇ ? " ಎಂದರು ಕನಕಲಕ್ಷ್ಮಮ್ಮ.

ಈ ಮಾತು ಕೇಳಿ ಕೆಲಕಾಲ ಮೌನ ತಾಳಿ, ವಿಷಣ್ಣ ದನಿಯಲ್ಲಿ ಲೀಲಾವತಿ ಹೇಳಿದಳು : " ಅಣ್ಣನೇಕೆ ನನ್ನ ಮದುವೆಯ ವಿಷಯವನ್ನು ಇಷ್ಟು ತಲೆಗೆ ಹಚ್ಚಿಕೊಂಡಿರುವನೋ ನಾ ಬೇರೆ ಕಾಣೆ."

" ಈ ವಿಷಯ ನಿನಗೆ ಗೊತ್ತಾಗಲು—ನೀನಿನ್ನೂ ಹುಡುಗಿ. ಕಾಲೇಜಿ ನಲ್ಲಿ ಕಲಿತಮಾತ್ರಕ್ಕೆ ನಿನಗೆಲ್ಲ ತಿಳಿದಿದೆಯೆ ? ವ್ಯವಹಾರ ಜ್ಞಾನದಲ್ಲಿ

ಸೀನಿನ್ನೂ ಈಗ ಕಣ್ಣು ಬಿಡುತ್ತಿರುವ ಮಗು. ಹೆಣ್ಣಿಗೆ ಏನಿದ್ದರೇನು? ಅನುರೂಪನಾದ ಪತಿಯಿಲ್ಲವೆ ಹೋದರೆ ಅವಳ ಬದುಕು ವ್ಯರ್ಥ—" ಎಂದರು.

"ನನ್ನ ಮಾತನ್ನು ಅನ್ಯಥಾ ಭಾವಿಸಬೇಡಿ ಅತ್ತೆ. ಹೆಣ್ಣಿಗೆ ಮದುವೆಯಾಗದೆ ಹೋದರೆ ಬದುಕಲು ಸಾಧ್ಯವೇ ಇಲ್ಲವೆ? ಮದುವೆಯಾಗದೆ ಹೋದರೆ ಅವಳು ಸುಖಪಡಲಾರಳೆ? ಸಮಾಜಕ್ಕೆ ಸೇವೆ ಸಲ್ಲಿಸಲಾರಳೆ? ಅವಳು ಎಂದೆಂದಿಗೂ ಗಂಡಿನ ಅಡಿಯಾಳಾಗಿ, ಅಸ್ವತಂತ್ರ ಜೀವಿಯಾಗಿ ಬದುಕಬೇಕೆ? ಇದೇ ಅವಳ ಸುಖಕ್ಕೆ ದಾರಿಯೆ? ಇದರಿಂದಲೇ ಅವಳಿಗೆ ಮುಕ್ತಿಯೇ? ಹಾಗಿದ್ದರೆ ಗಂಡಿನ ನೆರವಿಲ್ಲದ ವಿಧವೆಯರ ಪಾಡೇನು? ಮದುವೆಯಾಗದೆ ಉಳಿಯುವ ಪ್ರೌಢವನಿತೆಯರ ಪಾಡೇನು? ಅವರಿಗೆ ಜೀವನದಲ್ಲಿ ಯಾವ ಸುಖವೂ ಇಲ್ಲವಾಗಿದ್ದರೆ, ಗಂಡಿನ ನೆರವಿಲ್ಲದೆ ನಡೆಸುವ ಜೀವನ ದಾರುಣವೇದನೆಯಾದರೆ—ಅವರೇಕೆ ಆತ್ಮಹತ್ಯೆ ಮಾಡಿಕೊಳ್ಳದೆ ಬದುಕಿರುತ್ತಿದ್ದರು? ಪುರುಷನ ನೆರೆ ತಪ್ಪಿದ ಜಗತ್ತಿನ ಎಲ್ಲ ಅಭಾಗಿನಿಯರು—ಎಂದೋ ತಮ್ಮ ಬಾಳ್ವೆಗೆ ಕೊನೆ ತಂದುಕೊಳ್ಳುತ್ತಿದ್ದರು. ಆದರೆ ನಮ್ಮ ಸುತ್ತಲಿನ ಸಮಾಜದಲ್ಲಿ ಕಾಣುವ ಚಿತ್ರ ಇದಕ್ಕೆ ವಿರೋಧವಾದದ್ದು. ಗಂಡ ಕ್ರೂರಿಯಾದರೆ, ಅವನು ದುರಾಚಾರಿಯೂ, ಆಗಿದ್ದರೆ ಅಂತಹವನಿಂದ ತಾವಾಗಿ ದೂರವಿರುವ ಹೆಣ್ಣುಗಳು ನಮ್ಮ ಸಮಾಜದಲ್ಲಿ ಎಷ್ಟು ಸಾವಿರ ಮಂದಿ ಇಲ್ಲ. ಗಂಡಸ ಹಂಗನ್ನು ತೊರೆದು, ಸ್ವತಂತ್ರವಾಗಿ, ಆದರೆ ಮಾನವಾಗಿ ಬದುಕುತ್ತಿರುವ ಎಷ್ಟೊಂದು ಮಂದಿ ವನಿತೆಯರಿಲ್ಲ? ಅವರೆಲ್ಲರಿಂದ ಮರ್ಯಾದೆಯ ಜೀವನ, ಸುಖಸಂಸಾರದ ಜೀವನ ಸಾಧ್ಯವಾಗಿಲ್ಲವೆ?....ಇದನ್ನೆಲ್ಲಾ ಆಲೋಚಿಸದೆ—ಮದುವೆಯೇ ಹೆಣ್ಣಿನ ಮುಕ್ತಿ, ಇಹಪರಗಳ ಸಾಧನ ಎಂದು ಕುಳಿತರೆ ನಾವಾಗಿ ಏನೂ ತಿಳಿಯದ ನಮ್ಮ ಸೋದರಿಯರನ್ನು ಅಧಃಪಾತಾಳಕ್ಕೆ ತುಳಿದಂತೆಯೇ ಸರಿ—" ಎಂದಳು ಲೀಲಾವತಿ. ಅವಳಿಗೆ ತಾನು ಕಾಲೇಜಿನಲ್ಲಿ ಚರ್ಚಾಕೂಟದಲ್ಲಿ ಭಾಷಣ ಮಾಡುತ್ತಿರುವಂತೆ ಅನಿಸಿತೋ ಏನೋ. ಅವಳ ಮನಸ್ಸಿನಲ್ಲಿ ಇದ್ದ ವಿಷಯವನ್ನು, ಮರೆಮಾಚದೆ ಕನಕಲಕ್ಷಮ್ಮನವರ ಮುಂದೆ ಇಟ್ಟಳು. ಕನಕ

ಲಕ್ಷ್ಮಮ್ಮನವರೂ ಹಳೆಯ ಕಾಲದ ಹೆಣ್ಣಾದರೂ—ಅವರು ಹೊಸಕಾಲದ ಭಾವನೆಗಳನ್ನು ಸಮಾಧಾನ ಚಿತ್ತದಿಂದ ಪರಿಶೀಲಿಸುವ ವ್ಯವಧಾನ ಉಳ್ಳವರು. ಅವರು ಲೀಲಾವತಿಯ ಮಾತುಗಳನ್ನು ಸಹಾನುಭೂತಿಯಿಂದ ಆಲೋಚಿಸಿದರು. ಅವರೂ ತಮ್ಮ ವಾದವನ್ನು ಸಮರ್ಥಿಸಲು ಹೇಳಿದರು.

"ನಮ್ಮ ಹಿಂದೂ ಸಂಸ್ಕೃತಿ ಸ್ತ್ರೀಯರಿಗೆ ಪೂಜ್ಯವಾದ ಸ್ಥಾನ ಕೊಟ್ಟಿದೆ. ಲೀಲಾ, ಹೆಣ್ಣಿನ ಸಹಕಾರವಿಲ್ಲದೆ ಗಂಡಿನ ಯಾವುದೊಂದು ಕೆಲಸವೂ ಸಿದ್ಧಿಸದು. ಇದನ್ನು ಅರಿತೇ ಸ್ಮೃತಿಕಾರರು ಹೆಣ್ಣನ್ನು 'ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರದೇವತಾಃ" ಅಂದರೆ ಎಲ್ಲಿ ಸ್ತ್ರೀಯು ಪೂಜಿಸಲ್ಪಡುವಳೋ ಅಲ್ಲಿ ದೇವತೆಗಳು ನಲಿಯುವರು. ಸ್ತ್ರೀಪೂಜೆ ನಡೆಯುವ ಮನೆಯೇ ದೇಗುಲ ಎಂದು ಹೊಗಳಿರುವುದು. ತಮ್ಮ ಧರ್ಮಾರ್ಥಕಾಮಮೋಕ್ಷಗಳಲ್ಲಿ ಅವಳು ಸಹಧರ್ಮಿಣಿಯಾಗಿರಬೇಕೆಂದು-ಅವರು ಆಶಿಸಿ, ಹೆಣ್ಣಿಗೆ ಯೋಗ್ಯಸ್ಥಾನವನ್ನು ಕೊಟ್ಟಿದ್ದಾರೆ. ನೀನು ಈ ಸಂಗತಿಯನ್ನು ಅರಿಯದೆ, ಜಗತ್ತಿನ ಪುರುಷರೆಲ್ಲರೂ ಕೆಟ್ಟವರು, ಅವರು ಸ್ತ್ರೀಯ ಸ್ವಾತಂತ್ರ್ಯವನ್ನು ಅಪಹರಿಸಿ, ಆಕೆಯನ್ನು ಗೃಹಕೃತ್ಯದ ದಾಸಿಯನ್ನಾಗಿ ಮಾಡಿದ್ದಾರೆ ಎಂದು ಆಲೋಚಿಸುತ್ತಿರುವುದು. ಇದು ನಿನ್ನ ತಪ್ಪು ಕಲ್ಪನೆಯಲ್ಲದೆ ಬೇರೆಯಲ್ಲ. ಸ್ತ್ರೀಪುರುಷರಿಬ್ಬರೂ ಒಬ್ಬರ ನೆರವಿಲ್ಲದೆ ಮತ್ತೊಬ್ಬರು ಏನನ್ನೂ ಸಾಧಿಸಲಾರರು. ಸೃಷ್ಟಿ ಸ್ಥಿತಿ ಲಯಗಳಲ್ಲಿ ಅವರಿಬ್ಬರ ಕೈವಾಡವಿದೆ. ಇದರಲ್ಲಿ ಯಾರು ಯಾರಿಗಿಂತ ಕೀಳೂ ಅಲ್ಲ, ಮೇಲೂ ಅಲ್ಲ. ನೀನು ಮದುವೆಯಿಂದ ನಿನ್ನ ಸ್ವಾತಂತ್ರ್ಯಕ್ಕೆ ಧಕ್ಕೆ ಬರುವುದೆಂದು ತಿಳಿದಿದ್ದರೆ ಅದು ತಪ್ಪು ಅಭಿಪ್ರಾಯ—ದಿವಾಕರನೇನು ನಿನಗೆ ಹೊಸಬನಲ್ಲ. ಅವನೊಂದಿಗೆ ಕಳೆದೆರಡು ವರ್ಷಗಳಿಂದ ಓಡಾಡಿರುವೆ. ಅವನು ನಿನ್ನನ್ನು ಮದುವೆಯಾದ ಮಾತ್ರಕ್ಕೆ ನಿನ್ನನ್ನು ತನ್ನ ದಾಸಿಯನ್ನಾಗಿ ಮಾಡಿಕೊಳ್ಳುವನೆಂದು ನನಗೆನಿಸುವುದಿಲ್ಲ—ಆ ಬಗೆಯ ಸಂಕುಚಿತ ದೃಷ್ಟಿ ಓದು ಬರೆಹ ಬಾರದ ಸಂಸ್ಕಾರರಹಿತ ಜನರ ಅಭಿಪ್ರಾಯವಿರಬಹುದು. ಈ ವಿಷಯದಲ್ಲಿ ನನಗಿಂತಲೂ ನೀನು ಹೆಚ್ಚಿಗೆ ಹೇಳಲು ಸಮರ್ಥಳಿದ್ದಿ. ಇದುತನಕ ದಿವಾಕರ ನಿನ್ನನ್ನು ನಡಸಿಕೊಂಡಿರುವ ಮಾನದಂಡದಿಂದ ನಿಮ್ಮ

ಭಾವೀ ದಾಂಪತ್ಯ ಜೀವನವನ್ನು ಅರಿತು ನೋಡಿ ... ಯಾವ
ವುದೇ ಬಿಡುವುದೇ ಎಂಬುದನ್ನು ನಿರ್ಧರಿಸು. ... ತ್ನು
ನನ್ನು ಮದುವೆಯಾಗಲು ಇಷ್ಟಪಡದೆ ಹೋದರೆ
ಹಿಡಿಯುವ ಪುಣ್ಯವಿಲ್ಲವೆಂದುಕೊಳ್ಳುತ್ತೇನೆ. ಆದ
ಬೇರೆ ಯಾರನ್ನಾದರೂ ಮದುವೆಯಾಗಿ ಸುಖ
ಬೇಕಾದ್ದು." ಎಂದರು ಖಿನ್ನರಾಗಿ.

ಅವರು ಲೀಲಾವತಿಯ ಮನಸ್ಸಿನಲ್ಲಿ ದಿವಾಕರನನ್ನು ಮದುವೆಯಾಗುವ ಇಷ್ಟ ಬಹುಶಃ ಇರಲಾರದೆಂದು ಆ ಮಾತು ಹೇಳಿದ್ದರು. ಈ ಮಾತಿನಿಂದ ಲೀಲಾವತಿಯ ಮೇಲೆ ವಿಲಕ್ಷಣ ಪರಿಣಾಮವುಂಟಾಯಿತು.

"ಅತ್ತೆ, ನನ್ನ ಒರಟು ಮಾತುಗಳಿಂದ ನಿಮ್ಮ ಮನಸ್ಸು ನೋಯಿಸಿದ್ದರೆ ಕ್ಷಮಿಸಿ. ನನಗೆ ನಿಮ್ಮ ಮನಸ್ಸನ್ನು ನೋಯಿಸುವ ಇಷ್ಟ ಕೊಂಚವೂ ಇಲ್ಲ. ಆದರೆ ಮಾತಿನ ಭರದಲ್ಲಿ ಆಡಬಾರದ್ದನ್ನು ಆಡಿ ನಿಮ್ಮ ಮನಸ್ಸಿಗೆ ಬೇಸರಗೊಳಿಸಿದ್ದರೆ ದಯವಿಟ್ಟು ಕ್ಷಮಿಸಿ" ಎಂದಳು ಕ್ಷಮಾಪಣೆ ಕೇಳುವ ದನಿಯಲ್ಲಿ.

ಈ ಮಾತಿನಿಂದ ಕನಕಲಕ್ಷ್ಮಮ್ಮನವರಿಗೆ ಒಂದು ಬಗೆಯ ಸಮಾಧಾನವಾಯಿತೆನ್ನಬಹುದು. ಅವರಿಗೆ ಲೀಲಾವತಿ ತಮ್ಮ ಮನೆಯನ್ನೇ ಸೇರುವಳೆನ್ನುವ ದೂರದ ಆಸೆ ಹುಟ್ಟದೆ ಹೋಗಲಿಲ್ಲ.

"ಹಾಗಾದರೆ ನೀನು ನಮ್ಮ ದಿವಾಕರನನ್ನು ಇಂದಲ್ಲದಿದ್ದರೂ ಮುಂದೆ ಮದುವೆಯಾಗಲು ಒಪ್ಪಿರುವೆ ಎಂದು ನಾನು ತಿಳಿಯಲೇ ?"

ಈ ಮಾತಿಗೆ ನೇರವಾಗಿ ಉತ್ತರ ಕೊಡಲು ಲೀಲಾವತಿಯಿಂದ ಸಾಧ್ಯವಾಗದೆ ಹೋಯಿತು. ಅವಳು ಕ್ಷಣಕಾಲ ಯೋಚಿಸಿದಳು ಇದನ್ನು ನೋಡಿ ಕನಕಲಕ್ಷ್ಮಮ್ಮನವರು ಲೀಲಾವತಿ ತನ್ನೊಂದಿಗೆ ಬಾಯಿ ಬಿಟ್ಟು ಎಲ್ಲವನ್ನು ಹೇಳಲು ಸಂಕೋಚಪಡುತ್ತಿರುವಳೆಂದು ಊಹಿಸಿ,

"ಸಂಕೋಚಪಡಲು ನಾನು ಹೊರಗಿನವಳೇ ಲೀಲಾ? ಹೇಳಿಬಿಡು, ನಿನ್ನ ಮನಸ್ಸಿನಲ್ಲಿ ಇರುವುದನ್ನು ಸ್ಪಷ್ಟವಾಗಿ ಹೇಳಿಬಿಡು" ಎಂದು ಒತ್ತಾಯಪಡಿಸಿದರು. ಅವರ ಒತ್ತಾಯಕ್ಕೆ ಕಟ್ಟುಬಿದ್ದು ಲೀಲಾವತಿ ಹೇಳಿದಳು.

ಲಕ್ಷ್ಮಮ್ಮನವರೆ ಹೀಗೆನ್ನುವೆನೆಂದು ನೀವು ಏನೂ ತಿಳಿಯಬಾರದು. ತಾಯಿ ಭಾವದಿಂತಿರುವ ನಿಮ್ಮೊಡನೆ ನನಗೆ ಸಂಕೋಚವಿಲ್ಲ. ನನಗೆ ದಿವಾಕರನ
೭ ವಿಷಯದಲ್ಲಿ ತುಂಬಾ ಪ್ರೀತಿ ಇದೆ. ಅವನು ನಿಮಗೆ ಮಗನಿರಬಹುದು, ಆದರೆ ನನಗೆ ಜೀವದ ಗೆಳೆಯನಾಗಿದ್ದಾನೆ. ಅವನನ್ನು ನಾನು ಪ್ರಾಣಕ್ಕಿಂತ ಹೆಚ್ಚಿಗೆ ಪ್ರೀತಿಸುತ್ತೇನೆ. ಆದರೆ ಇದನ್ನು ಹೇಗೆ ತೋರಿಸಬೇಕೆಂಬುದು ಮಾತ್ರ ನನಗೆ ತಿಳಿಯದಾಗಿದೆ" ಎಂದಳು.

"ನೀನು ಅವನನ್ನು ಮದುವೆಯಾಗಲು ಒಪ್ಪಿದರೆ ನಿನಗಿರುವ ಪ್ರೇಮಾಧಿಕ್ಯವನ್ನು ತೋರಿಸಲು ಅದಕ್ಕಿಂತ ಬೇರೆ ದಾರಿ ಬೇಕೇ?"

ಈ ಮಾತು ಕೇಳಿ ಲೀಲಾವತಿ ಕೊಂಚ ತಡೆದು ಹೇಳಿದಳು.

"ನಮ್ಮಿಬ್ಬರ ಪ್ರೀತಿ ಪ್ರದರ್ಶನಕ್ಕೆ ವಿವಾಹ ಒಂದೇ ದಾರಿಯೇ? ಅದು ಉಳಿದು ಬೇರೆ ಮಾರ್ಗವಿಲ್ಲವೇ?"

ಈ ಮಾತಿಗೆ ಕನಕಲಕ್ಷ್ಮಮ್ಮನವರಿಗೆ ಏನು ಹೇಳಬೇಕೆಂಬುದೇ ಹೊಳೆಯಲಿಲ್ಲ. ಲೀಲಾವತಿಯಂತಹ ಮುಗ್ಧೆ—ಹಾಗೆಂದೇ ಅವರು ತಿಳಿದಿದ್ದರು. ಲೀಲಾವತಿಯ ಬಾಯಲ್ಲಿ ಎಂತಹ ದೊಡ್ಡ ಮಾತು ಬರುತ್ತಿದೆ ಎಂದು ಆಶ್ಚರ್ಯವಾಯಿತು. ಈ ಮಾತು ಲೀಲಾವತಿಯ ಬದಲು ಬೇರೆ ಯಾರೋ ಆಡುತ್ತಿರಬೇಕೆಂದು ಅವರಿಗೆ ತೋರಿತು. ಲೀಲಾವತಿಯು ಹೇಳಿದ ಮಾತು ಅವರನ್ನು ವಿಚಾರ ಮಾಡುವಂತೆ ಮಾಡಿತ್ತು. ಅವರೆಂದೂ ಪ್ರೀತಿಯ ಬಗ್ಗೆ ತಕ್ಕ ಚಿಂತನೆಮಾಡಿರಲಿಲ್ಲ. ಅವರ ಮಟ್ಟಿನ ಪ್ರೀತಿ ಎಂದರೆ ಗಂಡ ಹೆಂಡಿರ ಪ್ರೀತಿ—ಅನುರಾಗ. ಉಳಿದ ಎಲ್ಲ ಪ್ರೀತಿಯಲ್ಲಿ ಲೈಂಗಿಕ ಆಕರ್ಷಣೆಗೆ ತಾಯಿಕರುಳಿನ ಮಮತೆ ಇರುವುದೆಂಬುದೇ ಅವರ ಅಭಿಪ್ರಾಯ. ಗಂಡುಹೆಣ್ಣಿನ ಪ್ರೀತಿಯಲ್ಲಿ ಮನಸ್ಸಿನ ಪ್ರಸನ್ನತೆಗೆ ಉಗಮ ಸ್ಥಾನ, ಲೀಲಾವತಿ ನಿರೀಕ್ಷಿಸುತ್ತಿರುವ ಪ್ರೀತಿಯನ್ನು ಈ ಎರಡು ಗುಂಪಿನಲ್ಲಿ ಯಾವ ಗುಂಪಿಗೆ ಸೇರಿಸುವುದು? ಎಂಬುದು ಅರಿಯದಾಯಿತು.

"ನಿನ್ನ ಮಾತು ನನಗೆ ಅರ್ಥವೇ ಆಗುವುದಿಲ್ಲಮ್ಮ" ಎಂದರು.

"ನೀವು ನಿಮ್ಮ ಮಗನನ್ನು ಪ್ರೀತಿಸುತ್ತಿಲ್ಲವೆ? ನಿಮ್ಮ ಸೊಸೆಯನ್ನು ಪ್ರೀತಿಸುತ್ತಿಲ್ಲವೆ? ನಿಮ್ಮ ಅಣ್ಣನನ್ನು ಪ್ರೀತಿಸುತ್ತಿಲ್ಲವೆ? ನಿಮ್ಮ ಯಜ

ಮಾನರನ್ನು ಪ್ರೀತಿಸುತ್ತಿಲ್ಲವೆ ?— ಎಲ್ಲರನ್ನೂ ಒಂದೇ ರೀತಿಯಾಗಿ ಯಾವ ಬಗೆಯ ವೈವಿಧ್ಯವಿಲ್ಲದೆ ಪ್ರೀತಿಸುತ್ತಿದ್ದೀರಾ? ನಿಮ್ಮ ಸೋದರ ವಾತ್ಸಲ್ಯಕ್ಕೂ ಪುತ್ರ ವಾತ್ಸಲ್ಯಕ್ಕೂ, ಭರ್ತೃ ವಾತ್ಸಲ್ಯಕ್ಕೂ ವ್ಯತ್ಯಾಸವಿಲ್ಲವೆ ?

"ವ್ಯತ್ಯಾಸವಿದೆ."

"ಯಾವ ವ್ಯತ್ಯಾಸ? "

"ಪತಿಪತಿಗಳ ಪ್ರೇಮದಲ್ಲಿ ದೈಹಿಕ ಆಕರ್ಷಣೆ—ಲೈಂಗಿಕ ಪ್ರೇರಣೆ. ಇರುವುದರಿಂದ ಅದರಲ್ಲಿ ಕಾಮದ ಅಂಶವಿದೆ. ಉಳಿದ ಪ್ರೇಮಗಳಲ್ಲಿ ಈ ಕಳಂಕವಿಲ್ಲ."

"ಪತಿಪತಿಗಳ ಪ್ರೇಮ ಕಾಮರಹಿತ ಪ್ರೇಮವಾಗಿರಲು ಸಾಧ್ಯವೇ ಇಲ್ಲವೆ? "

ಮತ್ತೆ ಇದೇ ಪ್ರಶ್ನೆ! ಅದೇ ಕೊಡಕು! ಇದನ್ನು ಅವರು ಬಿಡಿಸದಾದರು. ಲೈಂಗಿಕ ಸುಖರಹಿತ, ವಿಷಯ ಸುಖಾಪೇಕ್ಷೆವರ್ಜಿತ ದಾಂಪತ್ಯ ಜೀವನ ಎಂತಹದೆಂಬುದರ ಕಲ್ಪನೆ ಅವರೆಷ್ಟು ಊಹೆಮಾಡಿದರೂ ಊಹಿಸಲು ಸಾಧ್ಯವಾಗಲಿಲ್ಲ.

"ನನ್ನ ಅಭಿಪ್ರಾಯದಲ್ಲಿ ಆ ಬಗೆಯ ಶುದ್ಧಪ್ರೇಮ ಸಾಧ್ಯ. ಆಗ ಪ್ರೇಮ ಕೇವಲ ಹೃದಯ ಸಂಬಂಧವಾಗಿದ್ದು ಕಾಮದ ಸೋಂಕಿಲ್ಲದೆ ಬದುಕು ಪರಿಶುದ್ಧ ಜೀವನವಾದೀತು! " ಎಂದಳು ಲೀಲಾವತಿ ಕನಕಲಕ್ಷ್ಮಮ್ಮನವರು ಮೌನವಾಗಿ ಕುಳಿತುದನ್ನು ಕಂಡು. ಆದರೆ ಈ ಮಾತು ಕನಕಲಕ್ಷ್ಮಮ್ಮನವರ ಮನಸ್ಸಿಗೆ ಹಿಡಿಯಲಿಲ್ಲ. ಅವರ ಅಭಿಪ್ರಾಯದಲ್ಲಿ ಶುದ್ಧವಾದ ಪ್ರೇಮವೆಂದು ಕರೆಯಲ್ಪಡುವ ಕಾಮದ ಸೋಂಕಿಲ್ಲದ ಗಂಡು ಹೆಣ್ಣಿನ ಸ್ನೇಹ ಅಲೌಕಿಕವೆನಿಸಿಕೊಂಡ ಸಂಬಂಧ. ಹೆಣ್ಣು ಗಂಡುಗಳು ಗಂಡಹೆಂಡಿರಾಗಿ ಸೇರುವುದರ ಉದ್ದೇಶ್ಯವಾದರೂ ಏನು? ಸದ್ಗತಿ ಪ್ರದಾಯಕ ಸಂತಾನ ಲಾಭಕ್ಕಾಗಿ, ಸಂತಾನಾಪೇಕ್ಷೆಯಿಲ್ಲದ ವಿವಾಹ, ದಾಂಪತ್ಯ ಜೀವನ ವಿಷಯ ಸುಖಾಪೇಕ್ಷೆಯ ಲೋಲುಪ ಜೀವನ, ಅದು ಪಾಪಹೇತುವಲ್ಲದೆ ಬೇರೆಯಲ್ಲ. ಇದನ್ನೆಲ್ಲಾ ಲೀಲಾವತಿಯೂ ಆಲೋಚಿಸಿರಬೇಕು.

ಅವಳೆಂದಳು :

"ನಮ್ಮ ಮದುವೆಯ ಗುರಿ ಕೇವಲ ಸಂತಾನೋತ್ಪತ್ತಿ ಎಂದಾದರೆ ಅಲ್ಲಿ ಕಾಮದ ಅಂಟು ಇದೆ ಎಂದಾಯಿತು. ಏಕೆಂದರೆ ಸಂತಾನಾಪೇಕ್ಷೆಗೂ ವಿಷಯಸುಖಾಪೇಕ್ಷೆಗೂ ಇರುವ ವ್ಯತ್ಯಾಸ ಅತ್ಯಲ್ಪ. ಒಂದು ಇನ್ನೊಂದರ ಕಾರ್ಯಾಕಾರಣ. ಕಾಮದ ಈ ವರ್ತುಲಕ್ಕೆ ಪ್ರೇಮದ ಮುಖವಾಡ ಹಾಕುವುದು ಒಂದು ಬಗೆಯ ಆತ್ಮವಂಚನೆ ಎಂದೇ ನನ್ನ ಭಾವನೆ."

"ಹಾಗಾದರೆ ನೀನು ದಿವಾಕರನನ್ನು ಪ್ರೀತಿಸುವುದು ಯಾವ ದೃಷ್ಟಿಯಿಂದ?"

"ನಾನು ದಿವಾಕರನನ್ನು ಪ್ರೀತಿಸುತ್ತೇನೆ ನಿಜ. ಆದರೆ ಅವನ ಸುಂದರವಾದ ಮನಸ್ಸನ್ನು. ನಾನು ದೇಹವನ್ನು ಪ್ರೀತಿಸುತ್ತಿದ್ದರೆ ನನ್ನ ದೇಹವನ್ನೆಂದೋ ಅರ್ಪಿಸಿಬಿಡುತ್ತಿದ್ದೆ. ಆದರೆ ಅದು ಇನ್ನೂ ನನ್ನದಾಗಿಯೇ ಉಳಿದಿದೆ. ಅಂತಲೇ ನನ್ನದು ಕಾಮವಲ್ಲ—ನಿರ್ವ್ಯಾಜ ಪ್ರೇಮ."

"ನಿನ್ನ ದೃಷ್ಟಿಯಲ್ಲಿಯೇ ವಿಚಾರಿಸುವ. ದಿವಾಕರನನ್ನು ಮನಸಾರೆ ತ್ರಿಕರಣಪೂರ್ವಕವಾಗಿ ಪ್ರೀತಿಸುತ್ತಿರುವೆ. ಹೀಗಿರುವಲ್ಲಿ ನಿನ್ನದೆನ್ನುವ ಸರ್ವಸ್ವವನ್ನು ಅಂದರೆ ಬುದ್ಧಿ ಮನಸ್ಸು ದೇಹಗಳನ್ನೂ—ಕಾಯಾವಾಚಾ ಮನಸಾ ಅರ್ಪಿಸುವುದರಲ್ಲಿ ಏನು ತಪ್ಪು?"

"ನನ್ನ ನಿಮ್ಮ ಭಿನ್ನಾಭಿಪ್ರಾಯವಿರುವುದು ಇಲ್ಲೇ. ನೀವು ಹೇಳುವಂತೆ ದಿವಾಕರನನ್ನು ನಾನು ತ್ರಿಕರಣ ಪೂರ್ವಕವಾಗಿ ಪ್ರೀತಿಸುತ್ತಿಲ್ಲ. ಮನಸಾ ವಾಚಾ ಪ್ರೀತಿಸುತ್ತಿದ್ದೇನೆ. ಕಾಯತಃ ಪ್ರೀತಿಸುತ್ತಿಲ್ಲ."

"ಹಾಗಿದ್ದ ಮೇಲೆ ನಿನ್ನ ಪ್ರೀತಿ ಪರಿಶುದ್ಧವೆನ್ನಲು ಹೇಗೆ ಬಂದೀತು? ನಿನಗಾಗಿ ಆತ್ಮಾರ್ಪಣೆ ಮಾಡುವ ವ್ಯಕ್ತಿಗೆ ನೀನು ದ್ರೋಹ ಬಗೆಯುವೆ, ಎಂದಾಯಿತು."

"ಇದು ದ್ರೋಹವೋ—ವಿದ್ರೋಹವೋ ನಾನರಿಯೆ. ನಾನು ದಿವಾಕರನ ಸುಸಂಸ್ಕೃತ ಮನಸ್ಸಿಗೆ ಮಾರು ಹೋಗಿದ್ದೇನೆ. ಅಂತಲೇ ಮನಸಾ ವಾಚಾ ಪ್ರೀತಿಸುತ್ತಿರುವುದು. ನನ್ನ ಅಭಿಪ್ರಾಯದಲ್ಲಿ ಕಾಯತಃ ಪ್ರೀತಿಸುವುದು ಪರಿಶುದ್ಧವಾದ ಪ್ರೀತಿಗೆ ಅನಿವಾರ್ಯವೆಂದು ತಿಳಿದಿಲ್ಲ. ಏಕೆಂದರೆ ಆಹಾರ ನಿದ್ರಾ ಭಯ ಮೈಥುನಗಳೆಂಬ ಪ್ರವೃತ್ತಿಗಳು ಮಾನವ

ಸಹಜಗುಣಗಳು. ಇವು ಹೃದಯದ ಅಪ್ಪಣೆಗೆ ಕಾಯುವುದಿಲ್ಲ. ಇವೆಲ್ಲ ಒಂದೊಂದು ಬಗೆಯ ದೈಹಿಕ ತೃಷೆ."

"ನಿನ್ನ ಮಾತುಗಳೊಂದೂ ನನಗೆ ಅರ್ಥವಾಗುವುದಿಲ್ಲ. ನೀನು ಹೇಳುವಂತೆ ಇವುಗಳು ಕೇವಲ 'ತೃಷೆ'ಗಳೇ ಆಗಿದ್ದರೆ ನಮ್ಮ ಪೂರ್ವಿಕರೇಕೆ ಮದುವೆಯ ಕಟ್ಟಳೆ ಏರ್ಪಡಿಸುತ್ತಿದ್ದರು? ಅವರ ಅಭಿಪ್ರಾಯದಲ್ಲಿ ಇವು ಕೇವಲ ದೈಹಿಕ ತೃಷ್ಣೆಗಿಂತ—ಪಾರಮಾರ್ಥಿಕ ತೃಷ್ಣೆಗಾಗಿ ಇರಬೇಕು. ಅಂತಲೇ ಮದುವೆಯ ಕಟ್ಟಳೆಯನ್ನು ಪ್ರಚಾರಕ್ಕೆ ತಂದರು."

"ನನ್ನ ಅಭಿಪ್ರಾಯವಿಷ್ಟು. ಕಾಮಪ್ರೇಮಗಳು ದಾಂಪತ್ಯ ಜೀವನದ ಎರಡು ಮುಖಗಳು. ಹೃದಯಕ್ಕೆ ಸಂಬಂಧಿಸಿದ ಭಾವ ಪ್ರೇಮವೆನ್ನಿಸಿಕೊಳ್ಳುತ್ತದೆ. ದೇಹಕ್ಕೆ ಸಂಬಂಧಿಸಿದ ಭಾವ ಕಾಮವೆನಿಸಿಕೊಳ್ಳುತ್ತದೆ. ನನ್ನ ಅಭಿಪ್ರಾಯದಲ್ಲಿ ವಿವಾಹದ ಮುಖ್ಯವಾದ ಭಾವ ಪ್ರೇಮ ಕೈಂಕರ್ಯ. ಇದರಲ್ಲಿ ಕಾಮ ಅನಿವಾರ್ಯವಲ್ಲ."

"ಸುಮ್ಮನೆ ವೃಥಾ ಚರ್ಚೆಯಿಂದ ಪ್ರಯೋಜನವಿಲ್ಲ ಲೀಲಾ, ಒಂದು ಮಾತಿನಲ್ಲಿ ನಿನ್ನ ಅಭಿಪ್ರಾಯ ತಿಳಿಸು. ನಿನಗೆ ದಿವಾಕರನನ್ನು ಮದುವೆಯಾಗಲು ಇಷ್ಟವಿದೆಯೋ ಇಲ್ಲವೊ?"

"ಖಂಡಿತ ಇಷ್ಟವಿದೆ. ಆದರೆ ನಮ್ಮ ದಾಂಪತ್ಯ ಜೀವನದಲ್ಲಿ ಕಾಮ ಅನಿವಾರ್ಯವಾಗಬಾರದು."

"ಹಾಗೆಂದರೆ?"

"ನನ್ನಿಂದ ದೈಹಿಕ ಸುಖ ಬಯಸಬಾರದು."

"ಮದುವೆಯಾಗಿಯೂ ಅಪರಿಚಿತರಂತೆ ಬಾಳುವುದಾಗಿದ್ದರೆ ಮದುವೆ ತಾನೇ ಏಕೆ ಬೇಕು?"

"ನನ್ನ ಪ್ರಶ್ನೆಯೂ ಅದೇ ಆಗಿದೆ."

ಈ ಮಾತು ಕೇಳಿ ಕನಕಲಕ್ಷ್ಮಮ್ಮನವರು ಕೆರಳಿ ಹೇಳಿದರು—

"ಲೀಲಾ ನಿನಗೆಲ್ಲೋ ತಲೆ ಕೆಟ್ಟಿದೆ. ಇಲ್ಲದೆ ಇದ್ದರೆ ನಿನಗೆ ಇಷ್ಟೆಲ್ಲ ವಿಚಿತ್ರ ಕಲ್ಪನೆಗಳು ಮದುವೆಯ ವಿಷಯದಲ್ಲಿ ಬರುತ್ತಿರಲಿಲ್ಲ."

ಎಂದು ಹೇಳುತ್ತಾ, ದುಃಖದ ಆವೇಶದಲ್ಲಿ ಲೀಲಾವತಿಯನ್ನು

ಕರುಣಾ ಪೂರ್ಣವಾಗಿ ನೋಡಿ ಅಳಲಾರಂಭಿಸಿದರು. ಆಗ ಲೀಲಾವತಿಯೇ ಅವರನ್ನು ಸಮಾಧಾನಪಡಿಸಬೇಕಾಯಿತು.

ಇಷ್ಟೆಲ್ಲ ಚರ್ಚೆ ನಡೆದ ಮೇಲೆ ಒಂದು ವಿಷಯ ನಿರ್ಧಾರವಾಯಿತು. ಲೀಲಾವತಿ ಸದ್ಯದ ಪರಿಸ್ಥಿತಿಯಲ್ಲಿ ಯಾರನ್ನೂ ಮದುವೆಯಾಗುವುದಿಲ್ಲ. ಮುಂದೆ, ಅವಳ ವ್ಯಾಸಂಗ ಮುಗಿದ ಮೇಲೂ ಅವಳು ದಿವಾಕರನನ್ನೇ ಮದುವೆಯಾಗುವಳೆನ್ನುವ ನೆಚ್ಚಿಕೆಯೂ ಇಲ್ಲ. ಆದುದರಿಂದ ದಿವಾಕರನಿಗೆ ಬೇರೆಡೆಯಲ್ಲಿ ಹೆಣ್ಣು ಹುಡುಕಬೇಕು....

ಕನಕಲಕ್ಷ್ಮಮ್ಮನವರು ಲೀಲಾವತಿ ತನ್ನೊಂದಿಗೆ ಹೇಳಿದ ಮಾತುಗಳ ಸಾರಾಂಶವನ್ನು ವಿಶ್ವನಾಥರಾಯರಿಗೆ ಪತ್ರ ಮುಖೇನ ತಿಳಿಸಿ,

" ನಾವೊಂದು ಬಗೆದರೆ ದೈವ ಒಂದು ಬಗೆದಿದೆ " ಎಂದು ಮಾತು ಮುಗಿಸಿದ್ದರು. ಈ ಸುದ್ದಿ ಕೇಳಿ ವಿಶ್ವನಾಥರಾಯರಿಗೆ ಆಕಾಶವೇ ಕಳಚಿ ತಲೆಯ ಮೇಲೆ ಬಿದ್ದಂತೆ ಆಯಿತು. ತನ್ನ ಹಾಗೂ ಕನಕಲಕ್ಷ್ಮಮ್ಮನ ಬಹಳ ದಿನಗಳ ಕನಸು ಹೀಗೆ ಪುಡಿಪುಡಿಯಾಗುವುದೆಂದು ಅವರು ತಿಳಿದಿರಲಿಲ್ಲ. ಇದರಿಂದ ಅವರ ಮನಶ್ಶಾಂತಿ ಕದಡಿತು. ಆದರೆ ಅವರು ಏನೇನು ಮಾಡಲೂ ತೋರದೆ ಸುಮ್ಮನಾದರು.

ಎಲ್ಲರಿಗಿಂತ ಹೆಚ್ಚಿನ ಮನೋಘಾತವೆಂದರೆ ದಿವಾಕರನಿಗೆ. ಅವನು ಕಳೆದೆರಡು ವರ್ಷಗಳಿಂದ ಲೀಲಾವತಿಯನ್ನು ಮನೋವಲ್ಲಭೆಯಾಗಿ ಮಾಡಿಕೊಂಡು ತ್ರಿಕರಣಪೂರ್ವಕವಾಗಿ ಪ್ರೀತಿಸುತ್ತಿದ್ದ. ಅವರ ನಡುವೆ ಇದ್ದ ಸಲಿಗೆಯನ್ನು ನೋಡಿದರೆ ಅವರು ಬಹುಕಾಲ ಸಂಸಾರಮಾಡಿಕೊಂಡಿದ್ದ ಸತಿಪತಿಗಳೆನ್ನಬೇಕು. ಆದರೆ ಲೀಲಾವತಿ ಪರೋಕ್ಷವಾಗಿ ತಿಳಿಸಿದ ನಿರ್ಧಾರ ಅವನ ಆಸೆಗಳನ್ನು ಬುಡಮೇಲುಮಾಡಿತು. ಅವನು ಆ ಹೊಡೆತದಿಂದ ಚೇತರಿಸಿಕೊಳ್ಳಲಾರದವನಾದ. ಅವನಿಗೆ ಜಗತ್ತು ಕತ್ತಲ ಹುತ್ತವಾಯಿತು. ಅವನಿಗೆ ಲೀಲಾವತಿ ಇಲ್ಲದ ಮೇಲೆ ಜೀವನ ಅಸಹ್ಯವೆನಿಸಿ, ಬ್ಯಾಂಕಿನ ಯಿಯ ಕೆಲಸಕ್ಕೆ ರಾಜೀನಾಮೆ ಕೊಟ್ಟುಬಿಡುವ ಹುಚ್ಚು ಮನಸ್ಸು ಆಯಿತು. ಅವನಿಗೆ ಊಟತಿಂಡಿಗಳಲ್ಲಿ ಅಭಿರುಚಿ ಕಡಿಮೆಯಾಗಿ ಸದಾ ಏನೋ ಚಿಂತಿಸುತ್ತಾ, ಕಳವಳಿಸುತ್ತಾ, ಇರಲಾರಂಭಿಸಿದ. ಇವನ್ನೆಲ್ಲ ಸೂಕ್ಷ್ಮ

ವಾಗಿ ಪರಿಶೀಲಿಸಿದ ಲೀಲಾವತಿಗೆ ತುಂಬಾ ದುಃಖವಾಯಿತು—ತನ್ನ ಮಾತನ್ನು ಕನಕಲಕ್ಷ್ಮಿಯವರು ತಪ್ಪು ಅರ್ಥಮಾಡಿಕೊಂಡು, ದಿವಾಕರನಲ್ಲಿ ತನಗೆ ಪ್ರೀತಿ ಇಲ್ಲವೆಂದು ವರದಿಮಾಡಿ, ದಿವಾಕರನ ಮನಸ್ಸನ್ನು ಕೆಡಿಸಿರಬೇಕೆಂದು ಊಹಿಸಿ, ಅವಳೇ ಅವನನ್ನು ಸಂತೈಸಲು ಬಂದಳು :

"ದಿವೂ. ನಾನು ನಿನ್ನನ್ನು ಪ್ರೀತಿಸುತ್ತಿಲ್ಲವೆಂದು ನಿನಗೆ ಯಾರು ಹೇಳಿದರು? ನನ್ನ ಪ್ರೀತಿಯ ಬಗ್ಗೆ ನಿನಗೆ ಸಂಶಯವೇ? ಹೃದಯ ಬಿಚ್ಚಿ ತೋರಿಸುವುದಾದರೆ—ಅದನ್ನು ಮಾಡಿ ತೋರಿಸುತ್ತಿದ್ದೆ. ನನ್ನಲ್ಲಿ ನಿನಗೆ ನಂಬಿಕೆ ಇಲ್ಲವೆ?....ಏನು....ಮಂಕನಂತೆ ಚಿಂತಿಸುತ್ತ ಕುಳಿತರೆ ಕಾರ್ಯ ಸಾಗದು. ಮೊದಲು ಬೊಂಬಾಯಿಗೆ ಹೊರಡುವ ಸಿದ್ಧತೆಮಾಡು– ನನ್ನ ವಿಷಯದಲ್ಲಿ ನೀನು ಶಂಕಿಸಬೇಡ. ನಾನು ಎಂದೆಂದಿಗೂ ನಿನ್ನವಳೇ ಇರುವೆ."

ಎಂದು ಹುರಿದುಂಬಿಸಿ, ದಿವಾಕರನನ್ನು ಬೊಂಬಾಯಿಗೆ ಹೊರಡಿಸುವ ಸಿದ್ಧತೆಮಾಡಿದಳು.

ಅವನು ಹೊರಟು ನಿಂತಾಗ, ಅವನ ಕೈಯನ್ನು ಮೃದುವಾಗಿ ಹಿಸುಕಿ,

"ದಿವೂ, ಬೊಂಬಾಯಿಗೆ ಹೋದ ಮೇಲೆ ನನ್ನನ್ನು ಮರೆಯುವುದಿಲ್ಲ ತಾನೆ?" ಎಂದಳು.

"ಮರೆತುಬಿಡುವೆನೆಂಬ ಹೆದರಿಕೆ ಇದೆಯೆ?"

"ಏನೋ ಹೇಗೆ ಹೇಳಲಿ. ಬೊಂಬಾಯಿ ದೊಡ್ಡ ಊರು. ಅನೇಕ ಬಗೆಯ ಆಕರ್ಷಣೆಗಳಿವೆ" ಎಂದು ಹೇಳಿ ನಕ್ಕಳು.

"ಹೌದು ಎಲ್ಲಕ್ಕೂ ಬಲವತ್ತರ ಆಕರ್ಷಣೆ ನೀನಿರುವಾಗ ಬೇರೇನು ಮಾಡಬಲ್ಲದು? ನಿನ್ನ ಕಾಲೇಜಿನ ಸಾವಿರ ಚಟುವಟಿಕೆಗಳ ಮಧ್ಯೆ ನನ್ನ ನೆನಪು ಬಂದರೆ ನನ್ನ ಪುಣ್ಯ."

"ನೀನು ಈ ಮಾತು ಹೇಳಿದರೆ ನನ್ನ ಮನಸ್ಸಿಗೆ ತುಂಬಾ ನೋವು ಉಂಟಾಗುತ್ತದೆ."

"ಏಕೆ?"

" ನೀನು ನನ್ನನ್ನು ಅರ್ಥಮಾಡಿಕೊಂಡಿದ್ದರೆ ಈ ಮಾತು ಹೇಳುತ್ತಿರಲಿಲ್ಲ. ನನ್ನ ಹೃದಯಮಂದಿರವನ್ನು ಚಿರಸ್ಥಾಯಿಯಾಗಿ ನೆಲೆಸಿರುವ ನಿನ್ನಿಂದ ಕ್ಷಣಕಾಲವಾದರೂ ಅಗಲಿರುವುದು ಸಾಧ್ಯವಿದೆಯೆ ? "

" ನನ್ನ ಮೇಲೆ ನಿನಗೆ ಅಷ್ಟು ಪ್ರೀತಿ ಇದೆಯಾ ? "

" ಕಾಸು ಕೊಟ್ಟು ಕಣಿ ಕೇಳು—ಗೊತ್ತಾಗುತ್ತೆ " ಎಂದಳು, ನಸು ನಗುತ್ತಾ.

ದಿವಾಕರನಿಗೆ ಆ ಮಾತು ಕೇಳಿ, ಸಾವಿರ ಹೊನ್ನು ಕೊಟ್ಟಿದ್ದರೂ ಆಗದಿದ್ದ ಸಂತೋಷವುಂಟಾಯಿತು. ಅವನು ಲೀಲಾವತಿಯ ಕೈಯನ್ನು ತೆಗೆದುಕೊಂಡು ಮೃದುವಾಗಿ ನೇವರಿಸುತ್ತಾ, ತನ್ನ ಮುಖದಲ್ಲಿ ಹುದುಗಿಕೊಂಡ. ಅವಳ ಪ್ರೀತಿಯ ಸ್ಪರ್ಶದಲ್ಲಿ ಕ್ಷಣಕಾಲ ಮೈಮರೆತ. ಮರುಕ್ಷಣದಲ್ಲಿಯೇ ಏನೋ ನೆನಪಾಗಿ, ಅವನ ಕಣ್ಣುಗಳಿಂದ ಧಾರಾವಾಹಿನಿಯಾದ ಅಶ್ರು ಪ್ರವಾಹ ಉಕ್ಕಿತು. ಲೀಲಾವತಿ ತನ್ನ ಕರವಸ್ತ್ರದಲ್ಲಿ ದಿವಾಕರನ ಕಣ್ಣೀರನ್ನು ಒರೆಸುತ್ತಾ,—

" ಯಾಕೆ ದಿವ್ಯೂ ಕಣ್ಣೀರು ? " ಎಂದಳು ದುಗುಡದ ದನಿಯಲ್ಲಿ.

" ಸಂತೋಷವಾಯಿತು."

" ಅಳುವಷ್ಟು ಸಂತೋಷವೇ ? ಅಂತಹದು ಏನಾಯಿತು ? "

ಅವನು ಏನೋ ಹೇಳಲು ಹೋದನ, ಆದರೆ ತುಟಿ ಮಾತ್ರವೇ ಚಲಿಸಿತು. ಶಬ್ದ ಹೊರಡಲಿಲ್ಲ. ' ನಾನು ಧನ್ಯ ' ಎಂದು ಹೇಳಲು ಹೊರಟಿದ್ದವನಿಗೆ ಆನಂದೋದ್ವೇಗದಲ್ಲಿ ಮಾತು ಮರೆತುಹೋಗಿತ್ತು. ದಿವಾಕರ—ಸಮಾಧಾನ ಚಿತ್ತನಾಗಿ ಬೊಂಬಾಯಿಗೆ ಹೋಗಿ ಕೆಲಸಕ್ಕೆ ಸೇರಿಕೊಂಡ.

## ೨

ದಿವಾಕರನಿಗೆ ಕೆಲಸ ಸಿಕ್ಕಿದ ಒಂದೆರಡು ತಿಂಗಳಿಗೆ ರಾಘವೇಂದ್ರರಾಯರಿಗೆ ಕೆಲಸದಿಂದ ನಿವೃತ್ತಿಯಾಯಿತು. ಅವರು ತಮಗೆ ಇನ್ನೂ ಒಂದೆರಡು ವರ್ಷ 'ಎಕ್ಸ್‌ಟೆನ್‌ಷನ್' ಸಿಕ್ಕಬಹುದೆಂದು ತಿಳಿದಿದ್ದರು. ಆದರೆ ಮೇಲಧಿಕಾರಿಯೊಬ್ಬ ಅವರ ವಿರೋಧಿಯಾಗಿದ್ದುದರಿಂದ ಅದಕ್ಕೆ 'ಕೊಕ್ಕೆ' ಹಾಕಿ, ಅಧಿಕಾರದ ಅವಧಿ ಪೂರೈಸಿದೊಡನೆಯೇ ರಿಟೈರ್ ಮಾಡಿಸಿಬಿಟ್ಟ. ರಾಘವೇಂದ್ರರಾಯರಿಗೂ ತಾವು ಸರಕಾರದ ಆಡಳಿತದ ಕೊಂಡಿಯಿಂದ ತಪ್ಪಿಸಿಕೊಂಡುದಕ್ಕೆ ಒಂದು ರೀತಿಯ ಸಂತೋಷವೇ ಆಯಿತು. ಅವರ ಸರ್ವಿಸಿನ ಕಡೆಯ ದಿನಗಳು ಬಹಳ ಬೇಸರದ ದಿನಗಳಾಗಿದ್ದುವು. ನ್ಯಾಯವಾಗಿ ಅವರಿಗೆ ದೊರೆಯಬಹುದಾಗಿದ್ದ 'ಹೆಡ್ ಅಕೌಂಟೆಂಟ್' ಹುದ್ದೆಯನ್ನು ಅವರಿಗಿಂತಲೂ ಕಡಿಮೆ ಸರ್ವಿಸು ಮಾಡಿದ್ದ ಅವರ ಕೈ ಕೆಳಗಿನ ಅಧಿಕಾರಿಯೊಬ್ಬ ಮೇಲಧಿಕಾರಿಗಳ ಮನವೊಲಿಸಿಕೊಂಡು, ಗಿಟ್ಟಿಸಿಬಿಟ್ಟಿದ್ದ. ಇದರಿಂದ ರಾಘವೇಂದ್ರರಾಯರಿಗೆ ಆಗಿದ್ದ ನಿರಾಶೆ ಅಷ್ಟಿಷ್ಟಲ್ಲ. ಅವರು ಆದಷ್ಟು ಬೇಗ ಕೆಲಸದಿಂದ ನಿವೃತ್ತಿಯಾಗಬೇಕೆಂದಿದ್ದರು—ಆದರೂ ತನ್ನ ಸರ್ವಿಸನ್ನು ಗಣನೆಗೆ ತಂದುಕೊಂಡು ತಮಗೆ ಕೆಲಸದ ಅವಧಿಯನ್ನು ಕೆಲಕಾಲ ಮುಂದುವರಿಸಿದರೂ ವರಿಸಬಹುದೆಂದು ತಿಳಿದಿದ್ದವರಿಗೆ ಅಧಿಕಾರವರ್ಗದಿಂದ ನಕಾರವೇ ಬಂದದ್ದು ಸಂತೋಷವೇ ಆಗಿತ್ತು.

ರಿಟೈರ್ ಆದಮೇಲೆ ಮನೆಯಲ್ಲಿ ಕೆಲಸವಿಲ್ಲದೆ ಕುಳಿತುಕೊಳ್ಳುವುದು ರಾಯರಿಗೆ ತುಂಬಾ ಬೇಸರದ ಕೆಲಸವಾಯಿತು. ಅವರು ಒಂದು ಕ್ಷಣ ಸುಮ್ಮನೆ ಕುಳಿತವರಲ್ಲ. ಸದಾ ಯಾವುದಾದರೊಂದು ಕೆಲಸವಿರಲೇಬೇಕು. ಇಂಥವರಿಗೆ ಈಗ ಪೂರ್ಣವಿರಾಮ ಸಿಕ್ಕಿದ್ದು ಹಿಂಸೆಯಾಯಿತು. ಅವರಿಗೆ ಮೈಸೂರಿನಲ್ಲಿ ಕೆಲಸವಿಲ್ಲದೆ ಕುಳಿತುಕೊಳ್ಳುವುದು ಸಾಧ್ಯವಾಗದೆ ಹಳ್ಳಿಗೆ ಹೋಗಿ ತಮ್ಮ ಜಮೀನನ್ನಾದರೂ ಉತ್ತಮಪಡಿಸಬಾರದೇಕೆಂದು ಅನಿಸಿತು. ಈ ನಿರ್ಧಾರವನ್ನು ಕಾರ್ಯಕ್ಕೆ ಇಳಿಸಲು ನಿಶ್ಚಯಿಸಿದರು.

ಕನಕಲಕ್ಷ್ಮಮ್ಮನವರಿಗೆ ತಮ್ಮ ಯಜಮಾನರು ಇಷ್ಟು ಬೇಗ ಹಳ್ಳಿ ಸೇರುವುದು ರುಚಿಸಲಿಲ್ಲ. ಅವರಿಗೆ ತಮ್ಮ ಮಗ ದಿವಾಕರನ ಮದುವೆ ಯಾದ ಮೇಲೆ, ಮನೆಯ ಎಲ್ಲ ಸಂಸಾರವನ್ನು ಮಕ್ಕಳಿಬ್ಬರಿಗೆ ವಹಿಸಿಕೊಟ್ಟ ಮೇಲೆ ಅನಂತರ ತಾವು ವಿಶ್ರಾಂತಿ ಸುಖ ಅನುಭವಿಸಬೇಕೆಂದು ಅನಿಸು ತ್ತಿತ್ತು. ಆದುದರಿಂದಲೇ ಇನ್ನು ಕೆಲವು ಕಾಲ ರಾಘವೇಂದ್ರರಾಯರು ಮೈಸೂರಿನಲ್ಲಿಯೇ ಇರಲು ಅವರು ಬಲವಂತ ಪಡಿಸಿದರು. ಆದರೆ ಹೆಂಡತಿಯ ಮಾತನ್ನು ರಾಯರು ಗಮನಕ್ಕೆ ತಂದುಕೊಳ್ಳದೆ ಹಳ್ಳಿಗೆ ಹೊರಟೇ ಬಿಟ್ಟರು. ಆದರೆ ಸದ್ಯಕ್ಕೆ ಹಳ್ಳಿಯ ಮನೆ ಬಿದ್ದು ಹೋಗಿದ್ದುದ ರಿಂದ, ಅದನ್ನು ರಿಪೇರಿ ಮಾಡಿಸಿ ಬರುವುದಾಗಿ ಹೇಳಿ ಹೋದರು. ಅವರು ಹೋದಮೇಲೆ—ಒಂದು ವಾರದಲ್ಲೇ ತನಗೆ ಮೈ ಸ್ವಸ್ಥವಾಗಿಲ್ಲವೆಂದು ಕಾಗದ ಬರೆದರು. ಆ ಕಾಗದ ಕಂಡು ಕನಕಲಕ್ಷ್ಮಮ್ಮನವರೂ ಹಳ್ಳಿಗೆ ಧಾವಿಸಿ ಹೊರಟರು.

ಕನಕಲಕ್ಷ್ಮಮ್ಮನವರು ಹಳ್ಳಿಗೆ ಹೊರಟು ಹೋದ ಮೇಲೆ, ಮನೆ ಏಕೋ ಲೀಲಾವತಿಗೆ ಬಣಬಣಗುಟ್ಟಲು ಆರಂಭಿಸಿತ್ತು. ತನ್ನ ಅಚ್ಚು ಮೆಚ್ಚಿನ ದಿವಾಕರ ಶರಾವತಿಯರು ಮನೆಯಲ್ಲಿ ಇರಲಿಲ್ಲ. ತನ್ನ ಪ್ರೀತಿಯ ಕನಕಲಕ್ಷ್ಮಮ್ಮ, ರಾಘವೇಂದ್ರರಾಯರು ಸಹ ಹಳ್ಳಿಗೆ ನಡೆದುಬಿಟ್ಟಿದ್ದರು. ಮನೆಯಲ್ಲಿ ಇರುವವರೆಂದರೆ ಸುಧಾಕರ ಮತ್ತು ಅವನ ಹೆಂಡತಿ. ಇವರಿಗೂ ಲೀಲಾವತಿಗೂ ಅಂತಹ ಹಾರ್ದಿಕ ಸಂಬಂಧವೇರ್ಪಟ್ಟಿರಲಿಲ್ಲ. ಕನಕ ಲಕ್ಷ್ಮಮ್ಮನವರು ಊರಿಗೆ ಹೊರಟಿರುವ ಸುದ್ದಿಯನ್ನು ಕೇಳಿದಾಗ ಲೀಲಾ ವತಿ—ಮನಸ್ಸನ್ನು ತಡೆಯಲಾರದೆ ಹೇಳಿಬಿಟ್ಟಿದ್ದಳು.

"ಅತ್ತೆ ನೀವಿಲ್ಲದ ಮೇಲೆ ಇಲ್ಲಿರಲು ನನಗೆ ಬೇಸರವಾಗುತ್ತೆ—ನಾನು ಹಾಸ್ಟೆಲು ಸೇರಿಕೊಳ್ಳುತ್ತೇನೆ" ಎಂದಳು.

"ಏನು ನಿನ್ನ ಮಾತು ಲೀಲಾ? ನಾನು ಇಲ್ಲಿ ಕೆಲಕಾಲ ಇಲ್ಲದ ಮಾತ್ರಕ್ಕೆ ನೀನೇಕೆ ಮನೆಯನ್ನು ಬಿಡಬೇಕು? ಇಷ್ಟು ಜನರಿರುವ ಮನೆ ಯಲ್ಲಿ ನಿನಗೊಂದು ತುತ್ತು ಅನ್ನವಿಲ್ಲವೆ?" ಎಂದರು.

"ಅನ್ನದ ಪ್ರಶ್ನೆಯಲ್ಲ ಅತ್ತೆ. ನನ್ನಿಂದ ಅಣ್ಣ ಅತ್ತಿಗೆಯರಿಗೇಕೆ

ವೃಥಾ ತೊಂದರೆಯಾಗಬೇಕು ? ನೀವಿದ್ದಾಗ ನನ್ನ ಎಲ್ಲ ತೊಂದರೆಯನ್ನೂ ಹೇಗೋ ಸಹಿಸಿಕೊಂಡು ಹೋಗುತ್ತಿದ್ದಿರಿ. ಆದರೆ ಅವರಿಗೇಕೆ ನನ್ನಿಂದ ತೊಂದರೆಯಾಗಬೇಕು ? "

" ಹಾಗೆಂದರೇನೆ ? "

" ನಿಮಗೆ ಗೊತ್ತಿಲ್ಲ ಅತ್ತೆ. ನನ್ನನ್ನು ಕಂಡರೆ ಅವರಿಬ್ಬರಿಗೂ ಅಷ್ಟಾಗಿ ಪ್ರೀತಿ ವಿಶ್ವಾಸವಿಲ್ಲವೆಂಬುದು ನಿಮಗೇ ಗೊತ್ತು. ಹೀಗಿರುವಾಗ ಅವರ ಅನಾದರಕ್ಕೆ ಪಕ್ಕಾಗಿ, ಅವರ ತಲೆ ಮೂಟೆಯಾಗಿ ಇರುವುದು ನನಗೆ ಕೊಂಚವೂ ಇಷ್ಟವಿಲ್ಲ."

" ನೀನು ಏನೇನೋ ಕಲ್ಪಿಸಿಕೊಂಡು ತಲೆಕೆಡಿಸಿಕೊಳ್ಳುತ್ತಿದ್ದಿ ಲೀಲಾ. ನಿನ್ನಿಂದ ಯಾರಿಗೆ ಏನು ತೊಂದರೆ ಇದೆ? ನಿನ್ನ ಪಾಡಿಗೆ ನೀನು ಕಾಲೇಜಿಗೆ ಹೋಗುತ್ತಿ—ಬರುತ್ತಿ. ಹೊತ್ತಿಗೆ ಸರಿಯಾಗಿ ಒಂದಿಷ್ಟು ಅನ್ನ ಬೇಯಿಸುವುದು ಕಷ್ಟವೆ? "

" ನೀವಿಲ್ಲದ ಮೇಲೆ, ನೀವೆಷ್ಟು ಹೇಳಿದರೂ ಈ ಮನೆ ನನ್ನ ಮನೆ ಯಾಗುವುದಿಲ್ಲ ಅತ್ತೆ " ಎಂದು ಅತ್ತೆಯ ಉಡಿಯಲ್ಲಿ ತಲೆ ಇಟ್ಟು ಮಗುವಿ ನಂತೆ ರೋದಿಸಿದಳು.

ಇಷ್ಟೆಲ್ಲ ಮಾತು ನಡೆದ ಮೇಲೆ—ಕನಕಲಕ್ಷ್ಮಮ್ಮನವರು ತಮ್ಮ ಮಗ ಸೊಸೆಯರಿಗೆ ಅದೇನು ಉಪದೇಶಮಾಡಿದ್ದರೋ—ಸುಧಾಕರ ಎಂದೂ ಇಲ್ಲದ ಪ್ರೀತಿಯಿಂದ ಲೀಲಾವತಿಯನ್ನು ವಿಚಾರಿಸಿಕೊಂಡ.

" ಲೀಲಾ, ನಿಮ್ಮ ಅತ್ತೆ ಮನೆಯಲ್ಲಿ ಇಲ್ಲವೆಂದು ನೀನು ಸಂಕೋಚ ಪಟ್ಟುಕೊಳ್ಳಬೇಡಮ್ಮ. ನಿನ್ನ ದಿವಾಕರ ಹೇಗೋ ಹಾಗೇ ನನ್ನನ್ನು ತಿಳಿ. ನೀನು ಯಾವುದಕ್ಕೂ ಸಂಕೋಚಪಟ್ಟುಕೊಳ್ಳದೆ ಈಗ ಹೇಗಿರುವೆಯೋ ಹಾಗೆಯೇ ಓದಿಕೊಂಡಿರು " ಎಂದು ಹೇಳಿದ.

ಲೀಲಾವತಿ ಸುಮ್ಮನೆ ನಕ್ಕುಬಿಟ್ಟಳು.

ರಾಜಮಣಿಯೂ ಲೀಲಾವತಿಯನ್ನು ವಿಶ್ವಾಸದಿಂದಲೇ ಮಾತನಾಡಿಸಿ ದಳು. ಊರಿಗೆ ಹೊರಡುವಾಗ ಕನಕಲಕ್ಷ್ಮಮ್ಮ ಇಬ್ಬರು ಸೊಸೆಯರನ್ನು ಸಂಬೋಧಿಸಿ, ಬುದ್ಧಿವಾದ ಹೇಳಿದರು.

"ಇದುವರೆಗೆ ನಿಮ್ಮಲ್ಲಿ ಇರಬಹುದಾಗಿದ್ದ ಎಲ್ಲ ವೈಮನಸ್ಸನ್ನೂ ಮರೆತುಬಿಟ್ಟು ಇನ್ನು ಮೇಲೆ ಅಕ್ಕತಂಗಿಯರಂತೆ, ಹೊಂದಿಕೊಂಡು ಹೋಗ ಬೇಕಮ್ಮ. ಇನ್ನು ಮೇಲೆ ನಿಮ್ಮ ಕಷ್ಟಸುಖದಲ್ಲಿ ನಿಮಗೆ ನೀವೇ ದಿಕ್ಕು." ಎಂದರು.

ಲೀಲಾವತಿಯನ್ನು ಬೇರೆಯಾಗಿ ಕರೆದು,

"ನಿನಗೆ ಇಲ್ಲಿ ಊಟ ತಿಂಡಿ ಎಲ್ಲವೂ ಸರಿಯಾಗಿ ನಡೆಯುವಷ್ಟು ದಿನ ನೀನು ಬೇರೆ ಇರುವ ಯೋಚನೆ ಮಾಡಬೇಡ. ಮುಂದೆ ಅಂತಹ ದಿನ ಬಂದಾಗ ನನಗೆ ತಿಳಿಸದೆ ನೀನು ನುಡುಕಿದರೆ ನನ್ನ ಆಣೆಯಿದೆ" ಎಂದು ತಾಕೀತುಮಾಡಿ ಊರಿಗೆ ಹೊರಟರು.

ಕನಕಲಕ್ಷ್ಮಮ್ಮನವರು ಕೇವಲ ಒಂದೆರಡು ವಾರ ಇದ್ದು ಬರಲು ಹಳ್ಳಿಗೆ ಹೋದವರು ಮೂರು ನಾಲ್ಕು ತಿಂಗಳು ಹಳ್ಳಿಯಲ್ಲಿಯೇ ನಿಂತುಬಿಡ ಬೇಕಾಯಿತು. ರಾಘವೇಂದ್ರರಾಯರೇನೋ ಹೊಸ ಉತ್ಸಾಹದಲ್ಲಿ ತಮ್ಮ ಹಳೆಮನೆಯನ್ನು ಹೊಸದಾಗಿ ಕಟ್ಟಿಸುವ ಪ್ರಯತ್ನದಲ್ಲಿದ್ದರು. ಅವರ ಉದ್ದೇಶ ತಾವಿಬ್ಬರು ಹಳ್ಳಿಯಲ್ಲಿಯೇ ನಿಂತು, ಜಮೀನುಗಳನ್ನು ಸರಿಯಾಗಿ ಸಾಗುವಳಿ ಮಾಡಿಸಿಕೊಂಡು ತಮ್ಮ ಎಲ್ಲ ಸಾಲಸೋಲಗಳನ್ನು ತೀರಿಸಿ ಕೊಂಡು, ನೆಮ್ಮದಿಯಿಂದ ಇರಬೇಕೆಂಬುದೇ ಆಗಿತ್ತು.

ಲೀಲಾವತಿಗೆ ಆ ವರ್ಷ ಎಲ್ಲವೂ ಸುಸೂತ್ರವಾಗಿಯೇ ನಡೆಯಿತು. ಸೊಸೆಯರಿಬ್ಬರೂ ಅತ್ತೆಯ ಆಣತಿಯಂತೆ, ಹೆಚ್ಚು ಹೊಂದಿಕೊಂಡು ಹೋಗಲು ಪ್ರಯತ್ನಿಸಿದರು. ಸುಧಾಕರ ಕೆಲಸಕ್ಕೆ ಹೋಗಿಬಿಟ್ಟನೆ, ಲೀಲಾವತಿ ಕಾಲೇಜಿಗೆ ಹೋಗಿಬಿಟ್ಟನೆ, ಮನೆಯಲ್ಲಿ ರಾಜಮಣಿ ಒಬ್ಬಳೇ. ಇರುವ ಇಬ್ಬರಲ್ಲಿ ಮನಸ್ತಾಪವಾದರೆ ಇಬ್ಬರಿಗೂ ಮನೆ ಬೇಜಾರು. ಆದು ದರಿಂದ ಆದಷ್ಟುಮಟ್ಟಿಗೆ ಸರಿಸಿಕೊಂಡು ಹೋಗುತ್ತಿದ್ದರು. ಲೀಲಾ ವತಿಯು ತನ್ನಿಂದ ಆದಷ್ಟು ಮನೆಗೆಲಸಗಳನ್ನು ಮಾಡಿಕೊಟ್ಟು, ರಾಜ ಮಣಿಗೆ ನೆರವಾಗುತ್ತಿದ್ದಳು. ರಾಜಮಣಿಗೆ ಅಡಿಗೆ ಕೆಲಸ ಬಿದ್ದರೆ ಲೀಲಾ ವತಿ ಹೊರಗಿನ ಕೆಲಸಗಳನ್ನು ಮಾಡಿ ಮುಗಿಸಿ, ಓದಲು ಕುಳಿತುಕೊಳ್ಳುತ್ತಿ ದ್ದಳು. ಇವೆಲ್ಲ ಆದ ಮೇಲೆ ಒಂದೆರಡು ತಾಸು ವಿರಾಮ ದೊರೆತರೆ ಅದರಲ್ಲಿ

ತನ್ನ ಸಂಗೀತಪಾಠ ಸಾಗುತ್ತಿತ್ತು.

ಆ ವರ್ಷ ಮುಗಿದು ಬೇಸಗೆ ರಜ ಕಾಲಿರಿಸಿತು. ರಜಕ್ಕೆ ಎಲ್ಲಿಗೆ ಹೋಗಬೇಕೆಂಬುದು ಈ ಬಾರಿ ಲೀಲಾವತಿಗೆ ಪ್ರಶ್ನೆಯಾಯಿತು. ದಿವಾಕರ ಬೊಂಬಾಯಿಂದ ಕೆಲವು ದಿನ ರಜ ತೆಗೆದುಕೊಂಡು ಮೈಸೂರಿಗೆ ಬರುವುದಾಗಿ ಕಾಗದ ಬರೆದಿದ್ದ. ಅವನು ಬೊಂಬಾಯಿಗೆ ಹೋದಲಾಗಾಯಿತು ವಾರಕೊಮ್ಮೆ ತಪ್ಪದೆ ಉದ್ದುದ್ದನೆಯ ಕಾಗದ ಬರೆಯುತ್ತಿದ್ದ. ಒಂದೆರಡು ಕಾಗದದಲ್ಲಿ ಲೀಲಾವತಿಯನ್ನು ಬೊಂಬಾಯಿಗೆ ಬರಲು ಆಹ್ವಾನವಿತ್ತಿದ್ದ. ಅದಕ್ಕೆ ಉತ್ತರವಾಗಿ "ನೀನೇ ಇಲ್ಲಿಗೆ ಬಾ ದಿವೂ. ಅತ್ತೆ ಮಾವ ನಿನ್ನನ್ನು ನೋಡಬೇಕೆಂದಿದ್ದಾರೆ" ಎಂದು ಬರೆದಳು. ಹೀಗೆ ಬರೆದು ಅವನು ಬೊಂಬಾಯಿಂದ ಬರುವ ವೇಳೆಗೆ ಊರಿಗೆ ಹೊರಟುಹೋದರೆ ಹೇಗೆ ಎಂದು ಮೈಸೂರಿನಲ್ಲಿಯೇ ನಿಂತಳು. ದಿವಾಕರ ಬರೆದಿದ್ದಂತೆ, ತಿಂಗಳ ರಜ ತೆಗೆದುಕೊಂಡು, ಮೈಸೂರಿಗೆ ಓಡಿಬಂದ. ಲೀಲಾವತಿ ಸ್ಟೇಷನ್ನಿಗೆ ಹೋಗಿ ಅವನನ್ನು ಎದುರುಗೊಂಡು ಮನೆಗೆ ಕರೆತಂದಳು. ಅವನೊಡನೆ ತಮಾಷೆಯಾಗಿ ಎಂಟು ದಿನ ಕಳೆಯುವುದರಲ್ಲಿ ಚಿಂತಾಮಣಿಯಿಂದ ವಿಶ್ವನಾಥರಾಯರ ಕಾಗದ—ಇಲ್ಲ ತಂತಿ ಬಂತು. ರಜ ಬಂದಿದ್ದರೂ ಇನ್ನೂ ಮಗಳು ಊರಿಗೆ ಬಾರದೆ ಇರುವುದನ್ನು ಕಂಡು—ಮಗಳಿಗಾಗಿ ಎದುರುನೋಡುತ್ತಿರುವುದು ಆಗದೆ ತಂತಿಕೊಟ್ಟರು.

ಈ ತಂತಿ ಕಂಡ ವೇಳೆ ಊರಿಗೆ ಹೊರಡಬೇಕೆಂದು ಲೀಲಾವತಿ ನಿರ್ಧರಿಸಿದಳು. ಈ ಬಾರಿ ತನ್ನೊಂದಿಗೆ ತಮ್ಮ ಊರಿಗೆ ಬರಲು ದಿವಾಕರನನ್ನೂ ಆಹ್ವಾನಿಸಿದಳು. ಬಹಳ ದಿನಗಳಿಂದ ದಿವಾಕರನಿಗೂ ಲೀಲಾವತಿಯ ಊರಿಗೊಮ್ಮೆ ಹೋಗಿ ಬರಬೇಕೆನ್ನುವ ಮನಸ್ಸಿತ್ತು. ಆದರೆ ಸಮಯ ಬಂದಿರಲಿಲ್ಲ. ಈಗ ಒಳ್ಳೆಯ ಅವಕಾಶ. ತಾನು ಲೀಲಾವತಿಯೊಡನೆ ಒಂಟಿಯಾಗಿ ಹೋಗುವುದಕ್ಕಿಂತ, ಮೂರು ನಾಲ್ಕು ತಿಂಗಳಿಂದಲೂ ಹಳ್ಳಿಯಲ್ಲಿಯೇ 'ಮೊಕ್ಕಾಂ' ಮಾಡಿದ್ದ ತನ್ನ ತಾಯಿಯನ್ನೂ ಜತೆಯಲ್ಲಿ ಕರೆದೊಯ್ಯುವ ಆಸೆ ಆಯಿತು. ಅವನು ಹಳ್ಳಿಯ ಮನೆಯನ್ನು ನೋಡುವ ನೆವದಲ್ಲಿ ಹಳ್ಳಿಗೆ ಹೋಗಿ ಅಲ್ಲಿಂದ ತಾಯಿಯನ್ನು ಹಿಂದಿಟ್ಟುಕೊಂಡು ಬಂದ.

ಮೂವರು ಒಂದು ದಿನ ಚಿಂತಾಮಣಿಗೆ ಹೊರಟರು.

ವಿಶ್ವನಾಥರಾಯರು ಬಂದವರನ್ನು ಬಹಳ ಆದರದಿಂದ ಬರಮಾಡಿಕೊಂಡರು. ವಿಶ್ವನಾಥರಾಯರ ಪತ್ನಿ-ಗಂಗಮ್ಮನವರಿಗೆ ತಮ್ಮ ಮಗಳು, ಯಜಮಾನರ ಮೇಲೆ ಎಷ್ಟೇ ದ್ವೇಷವಿದ್ದರೂ—ಮನೆಗೆ ನೆಂಟರು ಬಂದಿರುವಾಗ, ಅವರ ಮುಂದೆ ತಮ್ಮ ಸಂಸಾರದ ಹಗರಣ ಬಯಲಾಗಿ, ಮಾನ ಹೋಗಬಾರದೆಂದು, ಆಕೆಯೂ ಆದಷ್ಟುಮಟ್ಟಿಗೆ ಯೋಗ್ಯ ರೀತಿಯಲ್ಲಿ ಬಂದವರನ್ನು ಉಪಚರಿಸಿದರು. ಕನಕಲಕ್ಷ್ಮಮ್ಮನವರ ಊಟತಿಂಡಿಗಳೆಲ್ಲ ಮಡಿಯಲ್ಲೇ ಆಗುತ್ತಿದ್ದುದರಿಂದ, ತುಂಬಾ ಮಡಿವಂತಿಕೆಯ ಮೂರ್ತಿಯಾದ ಗಂಗಮ್ಮನವರಿಗೆ ಇದರಿಂದ ಎಷ್ಟೋ ಸಮಾಧಾನವಾಯಿತು. ಅವರಿಗೆ ಕನಕಲಕ್ಷ್ಮಮ್ಮನವರು ತಮ್ಮ ಮನೆಗೆ ಬಂದದ್ದು ಬಡವರ ಮನೆಗೆ ಭಾಗ್ಯಲಕ್ಷ್ಮಿ ಬಂದಂತೆ ಆಗಿತ್ತು. ಯಾಕೆಂದರೆ, ತಮ್ಮ ಮಗಳು ಲೀಲಾವತಿಯನ್ನು ತಮ್ಮ ಮಗ ದಿವಾಕರನಿಗೆ ಉದಾರ ಚಿತ್ತದಿಂದ ಮಾಡಿಕೊಳ್ಳಲು ಒಪ್ಪಿ, ಅದಕ್ಕಾಗಿಯೇ ಬಂದಿರುವುದಾಗಿ ಅವರು ಬಗೆದರು. ಒಂದು ರೀತಿಯಾಗಿ ಹಿರಿಯರೆಲ್ಲರ ದೃಷ್ಟಿ ಅದೇ ಆಗಿತ್ತು. ಕನಕಲಕ್ಷ್ಮಮ್ಮ ತನ್ನ ಮಗ ದಿವಾಕರನೊಡನೆ ಇಲ್ಲಿಗೆ ಬಂದಿದ್ದು ಆ ಒಂದು ದೃಷ್ಟಿಯಿಂದಲೇ ಎನ್ನಬೇಕು. ಈ ಬಾರಿ ಹೇಗಾದರೂ ಮಾಡಿ ಲೀಲಾವತಿಯಿಂದ ಮದುವೆಗೆ ಹೂಂಗುಟ್ಟಿಸಿ, ಮದುವೆಯನ್ನು ಅದೇ ತಿಂಗಳಲ್ಲಿ ಮಾಡಿಬಿಡುವ, ಹಂಚಿಕೆ ಅವರದು. ಲೀಲಾವತಿ ಹೂಂಗುಟ್ಟಿದರೆ ವಿಶ್ವನಾಥರಾಯರು ಅದೇ ತಿಂಗಳಲ್ಲಿ ಮಗಳ ಮದುವೆ ಮಾಡಲು ಸಿದ್ಧರಿದ್ದರು. ಆದರೆ ಅವರೆಲ್ಲರಿಗಿದ್ದ ಒಂದೇ ಒಂದು ಅಡಚಣೆ ಎಂದರೆ—ಲೀಲಾವತಿ. ಮದುವೆಯ ವಿಷಯದಲ್ಲಿ ಇನ್ನೂ ಯಾರಿಗೂ ಖಚಿತವಾಗಿ ತಿಳಿಸದೆ ಇದ್ದುದು.

ಒಂದು ದಿನ ಈ ಪ್ರಸ್ತಾಪ ಮನೆಯವರೆಲ್ಲರೂ ಸೇರಿದ್ದಾಗ ಬರಬೇಕಾಯಿತು—ಬಂತು.

ಆ ದಿನ ಊಟವಾಗಿ ಎಲ್ಲರೂ ವಿರಾಮವಾಗಿ ಕುಳಿತಿದ್ದರು. ದಿವಾಕರ, ಲೀಲಾವತಿಯರು ಬಳಿಯ ಕೋಣೆಯಲ್ಲಿ ಏನೋ ಹರಟುತ್ತಾ ಕುಳಿತಿದ್ದರು. ಆಗ ಕನಕಲಕ್ಷ್ಮಮ್ಮನವರು ವಿಷಯ ಪ್ರಸ್ತಾಪ ಮಾಡಿದರು.

" ಎಲ್ಲಿ ಲೀಲಾ ಕಾಣುವುವೇ ಇಲ್ಲ ?...."

" ಎಲ್ಲೋ ರೂಮಿನಲ್ಲಿ ಹರಟುತ್ತಾ ಕುಳಿತಿರಬೇಕು. " ಎಂದರು ವಿಶ್ವನಾಥರಾಯರು.

" ನೋಡಿ. ನಮ್ಮ ಕಾಲಕ್ಕೂ ಈಗಿನ ಕಾಲಕ್ಕೂ ಇರುವ ವ್ಯತ್ಯಾಸ— ಇದೇ. ನಮ್ಮ ಕಾಲದಲ್ಲಿ ಮದುವೆಯಾದ ಮೇಲೆ ಹತ್ತೆಂಟು ವರ್ಷ ಸಂಸಾರ ಮಾಡಿಕೊಂಡಿದ್ದು, ಮೂರು ನಾಲ್ಕು ಮಕ್ಕಳ ತಾಯಿಯಾದರೂ ಗಂಡನೆದುರಿಗೆ ಬರಬೇಕೆಂದರೆ ಪ್ರಾಣವೇ ಹೋದಂತೆ ಆಗುತ್ತಿತ್ತು. ಅಷ್ಟು ಲಜ್ಜೆ, ಅಷ್ಟು ನಾಚಿಕೆ. ಆದರೆ ಈಗ ಕಾಲದ ಸ್ಥಿತಿ ಎಷ್ಟು ಬದಲಾಗಿದೆ?" ಎಂದರು ಕನಕಲಕ್ಷ್ಮಮ್ಮ ವಿಶ್ವನಾಥರಾಯರ ಕಡೆ ನೋಡುತ್ತ.

" ಆ ಕಾಲದಲ್ಲಿ ಮದುವೆಯಾದ ಮೇಲೆ ಪರಸ್ಪರ ಪ್ರೀತಿ ಉಂಟಾಗುತ್ತಿತ್ತು, ಈಗಲಾದರೊ ಮೊದಲು ಪ್ರೀತಿಸಿ ಅನಂತರ ಮದುವೆ—' ಮ್ಯಾರಿ ಅಂಡ್ ಲವ್ ' ಹೋಗಿ ' ಲವ್ ಅಂಡ್ ಮ್ಯಾರಿ ' ಆಗಿದೆ, ಇದೆಲ್ಲ ಈಗಿನ ಕಾಲದ ರೀತಿ " ಎಂದು ನಕ್ಕರು.

" ಏನು ಕಾಲವೋ, ಏನು ಮಾತೋ— ನನಗಂತೂ ಇವುಗಳೊಂದೂ ಸರಿ ಹೋಗುವುದಿಲ್ಲ. ನೀವು ಏನುಬೇಕಾದರೂ ತಿಳಿದುಕೊಳ್ಳಿ—ಹೆಣ್ಣು ಮಕ್ಕಳಿಗೆ ಮದುವೆ ವಯಸ್ಸಾಮೊಡನೆಯೇ ಮದುವೆ ಮಾಡಿದರೆ ಚೆನ್ನ. ಕತ್ತೆಯಂತೆ ಬೆಳೆಸಿ, ಅವರು ಹೋದ ದಾರಿಯಲ್ಲಿ ಬಿಟ್ಟು ಅದೇನೋ ಲವ್‌ಗಿವ್ ಎಂದರೆ ಆಗುವುದೆಲ್ಲವೂ ಅನರ್ಥವೇ.... ಈಗ ನಮ್ಮ ಲೀಲಾನ ವಿಷಯವೇ ತೆಗೆದುಕೊಳ್ಳೋಣ. ಅವಳಿಗೆ ಬುದ್ಧಿ ಬರುವುದಕ್ಕಿಂತ ಮುಂಚೆ ನಾವು ಮದುವೆಮಾಡಿಬಿಟ್ಟಿದ್ದರೆ ಇಷ್ಟೆಲ್ಲ ಹಗರಣ ವಿರುತ್ತಿತ್ತೇ? ಅವಳನ್ನು ಸ್ವೇಚ್ಛೆಯಾಗಿ ಬೆಳೆಸಿ, ಕಾಲೇಜಿಗೆ ಸೇರಿಸಿ, ಈಗ ಮದುವೆಯಾಗಲು ಹೇಳಿದರೆ ನಮ್ಮ ಮಾತೆಲ್ಲಿ ಕೇಳುತ್ತಾಳೆ. ಅವಳಿಗೆ ಯಾವಾಗ ಬೇಕೋ ಆಗ ಮದುವೆಯಾಗುವವಳೇ ಹೊರತು ನಾವೆಷ್ಟು ಗಂಟಲು ನೋಯಿಸಿಕೊಂಡರೂ ಪ್ರಯೋಜನವಿಲ್ಲ. ನಾವು ಹೇಳುವಷ್ಟು ಹೇಳಿ ದಣಿದಿದ್ದೇವೆ. ನೀವು ಹೇಗೂ ಬಂದಿದ್ದೀರಿ. ನೀವೂ ಒಂದು ಮಾತು ಹೇಳಿ—ಅವಳು ಮದುವೆಯಾಗುತ್ತಾಳೆಯೋ ಇಲ್ಲವೋ, ಅದನ್ನು ನಿರ್ಧರಿಸಿಬಿಟ್ಟು ಹೋಗಿ "

ಎಂದು ಗಂಗಮ್ಮ ಕನಕಲಕ್ಷ್ಮಮ್ಮನಿಗೆ ವಕಾಲತ್ತು ವಹಿಸಿಕೊಟ್ಟರು.

"ಅವಳಿನ್ನೂ ಹುಡುಗಿ. ಕಾಲೇಜಿನಲ್ಲಿ ಓದಿದಮಾತ್ರಕ್ಕೆ ಜಗತ್ತಿನ ವ್ಯವಹಾರಜ್ಞಾನ ಬರುವುದಿಲ್ಲವೆನ್ನಲು ಅವಳೇ ಸಾಕ್ಷಿ. ಅಲ್ಲಿ ಅದೇನು ಕಲಿಯುತ್ತಾಳೋ ನಾ ಬೇರೆ ಕಾಣೆ, ಅಂತೂ ಮದುವೆಯ ವಿಷಯದಲ್ಲಿ ತುಂಬಾ ವಿಚಿತ್ರಕಲ್ಪನೆಗಳನ್ನು ತಲೆಯಲ್ಲಿ ತುಂಬಿಕೊಂಡಿದ್ದಾಳೆ. ಅವಳಿಗೆ ಮದುವೆ ಎಂದರೆ ಏನೋ ಒಂದು ಬಗೆಯ ಹೆದರಿಕೆ."

"ಏನು ಹೆದರಿಕೆ ?"

"ತನ್ನ ಓದಿಗೆಲ್ಲಿ ಭಂಗ ಬರುವುದೋ ಎಂದು."

"ಅದಕ್ಕೆ ಭಂಗ ತರುವುದಿಲ್ಲವೆಂದು ನಾವು ಹೇಳಿದರೆ ನಂಬಿಕೆ ಇಲ್ಲವೆ ?" ವಿಶ್ವನಾಥರಾಯರು ಹೇಳಿದರು.

"ನಾನು ಎಷ್ಟೋ ಹೇಳಿನೋಡಿದೆ. ಅವಳು ಆಗಲಿ ಎನ್ನಲಿಲ್ಲ. ಬಹುಶಃ ಓದು ಮುಗಿದ ಮೇಲೆ ಮದುವೆಯಾಗುವ ಮನಸ್ಸೇನೋ. ಹೇಗೂ ಇನ್ನೊಂದು ವರ್ಷ ತಾನೇ ?"

"ಅದನ್ನಾದರೂ ಸ್ಪಷ್ಟವಾಗಿ ಹೇಳಿಬಿಡಲಿ—ತನ್ನ ಓದು ಮುಗಿದ ಮೇಲೆ ದಿವಾಕರನನ್ನು ಮದುವೆಯಾಗುತ್ತೇನೆ ಎಂದು. ನಿರ್ಧರವಾಗಿ ಹೇಳಿಬಿಟ್ಟರೆ ಎಲ್ಲರಿಗೂ ಸಮಾಧಾನವೇ. ಸುಮ್ಮನೆ ಅತ್ತೂ ಇಲ್ಲ—ಇತ್ತೂ ಇಲ್ಲ. ಒಂಬಳದ ನೊಣದಂತೆ ನಮ್ಮ ಸ್ಥಿತಿಯಾಗುವುದು ಬೇಡ. ಯಾವುದನ್ನೂ ಖಚಿತವಾಗಿ ತಿಳಿಸಿಬಿಡಲಿ." ಎಂದರು ವಿಶ್ವನಾಥರಾಯರು.

ಇದೇ ಹೊತ್ತಿಗೆ ಲೀಲಾವತಿಯೂ ಅವರಿದ್ದೆಡೆಗೆ ಬಂದಳು. "ಲೀಲಾವತಿ ಕುಳಿತುಕೋ. ನಿಮ್ಮ ಅತ್ತೇ ನಿನ್ನನ್ನು ಏನೋ ಕೇಳಬೇಕೆಂದಿದ್ದಾರೆ" ಎಂದು ಗಂಗಮ್ಮ ಮಗಳನ್ನು ಬಳಿಯಲ್ಲಿ ಕುಳ್ಳಿರಿಸಿಕೊಂಡರು.

"ನೋಡಮ್ಮ, ಲೀಲಾ. ನಾವೆಲ್ಲ ಇಲ್ಲಿ ಕೂತುಮಾತನಾಡುತ್ತಿದ್ದ ವಿಷಯವೇನಿರಬಹುದೆಂದು ನೀನು ಊಹಿಸಿರಬೇಕು—ನಮ್ಮೆಲ್ಲರ ಒಂದೇ ಒಂದು ಆಸೆ ಎಂದರೆ ನಿನ್ನ ಮದುವೆಯನ್ನು ನೋಡಿ ತೃಪ್ತಿಗೊಳ್ಳುವುದು. ನಿನ್ನ ಒಪ್ಪಿಗೆಯ ವಿನಾ ಉಳಿದೆಲ್ಲ ಸಿದ್ಧತೆ ಪೂರೈಸಿದೆ. ನೀನು ದೊಡ್ಡ ಮನಸ್ಸುಮಾಡಿ 'ಆಗಲಿ' ಎನ್ನಬೇಕು" ಎಂದಳು.

ಲೀಲಾವತಿ ಕೆಲಕಾಲ ಯೋಚಿಸುತ್ತಾ ಕುಳಿತಳು. ಅವಳಿಗೆ ಹಠಾತ್ತನೆ ತನ್ನ ಮದುವೆ ಪ್ರಶ್ನೆ ಇಷ್ಟು ಜನರ ಮಧ್ಯೆ ಈ ರೀತಿ ಏಳುವುದೆಂದು ತಿಳಿದಿರಲಿಲ್ಲವೆಂದು ತೋರುತ್ತೆ. ಹೀಗಾಗಿ ಕ್ಷಣಕಾಲ ಯೋಚಿಸಿ ಹೇಳಿದಳು "ಮೊದಲು ನನ್ನ ಓದು ಮುಗಿಯಲಿ."

"ನಿನ್ನ ತಲೆ—ಲಾಗಾಯಿತಿನಿಂದ ಇರುವಮಾತೇ ಇನ್ನೂ—ಓದು ಮುಗಿಯಬೇಕಂತೆ ಓದು. ಓದು ಮುಗಿಸಿ. ನೀನು ಮಾಡುವುದೂ ಅಷ್ಟರಲ್ಲಿಯೇ ಇದೆ! ಸುಮ್ಮನೆ ಮಾತು ಬರುವುದೆಂದು ಹರಟಬೇಡ. ಆಗಲಿ-ಇಲ್ಲ ಎಂದು ಎರಡರಲ್ಲಿ ಒಂದು ಹೇಳು" ಎಂದು ಗಂಗಮ್ಮನವರು ಸಹನೆ ಮೀರಿ ನುಡಿದರು.

"ನನಗೆ ಸದ್ಯಕ್ಕೆ ಮದುವೆ ಬೇಡ."

"ಸದ್ಯಕ್ಕೆ ಮದುವೆ ಬೇಡದಿದ್ದರೆ ಇನ್ನು ಯಾವಾಗ ಬೇಕು ಅದನ್ನಾದರೂ ಹೇಳಿಬಿಡು—ಕೇಳಿ ಕೃತಾರ್ಥರಾಗುತ್ತೇವೆ....ಇನ್ನೂ ಲಂಗಹಾಕಿಕೊಳ್ಳುವ ಹುಡುಗಿ ಎಂದು ತಿಳಿದಿರುವಳೋ ಏನೋ. ಸಾಲದೇನು ವಯಸ್ಸು? ಇಪ್ಪತ್ತು ವರ್ಷ ತುಂಬಿತು ಇನ್ನೂ ಬೇಡವಂತೆ. ಈಗ ಮಾಡಿಕೊಳ್ಳದೆ ಇದ್ದರೆ ಮುದುಕಿಯಾದ ಮೇಲೆ ಮಾಡಿಕೊಳ್ಳುತ್ತಾಳೋ ಏನೋ...." ಉಗ್ರವಾಗಿ ಗಂಗಮ್ಮ ಹೇಳಿದರು.

"ವಯಸ್ಸಿಗೂ ಮದುವೆಗೂ ಏನು ಸಂಬಂಧ. ವಯಸ್ಸಾದವರೆಲ್ಲ ಮದುವೆಯಾಗಬೇಕೆಂದು ಏನು ಕಡ್ಡಾಯವಿದೆ? ಹಾಗೆ ನೋಡಿದರೆ ವಯಸ್ಸಾದ ಮೇಲೆ ಮದುವೆಯಾಗುವುದು ಒಂದು ರೀತಿಯಾಗಿ ಒಳ್ಳೆಯದೇ. ಈಗಲೇ ಇರುವ ಜನಕ್ಕೆ ಹೊಟ್ಟೆಗಿಲ್ಲದೆ ಹಾಹಾಕಾರ ಇರುವಾಗ, ಹತ್ತು ವರ್ಷಕ್ಕೆ ಮದುವೆ—ಮೂವತ್ತು ವರ್ಷಕ್ಕೆ ಮುದುಕಿ—ಆವರೆ ಅವಳು ಹತ್ತು ಮಕ್ಕಳ ತಾಯಿ! ಹೀಗೆ ಇರುವುದಕ್ಕಿಂತ ಮದುವೆಯಾಗದಿರುವುದೇ ಲೇಸು." ಈ ಮಾತು ಕೇಳಿ ಗಂಗಮ್ಮನವರಿಗೆ ಪ್ರಚಂಡ ಕೋಪ ಬಂದಿತು. ಲೀಲಾವತಿ ಹಿರಿಯರೆದುರು ಎಷ್ಟು ಸೊಕ್ಕಿನಿಂದ ಲಜ್ಜೆ ನಾಚಿಕೆಗಳಿಲ್ಲದೆ ಗಂಡುಬೀರಿಯಂತೆ ಹರಟುತ್ತಿದ್ದಾಳೆ ಎಂದು ಒಂದು ಬಗೆಯ ಅಸಹ್ಯವೇ ಆಯಿತು. ಅವರು ಸಿಟ್ಟಿನ ಭರದಲ್ಲಿ "ಲೀಲಾವತಿ?"

ಎಂದು ಗರ್ಜಿಸಿ, ಕೆಂಗಣ್ಣು ಬಿಟ್ಟರು. "ಯಾರ ಮುಂದೆ ಮಾತನಾಡು ತ್ತಿರುವೆ ಎಂದು ಕೊಂಚ ಗಮನವಿರಲಿ. ಇದು ನಿನ್ನ ಕಾಲೇಜಲ್ಲ- ದೊಡ್ಡವರು ಚಿಕ್ಕವರು ಇರುವಾಗ ಯಾವ ಮಾತು ಹೇಗೆ ಆಡ ಬೇಕೆಂಬ ಪರಿಜ್ಞಾನವಿಲ್ಲದೆ ಬಾಯಿಗೆ ಬಂದುದನ್ನು ಬಗುಳುತ್ತೀಯಾ. ಇವನ್ನೇ ನೀನು ಕಾಲೇಜಿಗೆ ಹೋಗಿ ಕಲಿತದ್ದು? ನೀನು ವಿದ್ಯೆ ಕಲಿತು ಸಾರ್ಥಕವಾಯಿತು. ರಾಮ ರಾಮ...."ಎಂದು ಲೀಲಾವತಿಯ ಪೌರುಷ ಮಾತುಗಳಿಗಾಗಿ ತಾವು ಪಶ್ಚಾತ್ತಾಪ ಪಡುವಂತೆ, ಕೆನ್ನೆಗೆ ಹೊಡೆದು ಕೊಂಡರು.

"ಅವಳ ಮಾತು ಬಿಡಿ ಅತ್ತಿಗೆ. ಅವಳ ಸ್ವಭಾವವೇ ಹಾಗೆ. ಯಾರೇ ಇರಲಿ, ಕಡ್ಡಿ ಎರಡು ತುಂಡು ಮಾಡುವಂತೆ ಅವಳ ಮಾತು. ಮನಸ್ಸಿನಲ್ಲಿ ಇರುವುದನ್ನು ನಿರ್ದಾಕ್ಷಿಣ್ಯವಾಗಿ ಅಂದು ಬಿಡುತ್ತಾಳೆ. ಅವಳ ಮಾತು ಎಷ್ಟು ಒರಟಾಗಿದ್ದರೂ ಆ ಮಾತಿನ ಹಿಂದೆ ಇರುವ ಮನಸ್ಸು ಪರಿಶುದ್ಧವಾಗಿದೆ. ಅವಳ ಮನಸ್ಸು ಕಠಿಣವಾಗಿರುವಂತೆ ಕಂಡರೂ ಹೃದಯ ಬೆಣ್ಣೆಯಷ್ಟು 'ಮೃದುವಾಗಿದೆ." ಎಂದು ಲೀಲಾವತಿಯ ಪರ ಹೇಳಿದರು.

"ಅವಳ ಗುಣವನ್ನು ನೀವೇ ಹೊಗಳಬೇಕು. ನನಗಂತೂ ಅವಳ ನಡತೆ ಕಂಡರೆ ಮೈಯೆಲ್ಲಾ ಬೆಂಕಿಬೆಂಕಿಯಾಗುತ್ತೆ." ಇನ್ನೂ ಗಂಗಮ್ಮ ನವರಿಗೆ ಸಿಟ್ಟು ಹೋಗಿರಲಿಲ್ಲ.

"ನಾವು ಪೂರ್ವ ಕಾಲದವರು. ಇವಳು ಈಗಿನ ಕಾಲದವಳು. ನಮಗೂ ಅವಳಿಗೂ ದೃಷ್ಟಿ ಭೇದವಿರುವುದು ಸಹಜವೇ. ಆದರೆ ನಾವು ನಮ್ಮ ಕಾಲದ ವಿಷಯವನ್ನು ಈಗಿನ ಕಾಲದಲ್ಲಿ ಆಲೋಚಿಸುತ್ತಾ ಕಾಲ ಎಷ್ಟು ಕೆಟ್ಟುಹೋಯಿತೆಂದು ಕುಳಿತರೆ ಪ್ರಯೋಜನವಿಲ್ಲ. ನಾವು ಹೊಸ ದನ್ನು ವಿಶಾಲದೃಷ್ಟಿಯಿಂದ ನೋಡುವುದನ್ನು ಕಲಿಯಬೇಕು." ಎಂದರು ಕನಕಲಕ್ಷ್ಮಮ್ಮ. ಲೀಲಾವತಿ ಅಲ್ಲಿ ಇದ್ದಷ್ಟು ತಾಯಿ ಮಗಳ ನಡುವೆ ಬೆಂಕಿಯ ಉಗುಳೇ ಬೀಳುವುದೆಂದು ತಿಳಿದ ವಿಶ್ವನಾಥರಾಯರು, ಕಣ್ಣ ಸನ್ನೆಯಿಂದ ಲೀಲಾವತಿಯನ್ನು ಅಲ್ಲಿಂದ ಎದ್ದು ಹೊರಕ್ಕೆ ಹೋಗಲು

ಹೇಳಿದರು. ಅದರಂತೆ ಲೀಲಾವತಿ ಅಲ್ಲಿಂದ ಎದ್ದು ಹೊರಟುಹೋದಳು.

ಈ ಎಲ್ಲ ಮಾತುಕತೆ ಯಾವ ವಿಷಯವನ್ನೂ ನಿರ್ಧರಿಸದೆ ಹೋಯಿತು. ಲೀಲಾವತಿಯ ಮನಸ್ಸಿನಲ್ಲಿ ಇರುವುದೇನೆಂದು ಯಾರಿಂದಲೂ ಪತ್ತೆ ಹಚ್ಚಲಾಗಲಿಲ್ಲ. ಅವಳು ಎಲ್ಲರಿಗೂ ಒಂದು ಸಮಸ್ಯೆಯೇ ಆದಳು. ಒಬ್ಬೊಬ್ಬರು ಲೀಲಾವತಿಯ ಬಗ್ಗೆ ಒಂದೊಂದು ರೀತಿಯಲ್ಲಿ ಆಲೋಚಿಸಿದರು. ವಿಶ್ವನಾಥರಾಯರಿಗೆ 'ಜ್ಞಾನಾರ್ಜನೆಗಾಗಿ' ತನ್ನ ಮದುವೆಯ ಸುಖವನ್ನು ಬಲಿಕೊಡುತ್ತಿರುವ ಹುತಾತ್ಮಳಾಗಿ ಮಗಳು ತೋರಿದಳು. ಕನಕಲಕ್ಷಮ್ಮನವರಿಗೆ, ಮದುವೆಯಾದರೆ ತನ್ನ ಓದಿಗೆ ಬಂಗ ಬರುವುದೆಂದೂ, ಅದಕ್ಕಾಗಿ ಲೀಲಾವತಿ ಪಟ್ಟುಹಿಡಿದಿರುವಳೆಂದೂ, ಅವಳ ಓದು ಮುಗಿದ ಮೇಲೆ ಅವಳು ದಿವಾಕರನನ್ನೇ ಮದುವೆಯಾಗುವಳೆಂದೂ ದೂರದ ಆಸೆ ಕಂಡಿತು.

ಗಂಗಮ್ಮನವರಿಗೆ ತಮ್ಮ ಮಗಳು ಕಾಲೇಜಿನ ವಿದ್ಯಾಭ್ಯಾಸದಿಂದ ಕೆಟ್ಟುಹೋಗಿರುವಳೆಂದೂ, ಅವಳು ಸ್ವೇಚ್ಛೆಯಾಗಿ ಹದ್ದುಮೀರಿ ಬೆಳೆದು ಹಿರಿಯರ ಮಾತನ್ನು ಲೆಕ್ಕಿಸದ ನಿರ್ಲಜ್ಜ ಹುಡುಗಿ ಎಂದೂ ಮನದಟ್ಟಾಗಿ, ಮದುವೆಯ ವಿಷಯದಲ್ಲಿ ಅವಳನ್ನು ಒಪ್ಪಿಸಲು ಮನುಷ್ಯ ಮಾತ್ರದವರಿಂದ ಸಾಧ್ಯವಿಲ್ಲವೆಂದು ತೀರಾ ನಿರಾಶೆ ಕವಿಯಿತು.

ದಿವಾಕರನಿಗೆ ಇತ್ತ ಆಸೆಯೂ ಇಲ್ಲ; ಅತ್ತ ನಿರಾಶೆಯೂ ಇಲ್ಲ. ಒಮ್ಮೆ ಆಸೆಯೂ ಉಂಟು, ಇನ್ನೊಮ್ಮೆ ನಿರಾಶೆಯೂ ಉಂಟು—ಲೀಲಾವತಿ ನೋಟಕ್ಕೆ ಸಿಗುವ ಗಾಳಿಯೊಡಲ ಅಪ್ಸರೆಯಂತೆ ಭಾಸವಾದಳು. ಅವಳು ಯಾರದೋ ಶಾಪದಿಂದ ಹಾಗಿರುವಳೆಂದೂ, ಆ ಶಾಪದ ಅವಧಿ ಪೂರೈಸಿದ ನಂತರ, ಸದೇಹಳಾಗಿ, ತನ್ನವಳೇ ಆಗುವಳೆಂದೂ ಅವನ ದೂರದ ಆಸೆ. ಮರುಕ್ಷಣದಲ್ಲಿ ತಾನು ಬೊಂಬಾಯಿಯ ಒಂಟಿ ಜೀವನದ ನೆನಪಾಗಿ, ಲೀಲಾವತಿ ತನ್ನ ಬಳಿ ಇದ್ದೂ ಅವಳಿಂದ ತಾನು ದೂರವಿರುವ ಸ್ಥಿತಿಯನ್ನು ನೆನೆದು—ಲೀಲಾವತಿಯ ಕೈಹಿಡಿಯುವ ಪುಣ್ಯ ತನಗೆ ಇಲ್ಲವೇನೋ ಎಂದು ನಿರಾಶಾಭಾವ ಬರುತ್ತಿತ್ತು. ಆದರೆ ಲೀಲಾವತಿ ಮಾತ್ರ ಮನಸ್ಸನ್ನು ಕಲ್ಲಿಗಿಂತ ಕಲ್ಲುಮಾಡಿ, ಒಂದು ವಿಷಯವನ್ನು ನಿರ್ಧರಿಸಿದ್ದಳು.—ಮೊದಲು ತನ್ನ ವ್ಯಾಸಂಗ ಮುಗಿಯಬೇಕು, ಅನಂತರ ಮದುವೆಯ ಮಾತು. ಮದುವೆ

ಯಾಗುವುದಾದರೆ ದಿವಾಕರನನ್ನೇ ಮದುವೆಯಾಗಬೇಕು, ಎನ್ನುವ ವಿಷಯವು ಮಾತ್ರ ನಿಶ್ಚಯವಾಗದೆ ಉಳಿಯಿತು.

ಊರಿಗೆ ಹಿಂದಿರುಗುವ ಮುನ್ನ ಮತ್ತೆ ಇದೇ ಮಾತು ನಡೆಯಿತು. ಆದರೆ ಈಗ ಲೀಲಾವತಿಯ ಮನದ ಇಂಗಿತವರಿಯಲು ಕನಕಲಕ್ಷಮ್ಮ ಲೀಲಾವತಿ ಒಂಟಿಯಾಗಿ ಇದ್ದಾಗ ಪ್ರಸ್ತಾಪಿಸಿದರು. ಅವರಿಗೆ ತಮ್ಮ ಮಗನ ಮದುವೆಯನ್ನು ಆ ವರ್ಷವೇ ಮಾಡಿಬಿಡಬೇಕೆಂದು ಅನಿಸುತ್ತಿತ್ತು. ಅದಕ್ಕೆ ತಕ್ಕಂತೆ ರಾಘವೇಂದ್ರರಾಯರು ವಿಶ್ರಾಂತಿ ಹೊಂದಿ ಹಳ್ಳಿಗೆ ಸೇರಿದ್ದರು. ಅವರ ದೇಹದಲ್ಲಿ ಶಕ್ತಿ ಇರುವಾಗ, ಅವರ ಕೈ ನಡೆಯುವಾಗ ಇಂಥ ಖರ್ಚಿನ ಬಾಬುಗಳನ್ನು ಮಾಡಿ ಮುಗಿಸಿಬಿಡಲು ಅವರ ಆಸೆ. ಅಲ್ಲದೆ ದಿವಾಕರನೂ ಮದುವೆಯ ವಯಸ್ಸಿಗೆ ಎಂದೋ ಬಂದಿದ್ದ. ಅವನಿಗೆ ಈಗ ಇಪ್ಪತ್ತೇಳು ನಡೆಯುತ್ತಿತ್ತು. ಅವನಿಗೆ ಹೆಣ್ಣು ಕೊಡಲು ಹಲವಾರು ಕಡೆಗಳಿಂದ ಜಾತಕಗಳು ಬರುತ್ತಿದ್ದುವು. ಇಂದಲ್ಲದಿದ್ದರೂ ಮುಂದೆ ಲೀಲಾವತಿಯೇ ದಿವಾಕರನ ವಧು ಎಂಬುದು ನಿರ್ಣಯವಾದರೆ ತಾನು ಇತರ ವರಾನ್ವೇಷ್ಪಕರಿಗೆ ಯಾವುದನ್ನೂ ಖಚಿತವಾಗಿ ತಿಳಿಸಿಬಿಡಬಹುದೆಂದು ಆ ವಿಷಯವನ್ನು ಖಚಿತಪಡಿಸಿಕೊಳ್ಳಲು ಲೀಲಾವತಿಯೊಂದಿಗೆ ಪ್ರಸ್ತಾಪಿಸಿದರು.

" ನೀನು ಯಾವ ವಿಷಯವನ್ನೂ ಖಚಿತವಾಗಿ ತಿಳಿಸಿಬಿಟ್ಟರೆ ನಮಗೆ ಎಷ್ಟೋ ಉಪಕಾರಮಾಡಿದಂತೆ ಆಗುತ್ತದೆ. ಲೀಲಾ, ನಮ್ಮೆಲ್ಲರಿಗೆ ನೀನು ನಮ್ಮ ಮನೆ ಸೇರಬೇಕೆನ್ನುವ ಆಸೆ ಬೆಟ್ಟದಷ್ಟು ಇದೆ. ನಿನ್ನ ಮನಸ್ಸು ನಮ್ಮೆಲ್ಲರ ಪ್ರಾರ್ಥನೆಗೆ ಕರಗದೆ ಇದ್ದರೆ, ದೈವನಿಯಾಮಕವೇ ಹಾಗಿದ್ದರೆ ನೀನು ಯಾರನ್ನಾದರೂ ಮದುವೆಯಾಗಿ ಎಲ್ಲಾದರೂ ಸುಖವಾಗಿರು ಎಂದು ನಾವು ಆಶೀರ್ವಾದ ಮಾಡಬೇಕಾದ್ದು ನಮ್ಮ ಕರ್ತವ್ಯ. ನೀನು ಮದುವೆಯಾಗುವುದು ಬಿಡುವುದು ಯಾವುದನ್ನೂ ಸ್ಪಷ್ಟವಾಗಿ ತಿಳಿಸಿಬಿಡು. ದಿವಾಕರನಿಗೆ ನಾಲ್ಕಾರು ಕಡೆಗಳಿಂದ ಹೆಣ್ಣುಗಳು ಬರುತ್ತಿವೆ. ಅವರಿಗೆ ನಾವು ಯಾವುದನ್ನೂ ತಿಳಿಸಬೇಕಾಗಿದೆ."

" ಬೇರೆ ಕಡೆಯಿಂದ ಹೆಣ್ಣುಗಳು ಬರುತ್ತಿದ್ದರೆ ಸಂತೋಷವಾಗಿ

ಮಾಡಿಕೊಳ್ಳಿ. ಇದಕ್ಕೆ ನನ್ನ ಅಭ್ಯಂತರವಿಲ್ಲ."— ಎಂದಳು ಲೀಲಾವತಿ ನಿಶ್ಚಲ ಮನಸ್ಸಿನಿಂದ.

ಈ ಮಾತು ಲೀಲಾವತಿಯ ಬಾಯಿಂದ ಬಂದೀತೆಂದು ಕನಕಲಕ್ಷ್ಮಮ್ಮನವರು ತಿಳಿದಿರಲಿಲ್ಲ. ಅವರಿಗೆ ಕ್ಷಣಕಾಲ ಮಾತು ಹೊರಡಲಿಲ್ಲ. ಅನಂತರ ಕೇಳಿದರು.

"ಇನ್ನೊಬ್ಬರ ವಿಷಯ ಬೇಡ. ನಿನಗೆ ದಿವಾಕರನನ್ನು ಮದುವೆಯಾಗಲು ಇಷ್ಟವಿದೆಯೋ ಇಲ್ಲವೋ ಅದನ್ನು ಹೇಳು."

"ಸದ್ಯದ ಪರಿಸ್ಥಿತಿಯಲ್ಲಿ ನಾನು ಯಾರನ್ನೂ ಮದುವೆಯಾಗುವುದಿಲ್ಲ."

"ನಿನ್ನ ಓದು ಪೂರೈಸಿದ ಮೇಲೆ?"

"ಓದು ಪೂರೈಸಿದ ಮೇಲೆಯೂ ಮದುವೆಯಾಗುವ ಆಸೆ ಇಲ್ಲ."

"ಏಕೆ?"

"ಮದುವೆಯಿಂದ ನನ್ನ ವ್ಯಕ್ತಿಸ್ವಾತಂತ್ರ್ಯಕ್ಕೆ ಭಂಗಬರುತ್ತದೆ."

"ಹಾಗಾದರೆ ಮದುವೆ ನಿನ್ನ ದೃಷ್ಟಿಯಲ್ಲಿ ಪರತಂತ್ರವೇ."

ಈ ಮಾತಿಗೆ ಕೂಡಲೇ ಉತ್ತರ ಬರಲಿಲ್ಲ. ಕನಕಲಕ್ಷ್ಮಮ್ಮ ಮುಂದುವರೆಸಿದರು :

"ನೀನು ದಿವಾಕರನನ್ನು ಮದುವೆಯಾದರೆ ಅವನು ನಿನ್ನನ್ನು ಪರತಂತ್ರದಲ್ಲಿ ಇರಿಸುತ್ತಾನೆಯೇ? ನಿನಗಿರುವ ಸ್ವಾತಂತ್ರ್ಯವನ್ನು ಕಸಿದುಕೊಂಡು, ನಿನ್ನನ್ನು ದಾಸಿಯನ್ನಾಗಿ ಮಾಡುತ್ತಾನೆಯೇ?"

"ದಿವಾಕರನ ವಿಷಯದಲ್ಲಿ ನನಗೆ ಪೂರ್ಣನಂಬಿಕೆ ಇದೆ. ಅವನ ಮನಸ್ಸು ಸುಸಂಸ್ಕೃತವಾದದ್ದು, ಅಂತಲೇ ಅದನ್ನು ನಾನು ಪ್ರೀತಿಸುತ್ತೇನೆ. ನನಗೆ ಅವನ ವಿಷಯದಲ್ಲಿ ಯಾವ ಅಂಜಿಕೆಯೂ ಇಲ್ಲ. ಇರುವ ಅಂಜಿಕೆ ಎಲ್ಲ—ಮದುವೆ ಪದ್ಧತಿಯ ಬಗ್ಗೆ. ಅದರ ಬಗ್ಗೆ ನನಗೆ ತಿರಸ್ಕಾರವಿದೆ. ಅಂತಲೇ ಅದನ್ನು ನಾನು ದ್ವೇಷಿಸುತ್ತೇನೆ."

"ಮದುವೆಯನ್ನು ತಿರಸ್ಕರಿಸುವುದರಿಂದ ನಿನಗೆ ಬರುವ ಲಾಭವೇನು?"

" ವ್ಯಕ್ತಿಸ್ವಾತಂತ್ರ್ಯ ರಕ್ಷಣೆ."

" ವ್ಯಕ್ತಿಸ್ವಾತಂತ್ರ್ಯಕ್ಕಾಗಿ ವೈವಾಹಿಕ ಜೀವನವನ್ನು ಬಲಿಗೊಡಬೇಕೆ ? "

" ಬಲಿದಾನವಿಲ್ಲದೆ ಸ್ವಾತಂತ್ರ್ಯವಿಲ್ಲ."

" ಇಂತಹ ಸ್ವಾತಂತ್ರ್ಯ ಯಾವ ಪುರುಷಾರ್ಥಕ್ಕೆ ಬೇಕು ? ಹೆಣ್ಣಾಗಿ ಹುಟ್ಟಿದ ಮೇಲೆ ಗೃಹಿಣಿಯಾಗುವುದು ಹೆಣ್ಣಿಗೆ ಭೂಷಣ. ನೀನು ಅಕಾರಣವಾಗಿ, ಆಜೀವಪರ್ಯಂತ ಕುಮಾರಿಯಾಗಿ ಉಳಿಯುವುದು ಯಾವ ದೇವರ ಶಾಪಕ್ಕಾಗಿ ನೀನು ಈ ಉಗ್ರ ಕುಮಾರೀವ್ರತ ಹಿಡಿಯಬೇಕು ? "

" ಪಿತೃದೇವತೆಯ ಪ್ರೀತ್ಯರ್ಥವಾಗಿ—ನಾನು ಹೀಗೆ ಇರಬೇಕೆಂದಿದ್ದೇನೆ. ಮದುವೆಯಾದ ಮೇಲೆ ಕುಲದಿಂದ ಹೊರಗಾಗುವೆ—ಅಂದರೆ ಪ್ರಾಣಾಧಿಕರಾದ ತಂದೆಯಿಂದ ಹೊರಗೆ ಇರುವೆ. ಅದು ನನ್ನಿಂದ ಆಗದ ಕೆಲಸ, ನನ್ನ ಪ್ರಾಣಪಕ್ಷಿ ಎಲ್ಲಿಯಾದರೂ ಸೆರೆಯಲ್ಲಿ ಇರುವುದಾದರೆ ಅದು ಅವರ ಹೃದಯ ಪಂಜರದಲ್ಲಿ ಸೆರೆಯಾಗಿದೆ—" ಅವರನ್ನು ಆಗಲಿ, ಅವರಿಂದ ದೂರವಾಗಿ ನಾನು ಕ್ಷಣಕಾಲ ಬದುಕಲಾರೆ– ಎಂದು ಕಣ್ಣೀರು ತಂದುಕೊಂಡು ಲೀಲಾವತಿ ಹೇಳಿದಳು. ಇಷ್ಟು ಕಾಲದ ಮೇಲೆ ಲೀಲಾವತಿ ತನ್ನ ಹೃದ್ಗತವನ್ನು ತಿಳಿಯಪಡಿಸಿದ್ದಳು ಅವಳ ಮಾತನ್ನು ಕೇಳಿ ಕನಕಲಕ್ಷಮ್ಮನವರ ಮನಸ್ಸು ಬೆಣ್ಣೆಯಂತೆ ಕರಗಿತು. ' ಅಯ್ಯೋ ಕಂದಾ ! ಎಂಥ ಮಾತು ಹೇಳಿದೆ ? ತಂದೆಯಿಂದ ದೂರವಿರಲಾರದೆ ಮದುವೆ ಬೇಡವೆನ್ನುತ್ತೀಯ ಮಗು, ನೀನು ಮನುಷ್ಯಳಲ್ಲ—ದೇವತೆ, ನಿನ್ನನ್ನು ಕೈಹಿಡಿಯುವವನು ನಿಜವಾಗಿಯೂ ಪುಣ್ಯಾತ್ಮನೇ ಸರಿ " ಎಂದರು ಉದ್ವೇಗದಲ್ಲಿ.

ಅವರೆಂದರು " ನಿನ್ನ ಹೃದಯಾಂತರಾಳದ ಆಸೆ ಹೀಗಿದ್ದರೆ ಇದನ್ನು ಮೊದಲೇ ಯಾಕೆ ಹೇಳದೆ ಹೋದೆ. ಈ ವಿಷಯದಲ್ಲಿ ನೀನು ಮಗು. ತಾಯಿಯ ಮಡಿಲಿಗೆ ಜೋತುಬೀಳುವ ಹಾಲು ಕಂದಮ್ಮ . ಪರಕೀಯರು ಬಂದು ಎತ್ತಿಕೊಳ್ಳುವರೆಂದು ಹೆದರಿ ತಾಯಿತೋಳಿಗೆ ಜೋತು ಬೀಳುವಂತೆ ನೀನು ತಂದೆಯ ಮಡಿಲಲ್ಲಿ ಆಶ್ರಯ ಬಯಸುವೆ—ಇದಕ್ಕೆ ಮದುವೆ ಅಡ್ಡಿ ಬರುವುದೆಂದು ತಿಳಿದಿರುವೆಯಾ ? ಬೇರೆಯವರನ್ನ ಮದುವೆಯಾದರೆ ಅಡ್ಡಿ

ಬರಬಹುದು. ನಮ್ಮ ದಿವಾಕರ ಅಂತಹ ಏರ್ಪಾಡಿಗೆ ಒಪ್ಪಲು ಸಿದ್ಧಸಿರು ವಾಗ ಏಕೆ ಮದುವೆಗೆ ಒಪ್ಪಬಾರದು ಮಗು ?"—ಎಂದರು.

"ಎರಡು ಹಕ್ಕಿಗಳನ್ನು ಒಂದೇ ಏಟಿನಿಂದ ಹೇಗೆ ಕೊಲ್ಲಲಿ. ನನ್ನ ಮನಸ್ಸಿನಲ್ಲಿ ಇರುವ ಅಭಿಪ್ರಾಯ ಹೇಳುವುದಾದರೆ ನನ್ನ ತಂದೆಯವರ ಪ್ರೇಮದಲ್ಲಿ ಇನ್ನೊಬ್ಬರಿಗೆ ಪಾಲುಕೊಡಲು ನಾನು ಸಿದ್ಧಳಲ್ಲ, ಮತ್ತೊಬ್ಬ ರನ್ನು ಮದುವೆಯಾದರೆ ಗಂಡ, ತಂದೆಯರ ನಡುವೆ ನನ್ನ ಪ್ರೀತಿ ಹಂಚಿ ಹೋಗುತ್ತದೆ. ಇದರಿಂದ ನನ್ನ ತಂದೆಗೆ ವಂಚಿಸಿದಂತೆ ಆಗುತ್ತದೆ. ಇಲ್ಲ....ನಾನು ಬದುಕಿರುವ ತನಕ ನನ್ನನ್ನು ಈ ಸ್ಥಿತಿಗೆ ತಂದ ನನ್ನ ಭಾಗದ ದೈವವಾದ ತಂದೆಯಿಂದ ದೂರವಿರಲಾರೆ. ನನ್ನ ಪ್ರೀತಿಯನ್ನು ಇನ್ನೊಬ್ಬ ರೊಡನೆ ಹಂಚಿಕೊಳ್ಳಲಾರೆ" ಎಂದು ಬಡಬಡಿಸಿದಳು.

ಇದರಿಂದ ಒಂದು ವಿಷಯ ನಿರ್ಣಯವಾಯಿತು. ಲೀಲಾವತಿ ಎಲ್ಲರಂತೆ ಸಾಮಾನ್ಯ ಹುಡುಗಿ ಅಲ್ಲ. ಅವಳು ವಿಚಿತ್ರ ಆದರ್ಶಗಳ ಕಲಸುಮೇಲೋಗರ. ಇಂತಹವಳ ಮನಸ್ಸಿನ ವಿರುದ್ಧ ಏನು ಮಾಡಿದರೂ ಅದು ಅವಳ ದುಃಖಕ್ಕೆ ಹೇತುವಾಗುತ್ತದೆ; ತಮ್ಮ ಆಶಯಗಳು ಏನಿದ್ದರೂ ಲೀಲಾವತಿಯ ಸುಖಕ್ಕಾಗಿ. ಅವಳನ್ನು ಅವಳ ಪಾಡಿಗೆ ಬಿಡುವುದು ಯೋಗ್ಯ ವಾದುದೆಂದು ಮೊದಲನೆಯ ಬಾರಿಗೆ ಕನಕಲಕ್ಷ್ಮನವರಿಗೆ ಅರಿವಾಯಿತು. ಅವರು ಏನನ್ನೋ ನಿರ್ಧರಿಸಿ, ಲೀಲಾವತಿಯನ್ನು ಸಂತೈಸಿ, ಅವಳಿಂದ ಬೀಳ್ಕೊಂಡರು.

ದಿವಾಕರ ಭಗ್ನಪ್ರಣಯಿಯಾಗಿ ಬೊಂಬಾಯಿ ಸೇರಿದ. ಕನಕ ಲಕ್ಷ್ಮನವರು ಅತೃಪ್ತ ಬಯಕೆಯನ್ನು ಹೊತ್ತು ಹಳ್ಳಿ ಸೇರಿದರು. ಲೀಲಾ ವತಿ ಇಷ್ಟೆಲ್ಲ ಹಗರಣವಾದ ಮೇಲೆ ಅತ್ತೆಯ ಮನೆಯಲ್ಲಿ ಇರುವುದು ಬೇಡ ವೆನಿಸಿ, ಅವಳು ಮಹಾರಾಣಿ ಕಾಲೇಜು ಹಾಸ್ಟಲನ್ನು ಸೇರಿಕೊಂಡಳು.

ಇಂತು ಮೂವರ ದಾರಿ ಮೂರು ಬಗೆಯಾಯಿತು. ಅಂತೆಯೇ ಮೂವರ ಮನಸ್ಸಿನ ರೀತಿ ಮೂರು ಬಗೆಯಾಯಿತು.

ದಿವಾಕರನು ಬೊಂಬಾಯಿ ಸೇರಿದ ತಿಂಗಳಿಗೆ ಕನಕಲಕ್ಷ್ಮನವ ರಿಂದ ಒಂದು ಪತ್ರ ಬಂತು. ಅದರಲ್ಲಿ ಚಿಕ್ಕಮಗಳೂರಿನ ಕಾಫಿಪ್ಲಾಂಟರ

ರೊಬ್ಬರು ತಮ್ಮ ಮನೆಗೆ ಅವರ ಹುಡುಗಿಯನ್ನು ಕರೆತಂದಿದ್ದರೆಂದೂ, ಹುಡುಗಿ ಲಕ್ಷಣವಾಗಿರುವುಳೆಂದೂ, ಜಾತಕ ಅನುಕೂಲವಾಗಿರುವುದೆಂದೂ ತಿಳಿಸಿ, ಕೂಡಲೇ ಹೊರಟು ಬರಲು ಬರೆದರು. ಭಗ್ನಪ್ರೇಮಿಯಾದ ದಿವಾಕರನಿಗೆ ಬೊಂಬಾಯಿಗೆ ಹೋದ ಕೆಲವು ದಿನ ತಾನು ವಿವಾಹವನ್ನೇ ಮಾಡಿಕೊಳ್ಳಬಾರದೆಂದು ಅನಿಸಿದ್ದರೂ, ಲೀಲಾವತಿ ಅವನ ಮನಸ್ಸಿನ ಸೀಮೆಯಿಂದ ಮಾಯವಾದ ಮೇಲೆ ಹೃದಯ ಭಣಭಣಗುಟ್ಟುತ್ತಿತ್ತು. ಅದು ಅದೇ ಸ್ಥಿತಿಯಲ್ಲಿ ಹೆಚ್ಚು ಕಾಲವಿದ್ದರೆ ತನಗೆ ಬುದ್ಧಿವಿಕಲ್ಪವಾಗುವುದೆಂದು ಅವನಿಗೂ ಅರಿವಾಯಿತು. ಅವನಿಗೆ ಆಗಬೇಕಾದದ್ದು, ಪ್ರೀತಿಯ ಮಧುರವಚನ, ಹೆಂಗಳೆಯಳ ಪ್ರಿಯಸಾನಿಧ್ಯ. ಅವನು ಈ ಸ್ಥಿತಿಯಲ್ಲಿ ಇರುವಾಗಲೇ ಕನಕಲಕ್ಷ್ಮಮ್ಮನವರಿಂದ ಕಾಗದ ಬಂದದ್ದು. ಅವನು ತಡ ಮಾಡದೆ ಮೈಸೂರಿಗೆ ಹೊರಟು ಬಂದು, ಹುಡುಗಿಯನ್ನು ನೋಡಿ, ತನ್ನ ಅನುಮತಿಯನ್ನು ತಿಳಿಸಿದ. ವಿವಾಹ ನಿಶ್ಚಯವಾಗಿ, ಲಗ್ನಪತ್ರಿಕೆ ಎಲ್ಲರಿಗೂ ಹೋಯಿತು. ಕನಕಲಕ್ಷ್ಮಮ್ಮನವರು ಚಿಕ್ಕಮಗಳೂರಿನಲ್ಲಿ ನಡೆಯಲಿದ್ದ ಲಗ್ನಕ್ಕೆ ಬರಲು ಲೀಲಾವತಿಯನ್ನು ಎಷ್ಟೋ ಬಲವಂತಮಾಡಿದರು. ಆದರೆ ಲೀಲಾವತಿ ಪರೀಕ್ಷೆಯ ನೆವ ಒಡ್ಡಿ ತಪ್ಪಿಸಿಕೊಂಡಿದ್ದಳು. ಮದುವೆಯ ದಿನ ನೂತನ ದಂಪತಿಗಳಿಗೆ ಶುಭಾಶಯ ಕೋರಿ ಕಾಗದ ಬರೆದು ತನ್ನ ಉಡುಗೊರೆಯನ್ನು ಕಳುಹಿಸಿಕೊಟ್ಟಳು. ದಿವಾಕರನಿಗೆ ಲೀಲಾವತಿ ಬರೆದಿದ್ದ ಕಾಗದ, ಉಡುಗೊರೆ ಕಂಡು, ಅವಳನ್ನು ಕಂಡಂತೆಯೇ ಆಯಿತು. ಅವಳನ್ನು ಬಿಟ್ಟು ವಿಧಿ ತಂದ ವಧುವನ್ನು ಕೈಹಿಡಿಯುವಂತಾದ ವಿಧಿಲೀಲೆಯನ್ನು ನೆನೆದು ಕಣ್ಣೀರು ಸುರಿಸಿದ. ಆದರೆ ಲೀಲಾವತಿ ಬರೆದಿದ್ದ "ನವ ಉತ್ಸಾಹದಿ ನಿಂದಿಹ ನವ ವಧೂವರರಿಗೆ ಜೀವನ ಹಾಡಲಿ—ಸುಖ ಸಂತೋಷದ ಜೋಗುಳ" ಎನ್ನುವ ಮಾತನ್ನು ಓದಿಕೊಂಡು ಒಂದು ಬಗೆಯ ಸಮಾಧಾನವಾಯಿತು. ಅವನು ಸಮಾಧಾನ ಸೂಚಕವಾಗಿ ನಿಟ್ಟುಸಿರುಬಿಟ್ಟ.

# ೮

ಲೀಲಾವತಿಗೆ ಆ ಎಲ್ಲ ಸಂಗತಿಗಳು ನೆನಸಾದುದರಿಂದಲೇ ಅವಳು ಹನಿಗಣ್ಣಾದುದು. ಗೆಳತಿಯರಿಗೆ ಲೀಲಾವತಿಯ ಒಳತೋಟಿಯ ಭಾವನೆಗಳು ಅರಿವಾಗಲು ಅವರಿಗೆ ಲೀಲಾವತಿಯ ಹಾಗೂ ದಿವಾಕರರ ಸಂಬಂಧವೆಂಥದೆಂದು ತಿಳಿದಿದ್ದರಲ್ಲವೇ? ಅವರು ಮಾತಿಲ್ಲದೆ ಮೌನವಾಗಿ ಕುಳಿತ ಲೀಲಾವತಿಯನ್ನು ಎವೆಯಿಕ್ಕದೆ ಕ್ಷಣಕಾಲ ನೋಡಿ, ಅವಳು ಯಾವುದೋ ಹಳೆಯ ನೆನಪೊಂದನ್ನು ತೋಡಿಕೊಂಡು, ಈ ಪರಿ ಚಿಂತಿಸುತ್ತಿರಬೇಕೆಂದು ಊಹಿಸಿ, ಅವಳಿಂದ ಆ ಎಲ್ಲ ಸಂಗತಿಗಳನ್ನೂ ಹೊರಪಡಿಸಲಾಗದೆ, ಅವಳ ಗಮನವನ್ನು ಬೇರೆ ಕಡೆಗೆ ಸೆಳೆಯುವುದರ ಮೂಲಕ, ಅವಳನ್ನು ಸಂತೈಸಲು ಪ್ರಯತ್ನಿಸಿದರು.

ಸುಮಿತ್ರೆ ಹಂಸಳೊಂದಿಗೆ ಮಾತು ತೆಗೆದಳು " ಹಂಸ, ಹೇಗೂ ನೀನು ಊರಿಗೆ ಹೊರಡುವವಳು. ನಮ್ಮ ಮಡಕೇರಿಗೂ ಒಮ್ಮೆ ಬಂದು ಹೋಗಬಾರದೇ? ನೀನು ನಾಲ್ಕು ವರ್ಷಗಳಿಂದಲೂ ಹೇಳುತ್ತ ಬಂದಿದ್ದೀಯೆ "— ಎಂದಳು.

" ಈ ಬಾರಿ ಕ್ಷಮಿಸು ಸುಮಿತ್ರ. ಇನ್ನೊಮ್ಮೆ ಖಂಡಿತ ಬರುತ್ತೇನೆ."

" ಈಗ ನೀನು ನಮ್ಮೂರಿಗೆ ಬರದೆ ಹೋದಮೇಲೆ ಮುಂದೆ ಬರುವುದು ನಾನು ಕಾಣೆನೇ? ನಮ್ಮ ಲೀಲಾನೂ ಹಾಗೇ ಅನ್ನುತ್ತಲೇ ಬಂದಿದ್ದಾಳೆ. ಕರೆದಾಗ ಬರದೆ ಇರುವವರು ತಾವಾಗಿ ಬರುತ್ತೇವೆಂದರೆ ಎಷ್ಟರ ಮಟ್ಟಿಗೆ ನಿಜ! ಮುಖ್ಯ ನಿಮಗೆ ನಮ್ಮ ಬಡಕುಟೀರಕ್ಕೆ ಬರುವ ಮನಸ್ಸಿಲ್ಲವೆನ್ನು. ಸುಮ್ಮನೆ ಏಕೆ ಇನ್ನೊಮ್ಮೆ ಬರುತ್ತೇವೆಂದು ಸುಳ್ಳು ಆಸೆ ಇಡಬೇಕು. " ಎಂದಳು ಅಸಮಾಧಾನದಿಂದ.

ಈ ಮಾತು ಕೇಳಿ ಲೀಲಾವತಿ ಹೇಳಿದಳು.

"ನನ್ನ ಮೇಲೆ ಕೋಪಿಸಬೇಡ. ನೀನು ನಿಮ್ಮೂರಿಗೆ ಬರಲು ನಾಲ್ಕೈದು ಬಾರಿ ಕರೆದಿರುವೆ. ನಾನೇನು ಮಾಡಲಿ? ನನಗೆ ನಿಮ್ಮೂರಿಗೆ ಒಮ್ಮೆಯಾದರೂ ಬರುವ ಆಸೆ ಇದ್ದರೂ, ಮಣಗಟ್ಟಲೆ ಬಂದುಬಿದ್ದಿರುವ ಪರೀಕ್ಷೆ

ಪೇಪರುಗಳನ್ನು ಬಿಟ್ಟು ಎಲ್ಲಿಗೆ ಹೋಗಲಿ. ನಮ್ಮ ತಂದೆ ಕಾಲೇಜಿಗೆ ರಜ ಬಂದೊಡನೆಯೇ ಊರಿಗೆ ಬಾ ಎಂದು ದಿನಕ್ಕೊಂದು ಕಾಗದ ಬರೆಯುತ್ತಾರೆ. ಇತ್ತ ನೀನು ಬಾ ಎಂದು ಕರೆಯುತ್ತಿ. ಎಲ್ಲಿಗೆಂದು ಹೋಗಲಿ, ಎಲ್ಲಿಗೆಂದು ಬಿಡಲಿ. ನೀನೇ ಹೇಳು....ಆಗಲಿ, ಏನಾದರೂ ಮಾಡಿ, ಈ ಬಾರಿ ನಿಮ್ಮೂರಿಗೆ ಬಂದೇಬಿಡಬೇಕೆಂದಿದ್ದೇನೆ. ಆದರೆ ಸುಮ್ಮ ಸುಮ್ಮನೆ ನಿಮ್ಮೂರಿಗೆ ಬಂದರೆ ಹೇಗೆ ಅಂತ ಯೋಚನೆ...."

"ಸುಮ್ಮ ಸುಮ್ಮನೆ ಅಂದರೆ...."

"ಏನಾದರೂ ವಿಶೇಷ ಸಂದರ್ಭವಾದರೆ ಬರಬಹುದು."

"ಊರಿಗೆ ಬರಲು ವಿಶೇಷ ಸಂದರ್ಭ ಬೇಕೆ?—ನೀವು ಊರಿಗೆ ಬರುವುದೇ ಒಂದು ವಿಶೇಷ ಸಂದರ್ಭ—ಇದಕ್ಕೆ ಮೀನಾಮೇಷ ಎಣಿಸಬೇಕೇ" ಎಂದಳು ಸುಮಿತ್ರೆ.

"ಆಗಲಮ್ಮ. ನೀನು ಬನ್ನಿ ಎಂದಾಗ ಹೊರಟುಬರುತ್ತೇವೆ. ನಿನ್ನನ್ನೇಕೆ ಸತಾಯಿಸಬೇಕು"—ಎಂದಳು ಲೀಲಾವತಿ ಹಂಸಳ ಮುಖ ನೋಡುತ್ತ. ಲೀಲಾವತಿ ಹಂಸಳೂ ತನ್ನ ಮಾತನ್ನ ಅನುಮೋದಿಸುವಳೆಂದು ತಿಳಿದಿದ್ದಳು. ಆದರೆ ಹಂಸ ಬೇರೊಂದು ರಾಗ ಎಳೆದಳು.

"ಪ್ಲೀಸ್ ಡೋಂಟ್ ಮಿಸ್ಟೇಕ್ ಮಿ (ದಯವಿಟ್ಟು ನನ್ನನ್ನು ತಪ್ಪು ತಿಳಿಯಬೇಡ) ಈ ಬಾರಿ ನನ್ನ ದಯವಿಟ್ಟು ಕ್ಷಮಿಸಿಬಿಡಬೇಕು. ನನಗೆ ಈ ಬಾರಿ ನಿಮ್ಮ ಜತೆಗೆ ಬರೋಕ್ಕೆ ಆಗಲ್ಲ. ಮುಂದೊಮ್ಮೆ ಬರುತ್ತೇನೆ." ಎಂದು ಎಷ್ಟು ಹೇಳಿದರೂ ಅವಳ ಮಾತನ್ನು ಕಿವಿಯ ಮೇಲೆ ಹಾಕಿಕೊಳ್ಳದೆ, ಲೀಲಾವತಿ ಸುಮಿತ್ರೆಯೊಂದಿಗೆ ಹೊರಡುವ ದಿನವನ್ನು ನಿರ್ಧರಿಸಿಯೇ ಬಿಟ್ಟಳು. ನಿರ್ಧರಿಸಿದ ಆ ದಿನ ಮೂವರು ಗೆಳತಿಯರು ಮಡಕೇರಿಗೆ ಬಸ್ಸು ಹತ್ತಿದರು.

ಲೀಲಾವತಿ ಇಷ್ಟು ದಿನಕ್ಕೆ ಮೈಸೂರು ಬಿಟ್ಟು ಹೊರಗೆ ಹೊರಡುತ್ತಿರುವುದು ಇದೇ ಮೊದಲು. ಅವಳು ರಜ ಬಂದರೆ ತಂದೆಯ ಮನೆ, ಕಾಲೇಜಿದ್ದರೆ ಮೈಸೂರು—ಹೀಗೆ ಏಳೆಂಟು ವರ್ಷಗಳ ಅವಳ ಜೀವನ ಕೇವಲ ಕಾಲೇಜಿನ ಆವರಣದಲ್ಲಿಯೇ ಕಳೆದುಹೋಗಿತ್ತು. ಲೀಲಾವತಿ ತನ್ನ

ಮನೋನಿಶ್ಚಯದಂತೆ, ಬಿ.ಎ. ಆನರ್ಸ್ ಪರೀಕ್ಷೆಯನ್ನು ಪ್ರಥಮ ತರಗತಿಯಲ್ಲಿ ಪಾಸುಮಾಡಿ, ತಾನು ಓದಿದ ಕಾಲೇಜಿನಲ್ಲೇ ಇಂಗ್ಲಿಷ್ ಅಧ್ಯಾಪಕಿಯಾಗಿ ಕೆಲಸಕ್ಕೆ ಸೇರಿಕೊಂಡಿದ್ದಳು. ಅವಳಿಗೆ ತಾನು ಓದು ಮುಗಿಸಿದ ಮೇಲೆ ಕೆಲಸಕ್ಕೇ ಸೇರಬೇಕೆಂಬ ನಿರ್ಬಂಧವಿರಲಿಲ್ಲ. ಆದರೆ ಓದು ಮುಗಿಸಿದ ಮೇಲೆ ಮುಂದೆ ಮನೆಯಲ್ಲಿ ಕುಳಿತು ಮಾಡುವುದೇನು? ಎನ್ನುವ ಪ್ರಶ್ನೆಗೆ ಉತ್ತರ ರೂಪವಾಗಿ, ಹೊತ್ತು ಕಳೆಯಲೋಸುಗ, ಅಲ್ಲದೆ ತನಗೆ ತಿಳಿದ ಅಲ್ಪ ಸ್ವಲ್ಪವನ್ನು ತನ್ನ ಸೋದರಿಯರಿಗೆ ಧಾರೆ ಎರೆಯಲೋಸುಗ, ಮಹಾ ರಾಣಿ ಕಾಲೇಜಿನಲ್ಲಿ ಅಧ್ಯಾಪಕಿಯ ಕೆಲಸಕ್ಕೆ ಸೇರಿಕೊಂಡಿದ್ದಳು. ತಂದೆ ವಿಶ್ವನಾಥರಾಯರೂ ಮಗಳಿಗೆ ಈ ವಿಷಯದಲ್ಲಿ ಪ್ರೋತ್ಸಾಹವಿತ್ತರು. ಲೀಲಾವತಿಯ ಮದುವೆಯ ಮಾತು ಎಂದೋ ನಿರ್ಣಯವಾಗಿತ್ತು. ದಿವಾ ಕರನ ಮದುವೆ ನಡೆದುದೇ ಲೀಲಾವತಿಯ ಮದುವೆಯ ಬಗ್ಗೆ ವಿಶ್ವನಾಥ ರಾಯರ ಹಾಗೂ ಕನಕಲಕ್ಷ್ಮಮ್ಮನವರ ಆಸಕ್ತಿ ಕಡಿಮೆಯಾಯಿತೆನ್ನಬೇಕು. ಮುಂದೆ ಆನರ್ಸ್ ಮುಗಿದ ಮೇಲೆ ಈ ವಿಷಯವನ್ನು ಪ್ರಸ್ತಾಪಿಸಿದಾಗ, ಲೀಲಾವತಿ ತಾನು ಸದ್ಯಕ್ಕೆ ಮದುವೆಯಾಗುವುದಿಲ್ಲವೆಂದೂ, ತನ್ನ ಮದುವೆಯ ಬಗ್ಗೆ ಯಾರೂ ಯಾವ ಬಗೆಯ ಚಿಂತೆ ಹಚ್ಚಿಕೊಳ್ಳಬಾರ ದೆಂದೂ ಖಡಾಖಂಡಿತವಾಗಿ ತಿಳಿಸಿಬಿಟ್ಟಿದ್ದಳು. ಈ ಮಾತಿನಿಂದ ಗಂಗಮ್ಮ ನಿಗೂ ಲೀಲಾವತಿಗೂ ಹಣಾಹಣಿ ಜಗಳವಾಗಿ, ತಮ್ಮಿಬ್ಬರ ತಾಯಿಮಕ್ಕಳ ಬಾಂಧವ್ಯ ಅಂದಿಗೆ ತೀರಿತೆಂದು ಇಬ್ಬರೂ ತಿಳಿದುಕೊಂಡರು. ಮನೆಯಲ್ಲಿ ಇದ್ದರೆ, ಯಾರಿಗೂ ಮನಶ್ಶಾಂತಿ ಇರುವುದಿಲ್ಲವೆಂದು ಅರಿತ ಲೀಲಾವತಿ, ತಾನು ಕೆಲಸಕ್ಕೆ ಸೇರಿಕೊಳ್ಳುವ ಆಶಯನ್ನು ತಂದೆಯೊಡನೆ ವ್ಯಕ್ತಪಡಿಸಿದಳು. ಮಗಳಿಗೆ ಎಲ್ಲ ರೀತಿಯಲ್ಲಿ ಸ್ವಾತಂತ್ರ್ಯ ಕೊಟ್ಟಿದ್ದ ವಿಶ್ವನಾಥರಾಯರು— ಲೀಲಾವತಿ ಕೆಲಸಕ್ಕೆ ಸೇರಿಕೊಳ್ಳುವುದರಿಂದ ಮನೆಯಲ್ಲಿ ತಾಯಿಮಕ್ಕಳಿಗೆ ಆಗುವ ಜಗಳ ತಪ್ಪುವುದೆಂದೂ ಆ ಮಾತಿಗೆ ಒಪ್ಪಿದರು. ಲೀಲಾವತಿಯೂ ತನ್ನ ಮಗ ಶ್ಯಾಮಸುಂದರನಿಗಿಂತ, ಯಾವುದರಲ್ಲಿಯೂ ಕಡಮೆ ಇಲ್ಲದುದ ರಿಂದ, ಅವನಂತೆಯೇ ಅವಳೂ ಕಾಲೇಜಿನಲ್ಲಿ ಉಪಾಧ್ಯಾಯಿನಿಯಾಗುವ ವಿಷಯದಲ್ಲಿ, ಅವರಿಗೆ ಹೆಮ್ಮೆಯೇ ಆಯಿತು. ಅಲ್ಲದೆ ಮುಂದೆ ತಮಗೆ

'ಪೆನ್‌ಷನ್'. ಅದರ ಮೇಲೆ ತಾವು ಮಗಳ ಜತೆಯಲ್ಲಿಯೇ ಇರಲು ಮನಸ್ಸು ಮಾಡಿದ್ದುದರಿಂದ, ಮಗಳಿಗೆ ಎಲ್ಲ ರೀತಿಯಲ್ಲಿ ನೆರವಾದರು. ಅವರಿಗೆ ಮುಂದಿನ ವರ್ಷ 'ರಿಟೈರ್' ಆಗಲಿದ್ದುದರಿಂದ ವಿಶ್ರಾಂತಿ ದೊರೆತೊಡನೆಯೇ, ಮೈಸೂರಿನಲ್ಲಿ ಬಂದು ನೆಲೆಸಲು ಅಲ್ಲಿ ಮನೆಯೊಂದನ್ನು ಕೊಂಡುಕೊಳ್ಳುವ ಹಂಚಿಕೆಯಲ್ಲಿ ಇದ್ದರು. ಈ ಬಾರಿ, ಲೀಲಾವತಿ ಮೈಸೂರಿನಲ್ಲಿ ಇರುವಂತೆಯೇ ಅಲ್ಲಿಗೆ ಈ ಸಂದರ್ಭದಲ್ಲಿ ಬರುವುದಾಗಿ ವಿಶ್ವನಾಥರಾಯರು ಹೇಳಿದ್ದರು. ಅವರು ಮೈಸೂರಿಗೆ ಬರುವ ವೇಳೆಗೆ, ತಾನು ಮಡಕೇರಿ ಪ್ರವಾಸವನ್ನು ಮುಗಿಸಿಕೊಂಡು ಬರಬಹುದೆಂದು, ಲೀಲಾವತಿ ಸುಮಿತ್ರೆಯೊಂದಿಗೆ ಹೊರಟಿದ್ದಳು.

ಅಂತೂ ಇಂತೂ ಸುಮಿತ್ರೆಯ ಬಹಳ ಕಾಲದ ಬಯಕೆ ಕಡೆಗೂ ಈಡೇರಿತ್ತು.

ಮಡಕೇರಿಯ ಪ್ರವಾಸ, ಬಯಲು ಸೀಮೆಯ ಹೆಣ್ಣುಗಳಾದ ಲೀಲಾವತಿ ಹಾಗೂ ಹಂಸರಿಗೆ ಹೊಸ ಉತ್ಸಾಹ, ಸಂತೋಷಗಳನ್ನು ತಂದಿತ್ತು. ಅವರಿಗೆ ತಾವೊಂದು ಹೊಸ ಜಗತ್ತಿಗೆ ಕಾಲಿರಿಸುತ್ತಿರುವಂತೆ ಭಾಸವಾಗಿತ್ತು. ಕಾಡುಮೇಡುಗಳ ನಡುವೆ, ಹಳ್ಳತಿಟ್ಟುಗಳಲ್ಲಿ ಒಮ್ಮೆ ಕಂಡು ಮತ್ತೊಮ್ಮೆ ಮಾಯವಾಗುವ ಅಂಕುಡೊಂಕಾದ ರಸ್ತೆ ಕೆಲವೆಡೆಗಳಲ್ಲಿ ಭೀಮಾಕಾರದ ಬೆಟ್ಟದ ನಡುಪಟ್ಟಿಯಂತೆ, ಸರ್ಪಾಕಾರದಲ್ಲಿ ಹರಿದಿತ್ತು. ಮೋಟಾರು ಒಮ್ಮೆ ಬೆಟ್ಟದ ಹೊಟ್ಟೆಯೊಳಗೆ ಕಣ್ಮರೆಯಾದಂತೆ ಕಂಡರೂ, ಇನ್ನು ಕೆಲವು ನಿಮಿಷಗಳಲ್ಲಿ ಬಳಸುದಾರಿಯಲ್ಲಿ ಸುತ್ತಿ ಸುತ್ತಿ, ಏರಿ ಇಳಿದು, ಪರ್ವತಗಳ ಉತ್ತುಂಗ ಶಿಖರಗಳನ್ನು ಹತ್ತಿ, ಹಾದಿಯ ನಾಲ್ಕುನಿಟ್ಟಿನ ನೋಟ ಕಾಣಿಸುತ್ತಿತ್ತು. ಕಣ್ಣಿನ ದೃಷ್ಟಿಹಾಯುವ ತನಕ, ಬೆಟ್ಟಗುಡ್ಡಗಳ ರಮಣೀಯ ದೃಶ್ಯ ದಿಗಂತದ ವರೆಗೆ ಕಾಣಿಸುತ್ತಿತ್ತು. ವೈಶಾಖಮಾಸದ ಪರ್ವತಶ್ರೇಣಿ, ಹಚ್ಚ ಹಸುರಿನ ಹೊದ್ದಿಕೆ ಹೊತ್ತು ಕಣ್ಣಿಗೆ ತಂಪಾಗಿ ಕಾಣಿಸುತ್ತಿತ್ತು : ವನಪ್ರಾಂತ್ಯದಿಂದ ಬರುತ್ತಿದ್ದ ಗಾಳಿಯು ವನಸುಮಗಳ ಸುಗಂಧವನ್ನು ಹೊತ್ತು ಮೈಮನಸ್ಸಿಗೆ ತಂಪೆರೆಯುತ್ತಿತ್ತು. ಬಸ್ಸು ಶಕಟಾಸುರನಂತೆ ದಾರಿಯನ್ನು ನುಂಗಿ, ನುಂಗಿದುದನ್ನು ಜೀರ್ಣಿಸಿಕೊಳ್ಳಲಾಗದೆ, ಅದನ್ನು

ಇನ್ನೊಂದು ಕಡೆಯಿಂದ ಹೊರಹಾಕುತ್ತಾ ಗಡಗಡನೆ ಸದ್ದುಮಾಡುತ್ತಾ ತೀವ್ರಗತಿಯಲ್ಲಿ ಸಾಗಿತ್ತು. ಅನು ಸರಿವಂತೆ ಸುಡುಮೋರೆಯ ಸೂರ್ಯನು ತಣ್ಣಗಾಗುತ್ತಾ ನಡೆದಿದ್ದನು. ಊರು ಹತ್ತಿರ ಬರುತ್ತಿದ್ದಂತೆ ಲೀಲಾವತಿಯ ಉದ್ವೇಗ ಹೆಚ್ಚುತ್ತಾ ಹೋಯಿತು. ನೋಡುತ್ತಿದ್ದಂತೆ ಆಗಸ ಬಣ್ಣಗೆಟ್ಟು ಸಾಯಂಪ್ರಭೆಯ ಹಿತವಾದ ವರ್ಣವಿನ್ಯಾಸಕ್ಕೆ ಆರಂಭವಾಯಿತು. ಮೈಲಿ ಮೈಲಿಗಳಾಚೆ ಗಗನ ಚುಂಬಿಯಾಗಿ ನಿಂತಪರ್ವತ ಪಂಜ್ತಿಯ ಆಚೆ ಸೂರ್ಯನು ಅಸ್ತಮಿಸತೊಡಗಿದ್ದ. ಗಗನ ಪಟ್ಟಕ್ಕೆ ಮರೆಯಾಗಿ ವಿಶ್ವಶಿಲ್ಪಿಯು ಅಜಾಗರೂಕತೆಯಿಂದ ಮೆತ್ತಿದ ಕೆಂಪುಬಣ್ಣದ ಉಂಡೆಯಂತೆ ಸೂರ್ಯನು ಕಾಣಿಸಿಕೊಂಡನು. ಅದರ ಹೊಂಬೆಳಕಿನಲ್ಲಿ ಎಲ್ಲೆಲ್ಲಿಯೂ ಚಿನ್ನದ ಹೊಗೆಯು ಎದ್ದಿತು. ಇನ್ನೊಂದು ಕ್ಷಣದಲ್ಲಿ ಆ ಕೆಂಪಿನ ಉಂಡೆ ಆ ಸ್ಥಳದಿಂದ ಮಾಯವಾಗಿ, ಕೆಂಬೆಳಕಿನ ಮಹಾಪೂರವೇ ಆಗಸವನ್ನು ತುಂಬಿಕೊಂಡಿತು. ಅದು ನಿಮಿಷಾರ್ಧದಲ್ಲಿ ದಟ್ಟಹೊಗೆಯಾಗಿ ಸುತ್ತಲಿನ ಕಪ್ಪಿನಲ್ಲಿ ಕರಗಿಹೋಯಿತು. ಲೀಲಾವತಿ ಈ ಎಲ್ಲ ಚಿತ್ತಾಕರ್ಷಕ ಸೂರ್ಯಾಸ್ತದ ಸಂಭ್ರಮವನ್ನು ಎವೆಯಿಕ್ಕದೆ ನೋಡಿದಳು. ಈ ನಿಸರ್ಗ ಸೌಂದರ್ಯೋಪಾಸನೆಯಿಂದ ಭಗವದ್ದರ್ಶನವಾಗಿ ಅವಳ ಮೈ ರೋಮಾಂಚನಗೊಂಡಿತು. ಹೃದಯದ ಭಾವನೆಗಳು ರಸಾಗ್ನಿಯಲ್ಲಿ ಮುಳುಗೆದ್ದು ಅನಿರ್ವಚನೀಯ ಆನಂದಸಮಾಧಿಯಲ್ಲಿ ಮೈಮರೆಸಿತು. ಮಲೆನಾಡಿನ ಹೃದಯವೆನಿಸಿದ್ದ ಮಡಕೇರಿಗೆ ಬರುತ್ತಿದ್ದಂತೆ ಅವಳು ಭಾವನಾಜೀವಿ ಆಗಲಾರಂಭಿಸಿದ್ದಳು. ಮೈಯೆಲ್ಲ ಕಣ್ಣಾಗಿರಿಸಿಕೊಂಡು ಮಲೆನಾಡಿನ ಪ್ರಕೃತಿ ಸೌಂದರ್ಯವನ್ನು ಮನವಣಿಯ ಆಸ್ವಾದಿಸುತ್ತಲಿದ್ದ ಲೀಲಾವತಿಯನ್ನು ನೋಡಿ ಸುಮಿತ್ರೆ ತನ್ನಲ್ಲಿಯೇ ನಕ್ಕಳು. ಅವಳಿಗೆ ಈ ಎಲ್ಲ ದೃಶ್ಯಗಳು ಹೊಸವಲ್ಲ. ಅವಳು ನಿಸರ್ಗದ ಮಡಿಲಲ್ಲಿ ಹುಟ್ಟಿ, ನಿಸರ್ಗದ ಜೋಗುಳದಲ್ಲಿ ಬೆಳೆದವಳು.

ಇದುವರೆಗೆ ಸುಪ್ತವಾಗಿದ್ದ ವನದೇವಿಯ ಚೇತನ ಈಗ ಜಾಗ್ರತವಾಯಿತೋ ಎಂಬಂತೆ ಕಾಡಿನ ಕಾಜಾಣ, ಕಾಮುಳ್ಳಿ, ಕೋಕಿಲೆ, ಶುಕಪಿಕಗಳ ಮಂಜುಳರವ ಕೇಳಲಾರಂಭಿಸಿತು. ಧರಣಿದೇವಿಯ ಹೃದಯ ತಂತಿ

ಯನ್ನು ಮಿಡಿಯುತ್ತಿರುವಂತೆ ಗೂಡು ಸೇರಲು ಹಿಂದಿರುಗುತ್ತಿದ್ದ ಕಾಡುಹಕ್ಕಿಗಳ ಮಂಗಳ ಆಲಾಪನೆ ನಡೆದಿತ್ತು. ಸುತ್ತಲೂ ಗಭೋ ಎನ್ನುವ ಕತ್ತಲಿನಲ್ಲಿ ಬಸ್ಸು ನಿಶಾಚರರಾದ ವನ್ಯಮೃಗಗಳಿಗೆ ಹೆದರಿಕೆ ಉಂಟುಮಾಡಿರಬೇಕು. ಬಸ್ಸಿನ 'ಹಾರನ್'ನ ರಣಗರ್ಜನೆಯನ್ನು ಕೇಳಿ ಇನ್ನೂ ಹೆದರಿಕೆಯುಂಟಾಗಿರಬೇಕು. ಅಂತಲೇ ಬಸ್ಸು ಹಾಯಿಸುತ್ತಿದ್ದ ಬೆಳಕಿನಲ್ಲಿ ಕಾಡಿನ ಪ್ರಾಣಿಗಳು ದಿಕ್ಕಾಪಾಲಾಗಿ ಓಡುತ್ತಿದ್ದುದು ಒಮ್ಮೊಮ್ಮೆ ಕಾಣಿಸುತ್ತಿತ್ತು. ಹೀಗೆ ಪ್ರಯಾಣ ಸಾಗಿ, ರಾತ್ರಿ ಸುಮಾರು ಏಳರ ವೇಳೆಗೆ ಬಸ್ಸು ಮಡಕೇರಿಯನ್ನು ತಲುಪಿತು. ಬೆಳಕು ಬಾಡುವ ಮುನ್ನ ಊರ. ಸೇರಬೇಕಾಗಿದ್ದ ಬಸ್ಸು ಇಂದು ಕಾರಣಾಂತರಗಳಿಂದ ಒಂದೆರಡು ಗಂಟೆ. ಸಾವಕಾಶವಾಗಿ ಬಂದಿತ್ತು. ಸುಮಿತ್ರೆ ತಾನು ಬರಲಿರುವ ಸುದ್ದಿಯನ್ನು ಅತ್ತೆಮಾವಂದಿರಿಗೆ ತಿಳಿಸಿದ್ದರೂ, ಲೀಲಾವತಿ ಹಾಗೂ ಹಂಸರನ್ನು ಸಾಗಿಸಿಕೊಂಡು ಬರುವ ಗಡಿಬಿಡಿಯಲ್ಲಿ ಇಂಥ ಬಸ್ಸಿಗೆ ಬರುತ್ತೇನೆಂದು ಖಚಿತವಾಗಿ ತಿಳಿಸಲು ಆಗಿರಲಿಲ್ಲ. ಹೀಗಾಗಿ ಬಸ್ಸಿನ ಹತ್ತಿರ ಮನೆಯವರು ಯಾರೂ ಬಂದಿರಲಿಲ್ಲ.

ಬಸ್ಸಿನಲ್ಲಿದ್ದ ಎಲ್ಲ ಪ್ರಯಾಣಿಕರು ಸ್ಟ್ಯಾಂಡಿನಲ್ಲಿ ಇಳಿದುಹೋದರೂ ಮೂವರು ಗೆಳತಿಯರು ಮಾತ್ರ ಮುಂದೇನು ಮಾಡಬೇಕೆಂದು ತೋಚದೆ ಇನ್ನೂ ಬಸ್ಸಿನಲ್ಲಿಯೇ ಕುಳಿತಿದ್ದರು. ಸುಮಿತ್ರೆ ತಾನು ಹಾಸ್ಟೆಲು ಬಿಟ್ಟು ಊರು ಸೇರುತ್ತಿದ್ದುದರಿಂದ ಅವಳು ಹಾಸ್ಟೆಲಿನಲ್ಲಿದ್ದ ತನ್ನ ಎಲ್ಲ ಸಾಮಾನುಗಳನ್ನು ಜತೆಯಲ್ಲಿಯೇ ಸಾಗಿಸಿಕೊಂಡು ಬಂದಿದ್ದಳು. ಅವಳ ಪುಸ್ತಕಗಳು, ಬಟ್ಟೆಬರೆ, ಬ್ಯಾಡ್‌ಮಿಂಟನ್ ರಾಕೆಟುಗಳು, ವೈದ್ಯಕೀಯ ಉಪಕರಣಗಳು, ಅವಳ ಅಲಂಕಾರದ ವಸ್ತುಗಳು ಹೀಗೆ ಅವಳ ಸಮಸ್ತ ಸಂಸಾರವನ್ನೂ ಮಡಕೇರಿಗೆ ಸಾಗಿಸಿದ್ದಳು. ಇದರ ಜತೆಗೆ ಲೀಲಾವತಿ ಹಾಗೂ ಹಂಸರ ಹಾಸಿಗೆಗಳು. ಇವುಗಳನ್ನೆಲ್ಲ ಹೇಗೆ ಮನೆಗೆ ಸಾಗಿಸಿಕೊಂಡು ಬರುವುದು? ಸುಮಿತ್ರೆ ತಾವು ಮನೆಗೆ ಹೊರಟು ಅಲ್ಲಿಂದ ಆಳುಗಳನ್ನು ಕಳುಹಿಸಿಕೊಟ್ಟು ಸಾಮಾನು ತರಿಸಿಕೊಳ್ಳಬೇಕೆಂದು ಆಲೋಚಿಸುತ್ತಿರುವಾಗ, ಬಸ್ ಡ್ರೈವರ್ ಮಡಕೇರಿಯವನೇ ಆಗಿದ್ದುದರಿಂದ, ಬೇರೆ

ಸುಮಿತ್ರೆ ಮಡಕೇರಿಗೆಲ್ಲ ಚಿರಪರಿಚಿತರಾಗಿದ್ದ ಸಾಹುಕಾರ್ ಮಂಜಯ್ಯ ನವರ ಸೊಸೆ ಎಂದೂ ತಿಳಿದೊಡನೆಯೇ ಅವನು ತಾನಾಗಿಯೇ ಬಸ್ಸನ್ನು ಅವರ ಮನೆಯ ತನಕ ತೆಗೆದುಕೊಂಡು ಹೋಗಲು ಒಡಂಬಟ್ಟ. ಇದರಿಂದ ಎಷ್ಟೋ ತೊಂದರೆ ಕಡಮೆಯಾಯಿತು.

ಬಸ್ಸು ಹತ್ತೆಂಟು ನಿಮಿಷಗಳಲ್ಲಿ ಮಂಜಯ್ಯನವರ ಮನೆಯ ಮುಂದೆ ನಿಂತಿತು. ಮನೆಯಲ್ಲಿ ಓದಿಕೊಳ್ಳುತ್ತಿದ್ದ ಪಾರ್ವತಮ್ಮನವರ ಮೊಮ್ಮಕ್ಕಳೂ, ಕೆಲಸದಾಳುಗಳೂ ಬೀದಿಗೆ ಬಂದರು. ಅವರೆಲ್ಲರಿಗೂ ತಮ್ಮ ಮನೆಯ ಮುಂದೆಯೇ ಬಸ್ಸು ನಿಂತುದನ್ನು ಕಂಡು ಆಶ್ಚರ್ಯವಾಗಿತ್ತು. ಅವರು ಯಾರು ಬಂದರೆಂದು ನೋಡಲು ಧಾವಿಸಿಬಂದರು. ಸುಮಿತ್ರೆ ಬಸ್ಸಿನಿಂದ ಇಳಿಯುವುದನ್ನು ಕಂಡು ಹುಡುಗರೆಲ್ಲ "ಚಿಕ್ಕಮ್ಮ ಬಂದರು, ಚಿಕ್ಕಮ್ಮ ಬಂದರು" ಎಂದು ಕೂಗುತ್ತಾ ಸಂತೋಷದಿಂದ ಹಾರಾಡಿದರು. ಅವರ ಕೂಗನ್ನು ಕೇಳಿ ಒಳಗೆ ಕೆಲಸಮಾಡುತ್ತಿದ್ದ ಮಂಗಳೆ, ಪಾರ್ವತಮ್ಮ, ಮಂಜಯ್ಯನವರು ಹೊರಗೆ ಬಂದರು.

ಸುಮಿತ್ರೆಯನ್ನು ಕಂಡೊಡನೆ ಎಲ್ಲರಿಗೂ ಸಂತೋಷಾಶ್ಚರ್ಯಗಳಾದುವು. ಅವಳೊಡನೆ ಹೊಸಬರು ಬಂದಿರುವುದನ್ನು ಕಂಡು ಮನೆಯವರೆಲ್ಲರಿಗೆ ಅವರಾರೆಂದು ತಿಳಿಯುವ ಕೌತುಕ ಉಂಟಾಯಿತು. ಸುಮಿತ್ರೆ ಕೂಡಲೇ ತನ್ನ ಗೆಳತಿಯರನ್ನು ತನ್ನ ಅತ್ತೆ ಮಾವಂದಿರಿಗೆ ಪರಿಚಯಮಾಡಿಕೊಟ್ಟು, ಬಸ್ಸು ತಡವಾಗಿ ಬಂದ ಕಾರಣವನ್ನು ಹೇಳಿದಳು. ಆದರೂ ಸೊಸೆಯ ಮೇಲಣ ವಾತ್ಸಲ್ಯದಿಂದ ಪಾರ್ವತಮ್ಮನವರು,

"ಇಂಥಾ ಬಸ್ಸಿನಲ್ಲಿ ಬರುತ್ತೇವೆಂದು ತಿಳಿಸಿದ್ದರೆ ಸ್ಟ್ಯಾಂಡಿಗೆ ಯಾರನ್ನಾದರೂ ಕಳುಹಿಸುತ್ತಿದ್ದೆ. ನೀನೇಕೆ ಕಾಗದ ಬರೆಯದೆ ಹೋದೆ" ಎಂದು ಆಕ್ಷೇಪಿಸದೆ ಇರಲಿಲ್ಲ. ಅವರ ಆಕ್ಷೇಪಣೆಗೆ ಕಾರಣ, ಸುಮಿತ್ರೆ ತಾನು ತೊಂದರೆಪಟ್ಟುದುದಲ್ಲದೆ ತನ್ನ ಗೆಳತಿಯರಿಗೂ ತೊಂದರೆ ಕೊಟ್ಟಳಲ್ಲ ಎಂಬುದೇ ಆಗಿತ್ತು. ಆದರೆ ಬಸ್ಸಿನವನು ಉದಾರಮನಸ್ಕನಾಗಿ ಮನೆಗೇ ಕರೆತಂದು ಎಲ್ಲ ತೊಂದರೆಯಿಂದ ಪಾರುಮಾಡಿದ್ದ ಅವನಿಗೆ ಕೃತಜ್ಞತೆ ಸೂಚಿಸಿ, ಸಾಮಾನುಗಳೆಲ್ಲವನ್ನೂ ಕೆಳಗಿಳಿಸಿಕೊಂಡರು.

ಪಾರ್ವತಮ್ಮನವರು ಬಂದವರನ್ನು ವಿಶ್ವಾಸದಿಂದ ಬರಮಾಡಿಕೊಂಡು ಅವರನ್ನು ಯೋಗ್ಯರೀತಿಯಲ್ಲಿ ಉಪಚರಿಸಿದರು. ಪರಸ್ಪರ ಕುಶಲಪ್ರಶ್ನೆ-ಕ್ಷೇಮಸಮಾಚಾರ ಎಲ್ಲ ಮುಗಿದ ಮೇಲೆ ಪಾರ್ವತಮ್ಮ, ಸೊಸೆ ಯಾಕೋ ಇಳಿದು ಹೋಗಿರುವುದನ್ನು ಕಂಡು,

" ಯಾಕೆ ಸುಮ್ಮಿ, ಹೀಗೆ ಬಡವಾಗಿದ್ದಿ? ಮೈಯಲ್ಲಿ ಹುಶಾರಿಲ್ಲವೆ ? "—ಎಂದು ಕಳಕಳಿಯಿಂದ ಕೇಳಿದರು.

" ನನಗೇನಾಗಿದೆ? ನಾನು ಮೊದಲಿನಂತೆಯೇ ಇದ್ದೇನಲ್ಲ? "ಎಂದರೂ ಪಾರ್ವತಮ್ಮನ ಮಾತೃಹೃದಯಕ್ಕೆ ಈ ಮಾತು ನಿಜವೆನಿಸಲಿಲ್ಲ.

" ಇದೆಲ್ಲ ಫಸ್ಟ್‌ಕ್ಲಾಸಿನ ಮಹಿಮೆ ಪಾರ್ವತಮ್ಮನೋರೆ " ಎಂದಳು ಲೀಲಾವತಿ. ಇಷ್ಟು ಬೇಗನೆ ಅವಳಿಗೆ ಪಾರ್ವತಮ್ಮನೊಂದಿಗೆ ಸಲಿಗೆ ಬಂದುಹೋಗಿತ್ತು. ಇತರರೊಂದಿಗೆ ಹೊಂದಿಕೊಳ್ಳುವುದರಲ್ಲಿ ಎತ್ತಿದ ಕೈ ಆಗಿದ್ದ ಲೀಲಾವತಿಗೆ ಸೌಜನ್ಯದ ಮೂರ್ತಿಯಾದ ಪಾರ್ವತಮ್ಮನವರು ಅತ್ಯಲ್ಪಕಾಲದಲ್ಲಿಯೇ ಆತ್ಮೀಯರಾಗಿಬಿಟ್ಟಿದ್ದರು.

" ಅಂದರೆ....? " ಲೀಲಾವತಿಯ ಮಾತು ಅರ್ಥವಾಗದೆ ಪಾರ್ವತಮ್ಮನವರು ಕೇಳಿದರು.

" ಪರೀಕ್ಷೇಲಿ ಫಸ್ಟ್‌ಕ್ಲಾಸು ಗಿಟ್ಟಿಸಬೇಕೆಂದು ಹಗಲುರಾತ್ರೆ ನಿದ್ರೆಗೆಟ್ಟು ಓದಿದುದರ ಪ್ರಭಾವ "ಎಂದು ಬಿಡಿಸಿ ಹೇಳಬೇಕಾಯಿತು.

" ಹೌದೇನೇ ಸುಮ್ಮಿ ?! " ಎಂದು ಅಭಿಮಾನಗೊಂಡು ಕೇಳಿದರು ಪಾರ್ವತಮ್ಮ.

" ಎಲ್ಲ ಸುಳ್ಳು ಅತ್ತೆ " ಎಂದು ಬಿಗುಮಾನದಲ್ಲಿ ಹೇಳಿದರೂ, ಸುಮಿತ್ರೆಯ ಮುಖಮಾತ್ರ ನಿಜವನ್ನೇ ವರದಿಮಾಡಿತ್ತು. ಊಟವಾದ ಮೇಲೆ ಪಾರ್ವತಮ್ಮ, ಮಂಗಳ, ಸುಮಿತ್ರೆ, ಲೀಲಾವತಿ, ಹಂಸ—ಇವರುಗಳು ಮಧ್ಯ ರಾತ್ರೆಯ ತನಕ, ಮಾತು ಬೇಸರ ಬರುವ ತನಕ ಸಾವಿರ ವಿಷಯಗಳನ್ನು ಕುರಿತು ಹರಟಿದರು. ಸುಮಿತ್ರೆಯ ತಂದೆ ವೆಂಕಪ್ಪಯ್ಯನವರು ಖಾಯಿಲೆಯಿಂದ ಚೇತರಿಸಿಕೊಂಡ ಸುದ್ದಿ, ಅವರ ದನ ಒಂದನ್ನು ಹುಲಿ ಹಿಡಿದುಕೊಂಡು ಹೋದ ಸುದ್ದಿ, ಮಂಗಳೆಯ ಮುಂಗಡಿಕೂಸು

ಬಿದ್ದು ಗಾಯಮಾಡಿಕೊಂಡ ಸಂಗತಿ, ಸುಮಿತ್ರೆಯ ಗೆಳತಿ ಶೈಲಜೆಯ ಹೆರಿಗೆ, ಬಾಣಂತನವ ಸುದ್ದಿ, ಇಂಥವೇ ಹಲವಾರು ಸುದ್ದಿಗಳನ್ನು ಅತಿ ಆಸಕ್ತಿಯಿಂದ ಕೇಳಿ ತಿಳಿದುಕೊಂಡಳು.

ತಂದೆ ಆರೋಗ್ಯವಾಗಿರುವ ಸುದ್ದಿ ಕೇಳಿ ಸುಮಿತ್ರೆಯ ಮುಖವರಳಿತು. ಆವರೆ ತುಂಬಿದ್ದ ಸೀತೆ ದನವನ್ನು ಹೆಬ್ಬುಲಿ ಹಿಡಿದುಕೊಂಡು ಹೋದುದನ್ನು ಕೇಳಿ ಮುಖ ಕಪ್ಪಿಟ್ಟಿತು. ಮಲೆನಾಡಿನ ಜೀವನವೇ ಹೀಗೆ. ಮಲೆನಾಡು ಸುಖಸಂಮೃದ್ಧಿಯ ನಾಡೂ ಹೌದು; ದುಃಖದ ಬೀಡೂ ಹೌದು. ಪ್ರಕೃತಿದತ್ತವಾದ ಉತ್ಕೃಷ್ಟವಾದ ಭೂಮಿ. ಸಮೃದ್ಧಿಯಾದ ಮಳೆ. ಎಲ್ಲೆಲ್ಲಿ ನೋಡಿದರೂ ಕಣ್ಣು ಮನಸ್ಸಿಗೆ ತಂಪೆರೆಯುವ ಬೆಳೆ—ಭತ್ತ, ಕಬ್ಬು, ಏಲಕ್ಕಿ, ಕಿತ್ತಳೆ, ಕಾಫಿ. ಇಲ್ಲಿ ಯಾವುದಕ್ಕೂ ಕೊರತೆ ಇಲ್ಲ ಎಂದುಕೊಳ್ಳುತ್ತಿರುವಂತೆಯೇ ಇಲ್ಲಿನ ಜಡಿಮಳೆ, ಜಿಗಣೆಗಳಂತೆ ಆರೋಗ್ಯವನ್ನು ಹೀರಿಬಿಡುವ ರೋಗರುಜಿನಗಳು,—ಇವು ಸಾಲದೆಂಬಂತೆ ಚಿರತೆ, ಕಾಟ, ಹುಲಿ ಮೊದಲಾದ ದುಷ್ಟ ಜಂತುಗಳ ಉಪದ್ರವ—ಮನಸ್ಸನ್ನು ತಲ್ಲಣಗೊಳಿಸುವುವು. ಆದರೆ ಜಗತ್ತಿನ ಜೀವನ ಎಲ್ಲೆಡೆಯಲ್ಲಿಯೂ ಹೀಗೆ. ಒಂದೊಂದು ಕಡೆ ಒಂದೊಂದು ಗಂಡಾಂತರ. ಇವುಗಳಿಗೆ ಹೆದರಿದರೆ ಜೀವನವೆಲ್ಲಿ ?

ಸುಮಿತ್ರೆಯ ಬಲವಂತಕ್ಕೆ ಲೀಲಾವತಿ ಮೂರು ದಿನಗಳ ಕಾಲ ಮಡಕೇರಿಯಲ್ಲಿ ಇದ್ದಳು. ಈ ಮೂರು ದಿನಗಳೂ ಲೀಲಾವತಿಯ ಜೀವನದಲ್ಲಿ ಚಿರಸ್ಮರಣೀಯವಾದ ಸವಿನೆನಪು ಎನ್ನಬೇಕು. ಮನೆಯವರೆಲ್ಲರೂ ಅಪರೂಪವಾಗಿ ಬಂದಿರುವ ಗೆಳತಿಯರ ಉಪಚಾರಕ್ಕೆ ಕೈಕಟ್ಟಿಕೊಂಡು ನಿಂತಿದ್ದರು. ಅವರು ಯಾವುದು ಬಯಸಿದರೂ ಅದು ಅಲ್ಲೇ ಪ್ರತ್ಯಕ್ಷವಾಗುತ್ತಿತ್ತು. ದಿನಕ್ಕೆ ಹತ್ತುಬಾರಿ ಕಾಫಿ ತಿಂಡಿಗಳ ಸಮಾರಾಧನೆಯಾಗುತ್ತಿತ್ತು. ಒಂದರಮೇಲೊಂದರಂತೆ, ವಿರಾಮವಿಲ್ಲದೆ ಮುಂದೆ ಬರುತ್ತಿದ್ದ ತಿಂಡಿತೀರ್ಥ, ಹಣ್ಣುಹಂಪಲುಗಳನ್ನು ಕಂಡು ಲೀಲಾವತಿಗೆ ಹೆದರಿಕೆಯಾಯಿತು. ಅಜೀರ್ಣದ ಭಯದಿಂದಲ್ಲ. ಹೀಗೆ ಮನಸ್ಸಿಗೆ ತಿಂದು ಮೈಸೂರು ಸೇರಿದ ಮೇಲೆ ತಮಗೆ ಕೊಡುವ ಪಡಿತರ ಸಾಲದಾದರೆ ಎನ್ನುವ ಶಂಕೆ. ಅವರ ಮನೆಯ ತಿಂಡಿ—

ಕೇವಲ ಫಲಹಾರವೆನಿಸಿಕೊಳ್ಳುತ್ತಿದ್ದುದು ಲೀಲಾವತಿಯ ಭಾಗಕ್ಕೆ ಊಟ ಪ್ರಾಯವಾಗಿರುತ್ತಿತ್ತು. ಅವಳಿಗೆ ತಿಂದದ್ದು ಅಜೀರ್ಣವಾಗದೆ ಕಾಯಿಲೆ ಬೀಳುವ ಹೆದರಿಕೆಯೂ ಆಯಿತು. ಈ ಹೆದರಿಕೆಯ ಮೂಲವನ್ನು ಅರಿತು ಪಾರ್ವತಮ್ಮನವರು ಅವರಿಬ್ಬರಿಗೆ ಮಲಗಿಕೊಳ್ಳುವಾಗ, ಎಂತಹದೋ ಜೀರ್ಣಶಕ್ತಿಯ ಚೂರ್ಣ ಕೊಡುತ್ತಿದ್ದರು. ಇದರಿಂದ ಹೊಟ್ಟೆಗೆ ಹಾಕಿದುದೆಲ್ಲ ಧ್ವಂಸವಾಗಿ, ರಾತ್ರಿ ಕಣ್ಣುತುಂಬಾ ನಿದ್ರೆ ಬಂದು, ಆರೋಗ್ಯವನ್ನು ಸಮತೂಕದಲ್ಲಿ ಇಟ್ಟಿತ್ತು, ಇದರ ಜತೆಗೆ ತಿರುಗಾಟ ಬೇರೆ. ಸುಮಿತ್ರೆ ಲೀಲಾವತಿ ಹಿಂದಿಟ್ಟುಕೊಂಡು ತಮ್ಮ ಮಾವನವರ ಪ್ಲಾಂಟೇಷನ್ ಎಲ್ಲಾ ಸುತ್ತಿಸಿಕೊಂಡು ಬರುತ್ತಿದ್ದಳು. ಆ ಕಾಡುದಾರಿಯಲ್ಲಿ ಮುಳ್ಳುಕಲ್ಲುಗಳ ಮೇಲೆ ನಡೆದ ಮೇಲೆ ಅವರಿಗೆ ಮಲೆನಾಡಿನ ಜೀವನ ಕೇವಲ ಸುಖಪ್ರಾಯ ಮಾತ್ರವಲ್ಲ ಅಲ್ಲಿ ಕಷ್ಟಬೀಳದ ಹೊರತು ಜೀವನ ಸಾಗದೆಂಬ ಮಾತು ಅನುಭವವಾಯಿತು. ಈ ಬಗೆಯ ಸುತ್ತಾಟಗಳು ನಾಕಾವರಿ ಮಡಕೇರಿಯ ಗೆಳತಿಯರ ಮನೆಗಳು ಇದ್ದೇ ಇರುತ್ತಿದ್ದುವು. ಸುಮಿತ್ರೆ ತನ್ನ ಬಾಲ್ಯದ ಗೆಳತಿ ಶೈಲಜೆಯ ಮನೆಗೂ ಲೀಲಾವತಿ, ಹಂಸರನ್ನು ಕರೆದುಕೊಂಡು ಹೋಗಿ ಅವರ ಪರಿಚಯಮಾಡಿಸಿದಳು. ಅವಳ ಮನೆಯಲ್ಲಿ ಅವಳ ವಿಶ್ವಾಸಕ್ಕೆ ಕಟ್ಟುಬಿದ್ದು ಇವರು ಒಂದ್ಹೊತ್ತಿನ ಫಲಾಹಾರಕ್ಕೆ ನಿಲ್ಲಬೇಕಾಯಿತು.

ಸುಮಿತ್ರೆಗೆ ಲೀಲಾವತಿಯನ್ನು ಮಡಕೇರಿಯಲ್ಲಿ ತನ್ನೊಡನೆ ಕಡೇ ಪಕ್ಷ ತಿಂಗಳಾದರೂ ಇಟ್ಟುಕೊಂಡಿರಬೇಕೆಂಬ ಆಸೆ ಇತ್ತು. ಅದೇ ತಿಂಗಳ ಮಾತು ಹಾಗಿರಲಿ, ಒಂದು ವಾರ ಕೂಡ ಮಡಕೇರಿಯಲ್ಲಿ ಅವಳು ನಿಲ್ಲದೆ ಹೋದಳು. ಮಡಕೇರಿಗೆ ಬಂದ ಮೂರನೆಯ ದಿನವೇ ಮೈಸೂರಿಂದ ವಿಶ್ವನಾಥರಾಯರು ಬಂದು, ಮಗಳು ಮಡಕೇರಿಗೆ ತೆರಳಿರುವ ಸುದ್ದಿಯನ್ನು ಹಾಸ್ಟೆಲಿನ ಆಫೀಸಿನಿಂದ ತಿಳಿದುಕೊಂಡು, ಅಲ್ಲಿನ ವಿಳಾಸಕ್ಕೆ ಕಾಗದ ಬರೆದಿದ್ದರು. ಅದನ್ನು ನೋಡುತ್ತಲೇ ಲೀಲಾವತಿ ಮೈಸೂರಿಗೆ ಹಿಂದಿರುಗಲು ಚಡಪಡಿಸಿದಳು. ಮಡಕೇರಿಗೆ ಬಂದ ಮೇಲೆ ಹಲವಾರು ಕಾರಣಗಳಿಂದ ಲೀಲಾವತಿಯ ಮನಸ್ಸು ತಂದೆಯ ಬಗ್ಗೆ ಚಿಂತಿಸುತ್ತಿತ್ತು. ಪಾರ್ವತಮ್ಮ ಮಂಜಯ್ಯನವರ ಅನುಕೂಲ ದಾಂಪತ್ಯ ಕಂಡು, ತನ್ನ

ತಂದೆ ತಾಯಿಯ ನಡುವೆ ಇದ್ದ ವಿರಸವನ್ನು ನೆನೆದು ವ್ಯಥೆಪಟ್ಟಿದ್ದಳು. ಮಂಜಯ್ಯನವರು ಲೀಲಾವತಿಯನ್ನು ತಮ್ಮ ಮಗಳೆಂಬಂತೆ ಪ್ರೀತಿಯಿಂದ ನೋಡಿಕೊಂಡಿದ್ದರು. ಅವರನ್ನು ಕಂಡಾಗಲೆಲ್ಲಾ ಲೀಲಾವತಿಗೆ ವಿಶ್ವನಾಥರಾಯರ ನೆನಪು ಬಂದುಬಿಡುತ್ತಿತ್ತು. ಹೀಗೆ ಮಡಕೇರಿಯ ಎಲ್ಲ ವೈಭವದ ನಡುವೆ ತಂದೆಯನ್ನು ಜ್ಞಾಪಿಸಿಕೊಂಡು ಅಸುಖಿಯಾಗಿದ್ದ ಲೀಲಾವತಿ ತಂದೆಯ ಪತ್ರನೋಡಿದ ಮಾರನೆಯ ದಿನವೇ ಮೈಸೂರಿಗೆ ಹೊರಡುವ ಸನ್ನಾಹಮಾಡಿದಳು. ಅವಳನ್ನು ಅಷ್ಟು ಬೇಗ ಕಳುಹಿಸಿಕೊಡಲು ಮನೆಯವರು ಯಾರಿಗೂ ಇಷ್ಟವಿರಲಿಲ್ಲ. ಆದರೂ ನಿರ್ವಾಹವಿಲ್ಲದೆ ಕಳುಹಿಸಿಕೊಡಬೇಕಾಯಿತು. ಅವಳು ಹೊರಟುದನ್ನು ಕಂಡು, ಹಂಸಳೂ ಮೈಸೂರಿಗೆ ಹೊರಟು ನಿಂತಳು. ಇವಳನ್ನಾದರೂ ಇನ್ನು ಕೆಲಕಾಲ ಜತೆಯಲ್ಲಿ ಉಳಿಸಿಕೊಳ್ಳಬೇಕೆಂಬ ಸುಮಿತ್ರೆಯ ಆಸೆ ನೆರವೇರಲಿಲ್ಲ. ಅವಳು ಬೇಸರಗೊಂಡು ಹೇಳಿದಳು.

“ ಇಷ್ಟು ಬೇಗ ಹೊರಟುಬಿಡಬೇಕಾದರೆ ನೀವು ಇಲ್ಲಿಗೆ ಬಂದುದಾದರೂ ಏಕೆ? ನೀವು ಇನ್ನು ಒಂದು ವಾರವಾದರೂ ಇದ್ದಿದ್ದರೆ ಚೆನ್ನಾಗಿತ್ತು. ಬಳಿಯಲ್ಲೇ ಇರುವ ನೋಡಬೇಕಾದ ಸ್ಥಳಗಳು—ಸುಬ್ರಹ್ಮಣ್ಯ, ಧರ್ಮಸ್ಥಳ,—ಮಂಗಳೂರುಗಳನ್ನು ನೋಡಿಕೊಂಡು ಬರಬಹುದಾಗಿತ್ತು.” ಎಂದು ಎಷ್ಟೋ ಹೇಳಿ ನೋಡಿದಳು. ಲೀಲಾವತಿ ಪ್ರಯಾಣವನ್ನು ನಿಲ್ಲಿಸಲಿಲ್ಲ. ಇನ್ನೂ ಕೆಲಕಾಲ ತನ್ನ ಜತೆಯಲ್ಲಿ ಇರಬೇಕೆನ್ನುವ ಸುಮಿತ್ರೆಯ ಆಸೆಯನ್ನು ಕೇಳಿ ಲೀಲಾವತಿ ಅವಳನ್ನು ಹಾಸ್ಯಮಾಡಿದಳು.

“ ನಾಲ್ಕು ವರ್ಷಗಳಿಂದ ನಿನ್ನ ಜತೆಯಲ್ಲಿ ಇದ್ದುದು ಸಾಲದೇ? ನಮ್ಮ ಸಹವಾಸ ಸುಖ ಇಲ್ಲಿಗೆ ಸಾಕು. ಇನ್ನು ಮುಂದೆ ‘ನಿಮ್ಮವರ’ ಸಹವಾಸಕ್ಕೆ ಆರಂಭಿಸು.......” ಎಂದಳು.

ಈ ಮಾತು ಕೇಳಿ ಸುಮಿತ್ರೆ ಮುಸಿಮುಸಿಮಾಡುತ್ತಾ ಹೇಳಿದಳು: “ ಲೀಲಾ ನಿನ್ನ ತಮಾಷೆಗೆ ಕೊನೆಯೇ ಇಲ್ಲವೆಂದು ಕಾಣುತ್ತೆ. ನೀನು ಗಂಡುಬೀರಿ ಕಣೆ. ನಿನಗೆ ನಾಚಿಕೆ ಇದ್ದರೆ ಅಲ್ಲವೆ?”

“ ನಾಚುವ ಪ್ರಸಂಗವೇನಿದೆ? ಇರುವ ವಿಷಯ ಇದ್ದಂತೆ ಹೇಳಿದೆ....

ನೀನು ಇಷ್ಟರಲ್ಲಿಯೇ ಗೃಹಸ್ಥಾಶ್ರಮ ಸ್ವೀಕರಿಸಲಿರುವ ವಿಷಯ ಸುಳ್ಳೆ? ಎಲ್ಲರಿಗೂ ತಿಳಿದಿರುವ ಮಾತು ಹೇಳಲು ಏಕೆ ನಾಚಬೇಕು?"

ಈ ಮಾತು ಕೇಳಿ ಸುಮಿತ್ರೆಗೆ ಏನು ಹೇಳಲೂ ತೋಚಲಿಲ್ಲ. ಅವಳಿಗೆ ಈ ವಿಷಯ ಮುಂದುವರಿಸಲು ಮನಸ್ಸಾಗದೆ ಆ ವಿಷಯವನ್ನು ಮರೆಸಲು ನೋಡಿದಳು. ಆಗ ಲೀಲಾವತಿ,

"ನಾವುಗಳು ಆ ಉತ್ಸವಕ್ಕೆ ಇರದಿದ್ದರೂ ಚಿಂತೆ ಇಲ್ಲ. ಇದರಿಂದ ಯಾವ ನಷ್ಟವೂ ಇಲ್ಲ. ನಿಮ್ಮಿಬ್ಬರ ಸಮಾಗಮದಲ್ಲಿ ನಮ್ಮ ಪಾತ್ರವಿಲ್ಲ. ಹೂ ಅರಳಿದೆ, ದುಂಬಿ ಝೇಂಕರಿಸಿ ಬರಲಿದೆ"—ಎಂದಳು.

"ಲೀಲಾ ನೀನು ಒಬ್ಬ ಕವಿಯತ್ರಿ ಯಾಗುತ್ತಿರುವೆ."

"ನನ್ನನ್ನು ಕವಿಯತ್ರಿ ಎನ್ನಲು ನೀನೇ ಸರಿ!"

"ಇನ್ನೇನು ನೀನು ಶೃಂಗಾರ ಕವಿಗಳಂತೆ ಹೂವು....ದುಂಬಿ ಎಂದು ಆರಂಭಿಸಿ ಬಿಟ್ಟದ್ದೀಯೆ...." ಈ ಮಾತು ಕೇಳಿ ಮೂವರೂ ನಕ್ಕರು.

"ಹೋಗಲಿ ಮುಂದೆ ನಿಮ್ಮ ದರ್ಶನ ಭಾಗ್ಯವೆಂದು?" ಸಮಿತ್ರೆ ಕೇಳಿದಳು.

"ನಾನು ಸದ್ಯಕ್ಕೆ ಮೈಸೂರು ಬಿಟ್ಟು ಕದಲುವುದಿಲ್ಲ. ಆ ಕಡೆ ಬಂದಾಗ ಮರೆಯದೆ ಕಾಲೇಜಿನ ಕಡೆ ಬಾ."—ಎಂದಳು ಲೀಲಾವತಿ.

"ದೇವರ ದಯದಿಂದ ಪಾಸಾದರೆ ಮತ್ತೆ ಕಾನ್‌ವೊಕೇಷನ್ ಹೊತ್ತಿಗೆ ಬರುತ್ತೇನೆ—" ಎಂದಳು ಹಂಸ.

"ಕಾನ್‌ವೊಕೇಷನ್ ಹೊತ್ತಿಗೆ ನಮ್ಮ ಸುಮಿತ್ರೆ ಗೃಹಿಣಿಯಾಗಿರುತ್ತಾಳೆ. ಆಗ ಅವಳ ಮನೆಗೆ ನಾವೆಲ್ಲ 'ಒಕ್ಕರಿಸ' ಬಹುದು........ಅಂದ ಹಾಗೆ ಸುಮಿತ್ರೆ ನೀನು ಎಲ್ಲಿ 'ಸೆಟಲ್' ಆಗಬೇಕೂಂತ ಇದ್ದಿ? ನೋಡಮ್ಮ ಮೈಸೂರಿನಲ್ಲಿ ಬಂದಿರೋದಾದ್ರೆ ನಾವಿಬ್ಬರೂ ಒಟ್ಟಿಗೆ ಇನ್ನು ಕೆಲವು ಕಾಲ ಇರಬಹುದು."

"ಏನೂ—ಸಂಸಾರಸ್ಥಳಾದ ಸುಮಿತ್ರೆಯನ್ನ ನಿನ್ನೊಂದಿಗೆ ಹಾಸ್ಟೆಲು ಸೇರಬೇಕೆನ್ನುತ್ತೀಯಾ?" ಎಂದಳು ಹಂಸ.

"ಇಲ್ಲಮ್ಮ ಹಾಗೇನೂ ಇಲ್ಲ. ನನಗೂ ಹಾಸ್ಟೆಲು ಬೇಜಾರಾಗಿದೆ.

ನಮ್ಮ ತಂದೆ ಮೈಸೂರಿನಲ್ಲಿ ಮನೆ ಮಾಡಬೇಕೆಂದು ಇದ್ದಾರೆ. ಅವರು ಒಂಟಿಕೊಪ್ಪಲಿನಲ್ಲಿ ಯಾವುದೋ ಮನೇನ್ನ ನೋಡಿದಾರಂತೆ. ಅದನ್ನೇ ಬಹುಶಃ ಕೊಂಡುಕೊಳ್ಳಬಹುದು. ಹಾಗೇನಾದರೂ ಆದರೆ, ಸುಮಿತ್ರೆ ನಮ್ಮ ಜತೆ 'ಕೋ-ಟೆನೆಂಟ್' ಆಗಿ ಇರಬಹುದಲ್ಲ" ಎಂದಳು ಲೀಲಾವತಿ.

"ಎಲ್ಲ ಆದರೆ ಗೀದರೆ ಕಥೆ ತಾನೆ? ನೋಡಿಕೊಳ್ಳೋಣ. ನಾಳಿನ ಮಾತು ನಾಳೆ." ಎಂದು ಮಾತು ಮುಗಿಸಿದ್ದಳು ಸುಮಿತ್ರೆ.

೯

ಮೈಸೂರಿನಲ್ಲಿ ವಿಶ್ವನಾಥರಾಯರು ಮಗಳಿಗಾಗಿ ಎದುರುನೋಡುತ್ತಿದ್ದರು. ಅವರು ಮೈಸೂರಿಗೆ ಬಂದ ಉದ್ದೇಶ—ಒಂಟಿಕೊಪ್ಪಲಿನಲ್ಲಿ ಯಾವುದೋ ಒಂದು ಮನೆ ಕ್ರಯಕ್ಕಿದೆ ಎಂದು ಅವರ ಗೆಳೆಯರೊಬ್ಬರು ತಿಳಿಸಿದ್ದ ಮೇರೆಗೆ, ಅದು ತಮ್ಮ ಅನುಕೂಲಕ್ಕೆ ತಕ್ಕಂತೆ ಇದ್ದರೆ ಅದನ್ನು ಕೊಂಡುಕೊಳ್ಳಲು. ಮನೆ ಏನೋ ಎಲ್ಲ ರೀತಿಯಲ್ಲಿ ಪ್ರಶಸ್ತವಾಗಿತ್ತು. ಬಂಗಲೆಯ ಮುಂದುಗಡೆ ವಿಶಾಲವಾದ ಕಾಂಪೌಂಡು. ಅದರ ಹಿಂಬದಿಯಲ್ಲಿ ಎಲ್ಲ ರೀತಿಯಲ್ಲಿ ಸುಸಜ್ಜಿತವಾದ ಒಂದು ಔಟ್ ಹೌಸು, ಅದಕ್ಕೆ ಸೇರಿದ್ದಂತೆ ರಸ್ತೆ ಕಡೆ ಮುಖಮಾಡಿದ್ದ ಒಂದು ಮೋಟಾರು ಷೆಡ್ಡು, ಮನೆಯನ್ನು ಯಾರೋ ಕಂಟ್ರಾಕ್ಟರು ಸ್ವಂತಕ್ಕೆಂದು ಕಟ್ಟಿಸಿಕೊಂಡಿರಬೇಕು. ಯಾಕೆಂದರೆ ಮನೆಯ ಯಾವ ಭಾಗವೂ ನಿರುಪಯೋಗಕ್ಕೆ ಬರದಂತೆ ಕಟ್ಟಲ್ಪಟ್ಟಿತ್ತು. ಮನೆಗೆ ಆವಶ್ಯಕವಾದ ನಲ್ಲಿ, ದೀಪ, ಇದ್ದುದರ ಜತೆಗೆ 'ಹೀಟಿಂಗ್ ಸರ್ಕ್ಯೂಟ್' ಕೂಡ ಇತ್ತು. ವಿಶ್ವನಾಥರಾಯರು ಮನೆಯನ್ನು ತುಂಬಾ ಮೆಚ್ಚಿಕೊಂಡರು. ಒಂಟಿಕೊಪ್ಪಲಿನ ಪ್ರಶಾಂತ ಪ್ರದೇಶದಲ್ಲಿ ಇದ್ದ ಆ ಮನೆ ಅವರ ವಿಶ್ರಾಂತಿ ಜೀವನಕ್ಕೆ ಆದರ್ಶ ಗೃಹವಾಗಿತ್ತು, ಅದರ ಬೆಲೆಯನ್ನು ಅಂದೇ ಕೊಟ್ಟು ತಮ್ಮ ಸ್ವಾಧೀನಕ್ಕೆ ತೆಗೆದುಕೊಳ್ಳುವ ಆಸೆ ಇದ್ದರೂ, ಅದನ್ನೊಮ್ಮೆ ಲೀಲಾವತಿಯೂ ನೋಡಿ ಅವಳ ಅಭಿಪ್ರಾಯ ತಿಳಿಸಲಿ ಎಂದು ಮಗಳಿಗೆ ಕೂಡಲೇ ಹೊರಟು ಬರಲು ಕಾಗದ ಬರೆದಿದ್ದರು. ಲೀಲಾವತಿ ಬಂದೊಡನೆಯೇ ಅವಳನ್ನು ಉಬ್ಬಿನಿಂದ ಕರೆದುಕೊಂಡು ಹೋಗಿ ತಾವು ಕೊಳ್ಳಲಿರುವ ಮನೆಯನ್ನು ತೋರಿಸಿಕೊಂಡು ಬಂದರು. ಲೀಲಾವತಿಗೆ ಮನೆ ಮೆಚ್ಚಿಕೆಯಾಯಿತು. ಅವಳ ಕಾಲೇಜಿಗೆ ಅದೂ ಸಮೀಪದಲ್ಲಿ ಇತ್ತು. ಆದರೆ ಭಗಿನಿ ಸಮಾಜ, ಕಾಸ್ಮಪಾಲಿಟನ್ ಕ್ಲಬ್ ಇವುಗಳಿಂದ ದೂರವಾಗಿತ್ತು—ಮನೆ ಯಾವುದೋ ಒಂದು ದಾಕ್ಷಿಣ್ಯದಿಂದ ವಿಶ್ವನಾಥರಾಯರಿಗೆ ಸಲೀಸಾದ ಕ್ರಯದಲ್ಲಿ ಸಿಕ್ಕಿತ್ತಾದ ಕಾರಣ, ಅದನ್ನು ಕೊಂಡುಕೊಳ್ಳುವ ವಿಷಯದಲ್ಲಿ ತನ್ನ ಒಪ್ಪಿಗೆ ಇತ್ತಳು. ಮಗಳು ಒಪ್ಪಿದುದೇ ತಡ,

ಕ್ರಯಪತ್ರ—ರಿಜಿಸ್ಟ್ರೇಷನ್ ವಗೈರೆ ಕೆಲಸಗಳನ್ನು ಮುಗಿಸಿ, ತಮಗೆ ವಿಶ್ರಾಂತಿ ದೊರೆತು ಮನೆಗೆ ಬಂದಿರುವ ತನಕ ಅದನ್ನು ಬಾಡಿಗೆಗೆ ಕೊಟ್ಟು ಮಗಳೊಡನೆ ಊರಿಗೆ ಹೊರಟರು. ಈ ಬಾರಿ ಕಾಲೇಜು ಆರಂಭವಾದ ಮೇಲೆ ಲೀಲಾವತಿ ಹಾಸ್ಟೆಲು ಸೇರಿಕೊಳ್ಳಲಿಲ್ಲ. ಅವಳಿಗೆ ನಾಲ್ಕೈದು ವರ್ಷಗಳ ಹಾಸ್ಟೆಲು ಜೀವನ ಸಾಕೆನಿಸಿತ್ತು. ಅಲ್ಲದೆ ಅವಳ ಗೆಳತಿಯರೆಲ್ಲ ತಮ್ಮ ವ್ಯಾಸಂಗಗಳನ್ನು ಮುಗಿಸಿಕೊಂಡು, ಎಲ್ಲೆಲ್ಲೋ ಚೆದರಿಬಿಟ್ಟಿದ್ದರು. ಗುರುತುಪರಿಚಿತರಿಲ್ಲದ ಮೇಲೆ ಹಾಸ್ಟೆಲು ಅವಳ ಭಾಗಕ್ಕೆ ಬೇಸರವನ್ನೇ ತಂದಿತ್ತು. ಇದಕ್ಕೆ ತಕ್ಕಂತೆ ಸುಮಿತ್ರೆ, ಲೀಲಾವತಿ ಆಶಿಸಿದ್ದಂತೆ ಮೈಸೂರಿನಲ್ಲಿಯೇ ನೆಲೆಸಲು ನಿಶ್ಚಯಿಸಿದ್ದಳು. ಅವಳ ಗಂಡ ಸದಾಶಿವನಿಗೆ ಮಂಡ್ಯದಲ್ಲಿ ಕೆಲಸವಿದ್ದರೂ, ಅವನಿಗೆ ಯಾಕೋ ಸರಕಾರಿ ಕೆಲಸದಲ್ಲಿ ಅಷ್ಟಾಗಿ ಆಸಕ್ತಿ ಇಲ್ಲದೆ ಅವನು ಮೈಸೂರಿನಲ್ಲಿ ತನ್ನದೇ ಆದ ಒಂದು ಎಲೆಕ್ಟ್ರಿಕಲ್ ವರ್ಕ್‌ಷಾಪ್ ಆರಂಭಮಾಡಿ ಸ್ವತಂತ್ರವಾಗಿ ಇರಲು ನಿಶ್ಚಯಿಸಿದ್ದ. ಸುಮಿತ್ರೆಗೂ ಸದಾಶಿವನ ಆಲೋಚನೆ ಉತ್ತಮವಾಗಿ ತೋರಿತು. ಸದಾಶಿವ ಬಂಡವಾಳಕ್ಕಾಗಿ ಇನ್ನೊಬ್ಬರ ಬಳಿ ಸಾಲಕ್ಕೆ ಹೋಗಬೇಕಿರಲಿಲ್ಲ. ಮಂಜಯ್ಯನವರು ಮಗನ ಸ್ವಂತ ಉದ್ಯಮಕ್ಕೆ ಬೇಕಾಗುವ ಹಣವನ್ನು ಒದಗಿಸಲು ಮುಂದೆ ಬಂದಿದ್ದರು. ಸುಮಿತ್ರೆಗೂ ಅವಳ ನಿರೀಕ್ಷೆಯಂತೆ ಎಂ.ಬಿ.ಬಿ.ಎಸ್. ಪಾಸಾಗಿದ್ದುದರಿಂದ ಅವಳು ತನ್ನದೇ ಆದ 'ಫಾರ್ಮಸಿ' ಆರಂಭಮಾಡಲು ನಿರ್ಧರಿಸಿದ್ದಳು. ಇದರಿಂದ ಅವಳ ಸೇವಾಕಾಂಕ್ಷೆಗೆ ಸದವಕಾಶ ಸಿಕ್ಕಿದಂತೆ ಆಗಿತ್ತು. ತಾನು ಕಲಿತುದನ್ನು ಹತ್ತುಮಂದಿಗೆ ಅನುಕೂಲವಾಗುವಂತೆ ಉಪಯೋಗಿಸಲು ಸಮಯ ಸಿಕ್ಕಿತ್ತು. ಹೀಗಾಗಿ, ಸದಾಶಿವ ಸುಮಿತ್ರೆಯರು ಸರಕಾರಿ ಕೆಲಸಗಳ ವ್ಯಾಮೋಹಕ್ಕೆ ಬಲಿಬೀಳದೆ ಸ್ವತಂತ್ರ ಉದ್ಯಮಗಳಿಗೆ ಕೈಹಾಕಿದ್ದರು. ಈ ಸಮಯದಲ್ಲಿ ಲೀಲಾವತಿ ಹಿಂದೊಮ್ಮೆ ತಮಾಷೆಯಾಗಿ ಹೇಳಿದ್ದ ಮಾತು ಉಪಯೋಗಕ್ಕೆ ಬಂತು. ಸುಮಿತ್ರೆ ಸದಾಶಿವರು ಮೈಸೂರಿನಲ್ಲಿ ಮನೆ ಮಾಡಲು ತಲಾಷು ಮಾಡುತ್ತಿರುವಾಗ, ಲೀಲಾವತಿ ಅವರಿಗೆ ತನ್ನ ಮನೆಯಲ್ಲಿ ಇರಲು ಆಹ್ವಾನವಿತ್ತಳು. ಆ ಮನೆ ಎಲ್ಲ ರೀತಿಯಲ್ಲಿ ಅವರ ಸಂಸಾರಕ್ಕೆ ತಕ್ಕುದಾಗಿತ್ತು.

ಸದ್ಯಕ್ಕೆ ಕಾರಿನ ಷಡ್ಡು ಉಪಯೋಗಕ್ಕೆ ಇಲ್ಲದೆ ಇದ್ದುದರಿಂದ, ಅದನ್ನೇ ಫಾರ್ಮಸಿಯಾಗಿ ಪರಿವರ್ತಿಸಿ, ಮನೆಯ ಮುಂದೆಯೇ ತನ್ನ ಔಷಧಾಲಯ ವನ್ನು 'ಶಾರದಾ ಫಾರ್ಮಸಿ' ಎಂಬ ಹೆಸರಿನಿಂದ ಆರಂಭಿಸಿಯೇ ಬಿಟ್ಟಳು. ತನ್ನನ್ನು ಈ ಸ್ಥಿತಿಗೆ ತಂದ ತಾಯಿ ಸಮಾನಳಾಗಿದ್ದ ಶಾರ ದೆಯ ಅಂಕಿತದಲ್ಲಿ ಔಷಧಾಲಯ ಆರಂಭಿಸಿದ್ದಳು. ಸದಾಶಿವನೂ— ಅವರಿವರ ಮೇಲೆ ಪ್ರಭಾವ ಬೀರಿ ಸಯ್ಯಾಜಿರಾವ್ ರೋಡ್‌ನಲ್ಲಿ ಒಂದು ಅಂಗಡಿಯನ್ನು ಬಾಡಿಗೆಗೆ ದೊರಕಿಸಿಕೊಂಡು, ಬೊಂಬಾಯಿ ಮದರಾಸು ಗಳಿಂದ, ಅಂಗಡಿಗೆ ಬೇಕಾದ ಸಾಮಾನುಗಳನ್ನು ಕ್ಕೊಂಡು ತಂದು ವ್ಯಾಪಾ ರಕ್ಕೆ ಆರಂಭಿಸಿದ. ಇದರ ಜತೆಗೆ ಎಲೆಕ್ಟ್ರಿಕಲ್ ಕಂಟ್ರ್ಯಾಕ್ಟ್‌ಗಳನ್ನು ನೋಡಿಕೊಳ್ಳತೊಡಗಿ, ತನ್ನ ವರಮಾನವನ್ನು ದ್ವಿಗುಣಗೊಳಿಸಿಕೊಂಡ. ಸುಮಿತ್ರೆ ಸದಾಶಿವರು ಸಂಸಾರ ಹೂಡಿದ ಮೇಲೆ ಲೀಲಾವತಿಯೇಕೆ ಹಾಸ್ಟೆ ಲಿನ ಊಟ ತಿಂದುಕೊಂಡಿರಬೇಕೆಂದು, ಸುಮಿತ್ರೆ ಲೀಲಾವತಿಯನ್ನು ತನ್ನ ಮನೆಯಲ್ಲಿಯೇ ಇರಲು ಹೇಳಿದಳು. ಸುಮಿತ್ರೆಯ ಸ್ನೇಹ ನಿರ್ಮ ಲಾಂತಃಕರಣಗಳಿಗೆ ಕಟ್ಟುಬಿದ್ದು, ಹಾಸ್ಟೆಲ್ ವಾಸದಿಂದ ಬೇಸರ ಗೊಂಡಿದ್ದ ಲೀಲಾವತಿ ಅವರ ಮನೆಯಲ್ಲಿಯೇ ಊಟಮಾಡಿಕೊಂಡಿರಲು ಒಪ್ಪಿದಳು. ಅವಳು ತನ್ನ ಉಪಯೋಗಕ್ಕೆಂದು ಬಂಗಲೆಯ ಕೋಣೆ ಯೊಂದನ್ನು ತೆರವಾಗಿ ಉಳಿಸಿಕೊಂಡು, ಉಳಿದೆಲ್ಲ ಭಾಗವನ್ನು ಯಾರೋ ಸರಕಾರಿ ಅಧಿಕಾರಿಗಳೊಬ್ಬರಿಗೆ ಬಾಡಿಗೆಗೆ ಕೊಟ್ಟಿದ್ದಳು. ಇಬ್ಬರಿಗೆ ಆ ಮನೆ ತುಂಬಾ ದೊಡ್ಡದಾಯಿತೆಂದು—ಸುಮಿತ್ರೆ ಸದಾಶಿವರು ಔಟ್‌ಹೌಸಿ ನಲ್ಲಿ ಬಾಡಿಗೆಗೆ ತೆಗೆದುಕೊಂಡಿದ್ದರು. ಲೀಲಾವತಿ ಸುಮಿತ್ರೆಯ ಮನೆ ಯವಳೇ ಆಗಿಬಿಟ್ಟಿದ್ದುದರಿಂದ ಅವರು ಬಾಡಿಗೆ ಬಂದಿರುವವರು ಎನ್ನುವ ಭಾವನೆ ಅವಳಿಗೆ ಬರಲೇ ಇಲ್ಲ. ಸುಮಿತ್ರೆಯ ಮನೆಯಲ್ಲಿ ಲೀಲಾವತಿಗೆ ಅಷ್ಟು ಸ್ವಾತಂತ್ರ್ಯವಿತ್ತು. ಸುಮಿತ್ರೆ ಅಡಿಗೆಗೆ, ಹಾಗೂ ತಮ್ಮ ಸಂಸಾ ರಕ್ಕೆ ಬೇಕಾಗುವ ಸಾಮಾನುಗಳನ್ನು ತಂದುಕೊಡಲು ನಾರಾಯಣ ಎನ್ನುವ ಹುಡುಗನನ್ನು ಗೊತ್ತುಮಾಡಿದ್ದಳು. ಅವನು ಲೀಲಾವತಿಯ ಕಾಲೇಜಿನ ವೇಳೆಗೆ ಅಡಿಗೆ ತಯಾರಿಸುತ್ತಿದ್ದುದರಿಂದ, ಊಟಮಾಡಿ ಕಾಲೇಜಿಗೆ

ಹೊರಟುಹೋಗುತ್ತಿದ್ದ ಲೀಲಾವತಿ ಮತ್ತೆ ಸಂಜೆಗೇ ಮನೆಗೆ ಹಿಂದಿರ ಗುತ್ತಿದ್ದುದು. ಅದೂ ಅಲ್ಪವಿರಾಮಕ್ಕಾಗಿ, ಅನಂತರ ಫಲಹಾರಮಾಡಿ ಟೆನಿಸ್ ರಾಕೆಟ್ ಹಿಡಿದು ಕಾಸ್ಮೊಪಾಲಿಟನ್ ಕ್ಲಬ್ಬಿಗೆ ಹೊರಟಳೆಂದರೆ ಮನೆ ಸೇರುತ್ತಿದ್ದುದು ಏಳೂವರೆಗೆ. ಅನಂತರ ಊಟ. ಸುಮಿತ್ರೆ ಸದಾ ಶಿವರೊಡನೆ ಕೆಲವು ತಾಸು ಹರಟೆ, ಇದಾದ ಮೇಲೆ ಹತ್ತುಗಂಟೆಗೆ ಓದುತ್ತಾ ಕುಳಿತಳೆಂದರೆ ಹನ್ನೆರಡರ ತನಕ ಏಳುತ್ತಿರಲಿಲ್ಲ. ಒಮ್ಮೊಮ್ಮೆ ಅವಳ ವ್ಯಾಸಂಗ ಒಂದು ಎರಡುಗಂಟೆಗಳ ತನಕ ಸಾಗುತ್ತಿತ್ತು. ಆಮೇಲೆ ಮಲಗಿ ಕೊಂಡಳೆಂದರೆ ಬೆಳಿಗ್ಗೆ ಏಳುತ್ತಿದ್ದುದು ಒಂಭತ್ತು ಗಂಟೆಗೆ. ಎದ್ದು ಮುಖ ತೊಳೆದು ಕಾಫಿ ಕುಡಿದು, ಅಂದಿನ ವೃತ್ತಪತ್ರಿಕೆ ಓದಿ, ಸ್ನಾನ ಮುಗಿಸಿ, ಊಟಮಾಡುವ ಹೊತ್ತಿಗೆ ಕಾಲೇಜಿಗೆ ಹೊರಡುವ ವೇಳೆ ಆಗುತ್ತಿತ್ತು. ಹೀಗೆ ಲೀಲಾವತಿಯ ಜೀವನ ಯಂತ್ರದಂತೆ ನಡೆಯುತ್ತಿತ್ತು. ಇಂತಿದ್ದ ಲೀಲಾವತಿಯ ಜೀವನದಲ್ಲಿ ಹಠಾತ್ತನೆ ಒಂದು ಸಂತೋಷದ ವಿಷಯ ಕಾಣಿಸಿಕೊಂಡಿತ್ತು. ವಿಶ್ವನಾಥರಾಯರು ಮಗಳಿಗೆ ಕಾಗದ ಬರೆದು ತಮಗೆ ರಿಟೈರ್ ಆಗುವುದಕ್ಕೆ ಪೂರ್ವಭಾವಿಯಾಗಿ ಒಂಭತ್ತು ತಿಂಗಳು ಪ್ರಿವಿಲೇಜ್ ರಜ ಮಂಜೂರಾಗಿದೆ ಎಂದೂ—ತಾವು ಇಷ್ಟರಲ್ಲಿಯೇ ಮೈಸೂರಿಗೆ ಬಂದುಬಿಡುವುದಾಗಿಯೂ ತಿಳಿಸಿದ್ದರು. ಇದರ ಜತೆಗೆ, ಬಂಗಲೆಯ ಮನೆಯನ್ನು ಆದಷ್ಟು ಬೇಗ ತೆರವುಮಾಡಿಸಿ ಇಟ್ಟಿರಬೇಕೆಂದೂ ತಿಳಿಸಿದ್ದರು. ಬಾಡಿಗೆಗೆ ಇದ್ದವರು ವಿಶ್ವನಾಥರಾಯರ ಪರಿಚಿತರೇ ಆಗಿದ್ದುದರಿಂದ, ಅವರು ಆ ಮನೆಗೆ ಬರುವಾಗಲೇ ಆ ಬಗೆಯ ಒಪ್ಪಂದ ವಾಗಿದ್ದುದರಿಂದ, ವಿಶ್ವನಾಥರಾಯರು ಮೈಸೂರಿಗೆ ಬರುವ ವೇಳೆಗೆ ಮನೆ ಯನ್ನು ತೆರವುಮಾಡಿಕೊಟ್ಟರು. ಲೀಲಾವತಿ ಮನೆಯನ್ನು ಸ್ವಚ್ಛಗೊಳಿಸಿ, ಪರಿಪರಿಯಾಗಿ ಶೃಂಗರಿಸಿ, ತಂದೆಯನ್ನು ಎದುರುಗೊಳ್ಳಲು ಸ್ಟೇಷನ್ನಿಗೆ ಹೋದಳು. ಬಹುಕಾಲದ ಮೇಲೆ ತಂದೆ ಮಗಳನ್ನು ಸೇರಿಕೊಂಡಿದ್ದರು. ಒಂದು ಶುಭದಿನ ಹೊಸಮನೆಯ ಗೃಹಪ್ರವೇಶವೂ ನಡೆಯಿತು. ಮೈಸೂರಿನಲ್ಲಿದ್ದ ಲೀಲಾವತಿಯ ಆಪ್ತೇಷ್ಟರಿಗೆಲ್ಲ ಸೊಗಸಾದ ಭೋಜನ ನೇರ್ಪಟ್ಟಿತ್ತು. ಅಂತೂ ಲೀಲಾವತಿಯ ಒಂಟಿಜೀವನಕ್ಕೆ ಕೊನೆ ಬಂದು,

ಅವಳು ತಂದೆಯೊಡನೆ ಗೃಹಸ್ಥಜೀವನಕ್ಕೆ ಆರಂಭಿಸಿದ್ದಳು. ಈಗ ಲೀಲಾವತಿಯೇ ಮನೆಗೆಲ್ಲ ಯಜಮಾನಿ. ವಿಶ್ವನಾಥರಾಯರು ದುಡಿಯು ವಷ್ಟು ದಿನ ಚೆನ್ನಾಗಿ ದುಡಿದು ಸಂಪಾದಿಸಿ, ಈಗ ವಿಶ್ರಾಂತಿಸುಖ ಅನುಭವಿಸಲು ಮಗಳನ್ನು ಸೇರಿದ್ದರು. ಅವರು ಅಧಿಕಾರದಲ್ಲೇ ಇದ್ದಾಗ ಒಳ್ಳೆಯ ಹೆಸರನ್ನು ಗಳಿಸಿದುಕೊಂಡಿದ್ದರು. ಅವರಿಗೆ ಇನ್ನು ಕೆಲವು ವರ್ಷ "ಎಕ್ಸ್‌ಟೆನ್ಷನ್" ದೊರೆಯುತ್ತಿದ್ದರೂ ಒಳ್ಳೆ ಹೆಸರು ಇರುವಾಗಲೇ ಸರಕಾರದ ಕೊಂಡಿಯಿಂದ ಕಳಚಿಕೊಳ್ಳುವುದೇ ಯೋಗ್ಯವೆಂದು ತಿಳಿದುದ ರಿಂದಲೋ ಅಥವಾ ಮಗಳನ್ನು ಇನ್ನು ಹೆಚ್ಚು ಕಾಲ ಬಿಟ್ಟಿರಲು ಆಗದೆ ಹೋಯಿತೋ ಅಂತೂ ತಾವಾಗಿಯೇ ತಮ್ಮ ಕೆಲಸಕ್ಕೆ ಗೌರವದ ಮುಗಿವು ತಂದುಕೊಂಡು ಮೈಸೂರು ಸೇರಿದ್ದರು. ಅವರ ಪತ್ನಿ ಗಂಗಮ್ಮ ಗಂಡನೊಡನೆ ಮೈಸೂರಿಗೆ ಬರಲಿಚ್ಛಿಸದೆ ಮಗನೊಂದಿಗೆ ಬೆಂಗಳೂರು ಸೇರಿದ್ದರು. ವಿಶ್ವ ನಾಥರಾಯರು ಕೈಯಲ್ಲಿ ಸಾಕಷ್ಟು ಹಣವನ್ನು ಕೂಡಿಸಿದ್ದುದರಿಂದ ಯಾವ ಯೋಚನೆ ಇಲ್ಲದೆ ತಮ್ಮ ಕಡೆಯ ದಿನಗಳನ್ನು ಕಳೆಯಬಹುದಿತ್ತು. ವಿಸ್ತಾರವಾಗಿದ್ದ ಆ ಬಂಗಲೆ ಮನೆಗೆಲ್ಲ ಇಬ್ಬರೇ ಇಬ್ಬರು ವಾಸವಾಗಿದ್ದರು. ಲೀಲಾವತಿ ಮನೆಯ ಎರಡು ಕೋಣೆಯನ್ನು ತನ್ನ ತಂದೆಯ ಡ್ರಾಯಿಂಗ್ ರೂಂ, ಮಲಗುವ ಕೋಣೆಯಾಗಿ ಪರಿವರ್ತಿಸಿದ್ದಳು. ಉಳಿದ ಕೊಠಡಿ ಗಳಲ್ಲಿ ಒಂದನ್ನು ತನ್ನ ಅಭ್ಯಾಸದ ಕೊಠಡಿಯನ್ನಾಗಿಯೂ, ಮತ್ತೊಂದನ್ನು ತನ್ನ ಬಟ್ಟೆಬರೆ ಸಿಂಗಾರದ ಕೊಠಡಿಯನ್ನಾಗಿಯೂ, ಮತ್ತೊಂದನ್ನು ತನ್ನ ಮಲಗುವ ಕೊಠಡಿಯನ್ನಾಗಿ ಮಾಡಿಕೊಂಡಳು. ಮನೆ ಭಣಗುಟ್ಟದೆ ಇರಲೆಂದು ಮನೆಯ ತುಂಬಾ ಮಂಚಗಳು, ಸೋಫ, ಕುರ್ಚಿ, ಟೇಬಲ್ಲು, ನಿಲುಗನ್ನಡಿ, ಹೂ ಕುಂಡಗಳನ್ನು ತುಂಬಿದಳು. ಕಿಟಕಿಗಳಿಗೆ ಬಣ್ಣ ಬಣ್ಣದ ಛೂಲು ತೆರೆಗಳನ್ನು, ಗೋಡೆಗಳಿಗೆಲ್ಲ ಪ್ರಸಿದ್ಧ ಚಿತ್ರಕಾರರ ಅನೇಕ ವರ್ಣ ಚಿತ್ರಗಳನ್ನು ತೂಗುಬಿಟ್ಟಳು. ಮನೆಯ ಕೆಲಸ ನೋಡಿಕೊಳ್ಳಲು ಒಬ್ಬ ಆಳನ್ನೂ, ಅಡಿಗೆಯ ಕೆಲಸ ನೋಡಿಕೊಳ್ಳಲು ಒಬ್ಬ ಅಡಿಗೆಯವಳನ್ನೂ ಗೊತ್ತುಮಾಡಿದಳು. ಅವರಿಗೆ ತಿಂಗಳಿಗೆ ಬರುತ್ತಿದ್ದ ಬಾಡಿಗೆ, ಪೆನ್ಷನ್, ಇದರ ಜೊತೆಗೆ ಪೋಲೀಸರಸೀಪುರದ ಬಳಿಯಿಂದ ವರ್ಷಕ್ಕೆ ಆಗುವಷ್ಟು

ಭತ್ತದ ಫಸಲು—ಇವರಲ್ಲಿ ಇಬ್ಬರ ಸುಖಜೀವನ ನಡೆಯುವುದು ಕಷ್ಟವೇ? ಹೆಚ್ಚಿನ ಖರ್ಚುಗಳಿಗೆ ಹಣಬೇಕಾದರೆ, ಬ್ಯಾಂಕಿನಲ್ಲಿಟ್ಟಿದ್ದ ಹಣ ಉಪಯೋಗಿಸುತ್ತಿದ್ದರು. ಹೀಗೆ ವಿಶ್ವನಾಥರಾಯರಿಗೆ ಅವರು ಬಯಸುತ್ತಿದ್ದ ಪೂರ್ಣವಿಶ್ರಾಂತಿ ಸುಖ ಲಭಿಸಿತ್ತು. ಅವರಿಗೆ ಈಗ ಇದ್ದ ಕೆಲಸವೆಂದರೆ—ಮಗಳೊಡನೆ, ಸುಮಿತ್ರೆ, ಸದಾಶಿವರಾಯರೊಡನೆ ನಡಸುವ ಹರಟೆ; ವೃತ್ತಪತ್ರಿಕೆ, ಅದೂ ಇದೂ ವೇದಾಂತಕ್ಕೆ ಸಂಬಂಧಿಸಿದ ಗ್ರಂಥಪಠಣ, ಸಂಜೆ ಮಗಳೊಡನೆ ವಾಯುಸಂಚಾರ—ಇಲ್ಲವೇ ಕಾಸ್ಮಪಾಲಿಟನ್ ಕ್ಲಬ್ಬಿನಲ್ಲಿ ಇನ್ನಿತರ ಗೆಳೆಯರೊಡನೆ ಕೆಲಕಾಲ ವಿನೋದವಾಗಿ ಹೊತ್ತು ಕಳೆದು ಬರುವುದು. ಹೀಗೆ ಅವರ ವಿಶ್ರಾಂತಿ ಜೀವನ ಕಳೆದಿತ್ತು.

ಇತ್ತ ಸುಮಿತ್ರೆ ಸದಾಶಿವರ ಜೀವನದಲ್ಲಿಯೂ ಒಂದು ಬಗೆಯ ಸಂತೃಪ್ತಿ ಕಾಣಿಸಿಕೊಂಡಿತ್ತು. ಸದಾಶಿವ ಸುಮಿತ್ರೆಯರು ಮದುವೆಯಾದ ನಾಲ್ಕು ವರ್ಷಗಳ ಮೇಲೆ ಸಂಸಾರಹೂಡಿದ್ದರು. ಅಲ್ಲಿಯ ತನಕ ಅವರಿಬ್ಬರ ಪ್ರೇಮ ಉಗ್ರಸಂಯಮದ ತಪಸ್ಸಿನಲ್ಲಿ ಪಕ್ವವಾಗಿತ್ತೆನ್ನಬೇಕು. ಸುಮಿತ್ರೆಯು ವ್ಯಾಸಂಗ ಪೂರೈಸಿದ ಮೇಲೆ ಅವಳು ಸಂಸಾರದ ನೊಗಕ್ಕೆ ಸಂತೋಷದಿಂದ ಹೆಗಲು ಕೊಟ್ಟಿದ್ದಳು. ಇದುವರೆಗೂ ಒಂಟಿಜೀವನದಲ್ಲಿ ದೇಹವನ್ನು ದಂಡಿಸಿದ್ದ ಪ್ರಣಯಿಗಳು ಒಂದಾಗಿದ್ದರು. ಅವರಿಗೆ ಇಷ್ಟು ದಿನಕ್ಕೆ ತಮ್ಮದೆನ್ನುವ ಮನೆ, ತಮ್ಮದೆನ್ನುವ ಸಂಸಾರ ಉಂಟಾಗಿತ್ತು. ಈಗ ಹೊತ್ತು ಹೊತ್ತಿಗೆ ಊಟ, ತಿಂಡಿ, ನಿದ್ರೆಗಳು ಅನಾಯಾಸವಾಗಿ ದೊರೆತು, ಗೃಹ ಸೌಖ್ಯವೇನೆಂಬುದರ ಪೂರ್ಣಾನುಭವವಾಗಿತ್ತು.

ಸದಾಶಿವ ಮೊದಲಿನಿಂದಲೂ ಕ್ರಮವಾದ ಪದ್ಧತಿಗಳನ್ನು ಇಟ್ಟುಕೊಂಡಿದ್ದವನು. ಅದೇ ಅವನು ಮಂಡ್ಯದಲ್ಲಿ ಇದ್ದಷ್ಟು ದಿನ ಅವನ ಆರೋಗ್ಯ ನಿಬುಬೀಳಾಗದಂತೆ ಕಾಯ್ದಿದ್ದುದು. ಅವನು ವಿದ್ಯಾರ್ಥಿ ದೆಸೆಯಲ್ಲಿ ಒಳ್ಳೆ ಫುಟ್‌ಬಾಲ್ ಆಟಗಾರನಾಗಿದ್ದ. ಮದರಾಸಿನ ಇಂಜನಿಯರಿಂಗ್ ಕಾಲೇಜಿನಲ್ಲಿ ಕಲಿಯುತ್ತಿದ್ದಾಗ ಪ್ರತಿ ದಿನ 'ಜಂನೇಷಿಯಂ'ಗೆ ಹೋಗಿ ಒಂದೆರಡು ಗಂಟೆಗಳ ಕಾಲ ವ್ಯಾಯಾಮ ಮಾಡುತ್ತಿದ್ದ. ಇಷ್ಟು ಮಾತ್ರವೇ ಅಲ್ಲದೆ, ಕಾಲೇಜಿನ ಎಲ್ಲ ಕ್ರೀಡಾರಂಗದಲ್ಲಿ ಕಾಣಿಸಿಕೊಳ್ಳುತ್ತಿದ್ದ. ಅವ

ನಿದ್ದಷ್ಟು ವರ್ಷ ಕ್ರೀಡಾರಂಗದಲ್ಲಿ ಅವನೇ ಚಾಂಪಿಯನ್ ಆವನು ಸ್ನೇಹಿತರ ಭಾಗಕ್ಕೆ ಚಾಂಪಿಯನ್ ಶಿವು ಆಗಿಬಿಟ್ಟಿದ್ದ. ಅವನು ಕೆಲಸಕ್ಕೆ ಸೇರಿಕೊಂಡ ಮೇಲೂ ತನ್ನ ವ್ಯಾಯಾಮವನ್ನು ಮಾತ್ರ ಬಿಟ್ಟಿರಲಿಲ್ಲ. ಬಾಲ್ಯದಿಂದಲೂ ಶಿಸ್ತು ಸಂಯಮಗಳಲ್ಲಿ ಬೆಳೆದ ಅವನ ದೇಹ, ಮನಸ್ಸು ಆರೋಗ್ಯವಾಗಿತ್ತು. ಅವನ ದೇಹ ಸದೃಢವಾಗಿದ್ದು, ಶರೀರದ ಮಾಂಸಖಂಡಗಳು ಕಬ್ಬಿಣದಂತೆ ಬಲವಾಗಿ ಇದ್ದುವು. ಅವನು ದೇಹದ ಯಾವ ಸ್ನಾಯುವನ್ನು ಹೇಗೆ ಬೇಕಾದರೆ ಹಾಗೆ ಹುರಿಗೊಳಿಸಿ ನಿಲ್ಲಿಸುತ್ತಿದ್ದ. ಇದರಿಂದಾಗಿ, ಅವನ ಮುಖದಲ್ಲಿ ಆರೋಗ್ಯದ ಕಳೆ ಉಕ್ಕುತ್ತಿದ್ದುದರ ಜತೆಗೆ, ಅಂತರಂಗದ ಚೆಲುವಿನಿಂದ ಚೇತೋಹಾರಿಯಾಗಿತ್ತು.

ಸದಾಶಿವ ಹೇಗೆ ಕ್ರೀಡಾಭಿಮಾನಿಯೋ ಹಾಗೆಯೇ ದೈವಭಕ್ತ. ಅವನು ಬೆಳಗಿನ ಝಾವಕ್ಕೆ ಎದ್ದು, ಒಂದೆರಡು ಯೋಗಾಸನಗಳನ್ನು ಮಾಡಿ, ಅನಂತರ ಸ್ನಾನಮಾಡಿ, ಒಂದು ನೂರು ರಾಮನಾಮ ಜಪ ಬರೆಯದ ಹೊರತು ಆ ದಿನದ ಯಾವ ಕೆಲಸಕ್ಕೂ ಕೈಹಾಕುತ್ತಿರಲಿಲ್ಲ. ಯಾವ ಕೆಲಸ ತಪ್ಪಿದರೂ ರಾಮನಾಮ ಬರೆಯುವುದು ಮಾತ್ರ ತಪ್ಪುತ್ತಿರಲಿಲ್ಲ. ಅವನು ಬಹಿರಂಗದಲ್ಲಿ ತನಗಿರುವ ದೈವಭಕ್ತಿ, ಧರ್ಮಶ್ರದ್ಧೆ ತೋರಿಸಿಕೊಳ್ಳದಿದ್ದರೂ ಅವನ ನಡೆನುಡಿ ಅನುಕರಣೀಯವಾಗಿತ್ತು. ಪ್ರತಿ ಶ್ರೀರಾಮನವಮಿಯ ವೇಳೆಗೆ ವರ್ಷದಿಂದ ಬರೆದಿದ್ದ ರಾಮನಾಮವನ್ನು ಪೂಜಿಸಿ, ಬ್ರಾಹ್ಮಣರಿಗೆ ಸಂತರ್ಪಣೆ ಮಾಡಿ, ಅದನ್ನು ಪುಣ್ಯತೀರ್ಥದಲ್ಲಿ ವಿಸರ್ಜಿಸುತ್ತಿದ್ದ. ಅವನ ಮನೆಯಲ್ಲಿ ಧಾರ್ಮಿಕ ಸಂಬಂಧವಾದ ಹಬ್ಬ ಹರಿದಿನಗಳು ಬಂದಿತೆಂದರೆ ಭಜನೆ, ಸಂಗೀತಗಳು ನಡೆಯುತ್ತಿದ್ದುವು. ಅವನು ಮಂಡ್ಯದಲ್ಲಿ ಇದ್ದಾಗ ಊರಿನಲ್ಲಿ ನಡೆಯುತ್ತಿದ್ದ ರಾಮೋತ್ಸವದಲ್ಲಿ ಅವನೇ ಮುಂದಾಳಾಗಿದ್ದ.

ರಾಮನಾಮ ಬರೆಯುವುದು ಮುಗಿದ ಮೇಲೆ ಅಷ್ಟುಹೊತ್ತಿಗೆ ಸುಮಿತ್ರೆ ಎದ್ದು ಸ್ನಾನಮಾಡಿ, ಕಾಫಿ ತಯಾರಿಸಿ, ಗಂಡನೊಡನೆ ಸೇವಿಸುತ್ತಿದ್ದಳು. ಅನಂತರ ಕೆಲವು ಕಾಲ ಪತ್ರಿಕೆಗಳನ್ನು ಓದಿ, ಕೊಂಚ ಫಲಾಹಾರವನ್ನು ಸ್ವೀಕರಿಸಿ, ಇನ್ನೆರಡು "ಡೋಸ್" ಕಾಫಿ ಹೀರಿ,

ಸದಾಶಿವ ಅಂಗಡಿಗೆ ಹೋದರೆ ಸುಮಿತ್ರೆ ತನ್ನ ಔಷಧಾಲಯಕ್ಕೆ ಹೋಗುತ್ತಿದ್ದಳು.

ಸದಾಶಿವ ಅಂಗಡಿ ಮುಚ್ಚಿಕೊಂಡು ಹನ್ನೆರಡರ ವೇಳೆಗೆ ಮನೆಗೆ ಬರುತ್ತಿದ್ದ. ಆಗ ಸುಮಿತ್ರೆಯು ತನ್ನ ಔಷಧಾಲಯವನ್ನು ಕೆಲಕಾಲ ಮುಚ್ಚಿ ಊಟಕ್ಕೆ ಮನೆಗೆ ಬರುತ್ತಿದ್ದಳು. ಊಟವಾದ ಮೇಲೆ ಒಂದೆರಡು ಗಂಟೆಗಳ ಕಾಲ ವಿಶ್ರಾಂತಿ ಮತ್ತೆ ಮೂರು ಗಂಟೆಯಾಯಿತೆಂದರೆ ಇಬ್ಬರೂ ಫಲಾಹಾರ ಮಾಡಿ ತಮ್ಮ ಕೆಲಸಗಳಿಗೆ ಹೊರಟುಹೋಗುತ್ತಿದ್ದರು. ಮತ್ತೆ ಫಾರ್ಮೆಸಿ ಮುಚ್ಚುತ್ತಿದ್ದುದು ಸದಾಶಿವ ಅಂಗಡಿಯಿಂದ ಬಂದಾಗಲೇ. ಎಷ್ಟೋ ವೇಳೆ ಸದಾಶಿವ ಮನೆಗೆ ಬಂದರೂ ಫಾರ್ಮೆಸಿಯಲ್ಲಿ ಗದ್ದಲವಿದ್ದೇ ಇರುತ್ತಿತ್ತು. ಆಗ ಸದಾಶಿವನೂ ಹೆಂಡತಿಗೆ ನೆರವಾಗುತ್ತಿದ್ದ. ಶನಿವಾರ ಭಾನುವಾರ ಬಂದಿತೆಂದರೆ ಆ ದಂಪತಿಗಳಿಗೆ ಕೆಲವು ಕಾಲ ಬಿಡುವು. ಅಂದು ಮನೆಯಲ್ಲಿ ವಿಶೇಷ ಅಡಿಗೆಯ ತಯಾರಿಕೆ. ಅಂದೆಲ್ಲ ವಿಶ್ರಾಂತಿ. ನಾಟಕ, ಸಿನಿಮ,ಸಂಗೀತ ಇವುಗಳಿಲ್ಲದೆ ಹೋದರೆ ಸಂಜೆ ವಾಯುವಿಹಾರ. ಹೀಗೆ ಅವರ ಜೀವನ ಸಂತೃಪ್ತಿಯಿಂದ ನಡೆದಿತ್ತು. ಇದನ್ನು ವೃದ್ಧಿಪಡಿಸಲೆಂಬಂತೆ ಅವರ ದಾಂಪತ್ಯ ಜೀವನದಲ್ಲಿ ಬಹಳ ಕಾಲದ ಹೊಂಗನಸೊಂದು ನನಸಾಗುವ ಚಿಹ್ನೆಗಳು ತೋರಹತ್ತಿತು.

ಒಂದು ದಿನ ಲೀಲಾವತಿ ತನ್ನ ಕಾಲೇಜಿನ ಯಾವುದೋ ಸುದ್ದಿಯೊಂದನ್ನು ತಿಳಿಸಲು ಸುಮಿತ್ರೆಯ ಮನೆಗೆ ಬಂದಾಗ, ಸುಮಿತ್ರೆ ಅವಳು ನಿರೀಕ್ಷಿಸಿದ್ದಂತೆ ಫಾರ್ಮೆಸಿಯಲ್ಲಿ ಇರದೆ, ಮನೆಯಲ್ಲಿ ಮಲಗಿದ್ದಳು. ಸುಮಿತ್ರೆ ಯಾವುದೋ ಕಾಹಿಲೆಯಿಂದ ಮಲಗಿರಬೇಕೆಂದು ಲೀಲಾವತಿ ಆ ಬಗ್ಗೆ ವಿಚಾರಿಸಿದಳು.

"ಯಾಕೆ ಸುಮಿತ್ರ ಮಲಗಿಕೊಂಡಿದ್ದೀಯ? ಮೈಯಲ್ಲಿ ಹುಶಾರಿಲ್ಲವೆ?"

"ಮೈಯಲ್ಲಿ ಹುಶಾರಿಲ್ಲದೆ ಏನು? ಯಾಕೋ ಕೆಲಸ ಮಾಡುತ್ತಿದ್ದಂತೆ ತಲೆಸುತ್ತಿ ಬಂತು. ಹೀಗೆ ಮೈ ದಣಿಸಿದರೆ ಬಿದ್ದು ಬಿಟ್ಟೇನೆಂದು ಹೆದರಿ ಬಂದು ಮಲಗಿಬಿಟ್ಟೆ."

" ಇನ್ನೇನು ನೀನು ನಿಮಿಷಕಾಲ ಪುರಸತ್ತು ಇಲ್ಲದೆ ಜಗತ್ತಿನ ಕಾಹಿಲೆ ಬಿದ್ದವರೆಲ್ಲರ ಜವಾಬ್ದಾರಿ ನಿನ್ನ ತಲೆಯ ಮೇಲೆ ಬಿದ್ದಿರುವಂತೆ ಕೆಲಸಮಾಡುತ್ತಿ ಅದಕ್ಕೇ ಹೀಗೆ...." ಎಂದು ಗೆಳತಿಯನ್ನು ಟೀಕಿಸಿದಳು. ಸುಮಿತ್ರೆ ತಾನು ರೋಗಿಗಳ ರೋಗವನ್ನು ಗುಣಪಡಿಸುವ ಡಾಕ್ಟರಾದ ಮಾತ್ರಕ್ಕೆ ತನಗೆ ಕಾಹಿಲೆ ಬರುವುದೇ ಇಲ್ಲವೆಂದು ತಿಳಿದಿರುವಳೋ ಏನೋ ಎಂದುಕೊಂಡಳು ಲೀಲಾವತಿ. ಎಷ್ಟೋ ಬಾರಿ ಲೀಲಾವತಿ ಸುಮಿತ್ರೆಯೊಡನೆ ಮಾತನಾಡಲೆಂದು ಫಾರ್ಮಸಿಗೆ ಬಂದಾಗಲೆಲ್ಲ ಹತ್ತು ನಿಮಿಷ ಕಾಲ ವಿರಾಮವಾಗಿ ಕುಳಿತು ಮಾತನಾಡಲು ಆಗದೆ ಹೋಗಿತ್ತು. ಲೀಲಾವತಿ ಬರುತ್ತಿದ್ದುದು ಯಾವಾಗಲೂ ಸುಮಿತ್ರೆಗೆ ಕೈತುಂಬ ಕೆಲಸವಿರುವಾಗಲೇ. ಅವಳು ಬರುವ ವೇಳೆಗೂ ಸುಮಿತ್ರೆಯ ಫಾರ್ಮಸಿ ರೋಗಿಗಳಿಂದ ತುಂಬಿಹೋಗಿರುವುದಕ್ಕೂ ಸರಿಯಾಗಿ ಗಂಟು ಬೀಳುತ್ತಿತ್ತು. ಇಂತಹ ಹೊತ್ತಿನಲ್ಲಿ ಗೆಳತಿ ಎಲ್ಲಿ ಬೇಸರಗೊಳ್ಳುವಳೋ ಎಂದು ಸುಮಿತ್ರೆ ಲೀಲಾವತಿಯೊಡನೆ ನಾಲ್ಕು ಉಪಚಾರದ ಮಾತನಾಡಿ, ಅವಳ ಕೈಗೆ ಆ ದಿನದ ಪೇಪರಿತ್ತು, ತನ್ನ ಕೆಲಸದಲ್ಲಿ ಉದ್ಯುಕ್ತಳಾಗುತ್ತಿದ್ದಳು. ಗೆಳತಿ ತನ್ನ ಮೇಲೆ ಸಿಟ್ಟುಮಾಡದಿರಲೆಂದು, ಯಾವ ಮಾಯದಲ್ಲೋ ಬಳಿಯಲ್ಲಿನ ಹೋಟಲಿನಿಂದ ಕಾಫಿ ತರಿಸಿಬಿಡುತ್ತಿದ್ದಳು. ಕಾಫಿ ಮಾತ್ರದಿಂದ ಲೀಲಾವತಿಗೆ ಎಂತಹ ಸಿಟ್ಟಿದ್ದರೂ ಹಾರಿಹೋಗುವುದೆಂಬ ಗುಟ್ಟು ಸುಮಿತ್ರೆಗೆ ತಿಳಿದಿತ್ತು. ಇಷ್ಟಾದರೂ ಒಮ್ಮೊಮ್ಮೆ ಲೀಲಾವತಿ ಸುಮಿತ್ರೆಯ ಮೇಲೆ ರೇಗದೆ ಇರುತ್ತಿರಲಿಲ್ಲ.

" ನಾನು ಇಲ್ಲಿಗೆ ಬಂದದ್ದು ರೋಗಿಗಳ ಸೀನ್‌ಸೇಪ್ ಲೆಕ್ಕಕ್ಕಲ್ಲ, ಪೇಪರು ಓದಲೂ ಅಲ್ಲ, ನಿನ್ನ ಕಾಫಿಗೂ ಅಲ್ಲ— " ಎಂದು ಮುಖ ಗಂಟಿಕ್ಕುತ್ತಿದ್ದಳು.

" ನಾನೇನು ಮಾಡಲಿ ಲೀಲಾ. ನೀನೇ ನೋಡುತ್ತಿರುವೆಯಲ್ಲ— ನನಗೆ ನಿಮಿಷಕಾಲ ಪುರಸತ್ತು ಇದೆ—ಇಲ್ಲವೆಂಬ ವಿಷಯವನ್ನ " ಎಂದು ಸಮಾಧಾನಪಡಿಸುತ್ತಿದ್ದಳು.

ಈ ದಿನ ಸುಮಿತ್ರೆ ತಲೆನೋವೆಂದು ಮಲಗಿಕೊಂಡಾಗ, ಇದಕ್ಕೆ

ಅತಿಯಾದ ಅವಳ ದುಡಿತವೇ ಕಾರಣವೆಂದು ಲೀಲಾವತಿ ಬಗೆದಳು. ಅದು ಅವಳ ತಪ್ಪು ತಿಳಿವಳಿಕೆ. ಸುಮಿತ್ರೆ ಹೇಳಿದಳು

"ನನ್ನ ದುಡಿತಕ್ಕೂ ನನ್ನ ತಲೆನೋವಿಗೂ ಯಾವ ಸಂಬಂಧವೂ ಇಲ್ಲ ಲೀಲಾ. ಅದು ಬಂದಿರುವುದು ಬೇರೆ ಕಾರಣಕ್ಕೆ" ಎಂದಳು ಹುಸಿನಗುತ್ತಾ.

"ಬೇರೆ ಕಾರಣಕ್ಕೆ ಎಂದರೆ...."

"ನೀನೂ ಹೆಂಗಸಾಗಿದ್ದರೆ ನಿನಗೆ ಗೊತ್ತಾಗುತ್ತಿತ್ತು. ನೀನು ಹೆಣ್ಣು ವೇಷದ ಗಂಡು" ಎಂದು ಹಾಸ್ಯ ಮಾಡಿದಳು.

"ನನ್ನನ್ನು ಹೇಗೆ ಬೇಕಾದರೂ ಕರೆ. ನನಗೆ ಸಿಟ್ಟಿಲ್ಲ—ಮುಖ್ಯ ನಿನ್ನದು ಗುಣವಾಗುವ ಕಾಹಿಲೆಯಾದರೆ ಸರಿ."

"ಗುಣವಾಗದೆ ಏನು? ಸಾಮಾನ್ಯವಾದ ತಲೆನೋವು ಅಷ್ಟೆ. ಇದು ಬಂದಿರುವುದು ಒಳ್ಳೆಯದಕ್ಕೇ........"

ತಲೆನೋವು ಬಂದಿರುವುದು ಒಳ್ಳೇಯದಕ್ಕೇ........ಹೌದು 'ಆಲ್ ಫಾರ್ ದಿ ಗುಡ್' ಅನ್ನೋ ಹಾಗೆ........"

"ನಿನಗೆ ತಿಳಿಯುವುದಿಲ್ಲ ಲೀಲಾ. ನೀನು ನನ್ನ ಹಾಗೆಯೇ ಮದುವೆಯಾಗಿದ್ದರೆ ಆಗ ತಿಳಿಯುತ್ತಿತ್ತು, ಈ ತಲೆನೋವಿನ ಮರ್ಮ."

"ಆಹಾ....ಏನು ಸುಖ, ಇದು ಏನು ಸುಖ—

"ಮನುಜ ಶರೀರವಿದೇನು ಸುಖಾ!" ಎಂದು ಹಾಸ್ಯ ಮಿಶ್ರಿತ ಧ್ವನಿಯಲ್ಲಿ ಹಾಡಲಾರಂಭಿಸಿದಳು. ಈ ಹಾಡು—ವ್ಯಂಗ್ಯೋಕ್ತಿ ಎಲ್ಲವೂ ಸುಮಿತ್ರೆಗೆ ಪ್ರಿಯವೇ ಆಯಿತು. ಅವಳು ಲೀಲಾವತಿಯ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಪ್ರೀತಿಯಿಂದ ಹಿಸುಕುತ್ತಾ ಸಂಕೋಚದಿಂದ ಹೇಳಿದಳು.

"ಲೀಲೂ ನಿನ್ನ ಬಾಯಿಗೆ ಸಕ್ಕರೆ ಬೀಳುತ್ತೆ."

"ಏಕೆ?"

"ಐ ಯಾಮ್ ಎ ಮದರ್[ನಾನು ಒಬ್ಬ ತಾಯಿಯಾಗಲಿದ್ದೇನೆ]"

ಈ ಮಾತು ಕೇಳಿ ಲೀಲಾವತಿ ಎಲೆಕ್ಟ್ರಿಕ್ ಶಾಕ್ ಹೊಡೆದಂತೆ

ನೆಟ್ಟಗೆ ಕುಳಿತು "ಓ" ಎಂದು ಉದ್ಗಾರ ತೆಗೆದಳು. ಅವಳಿಗೆ ಸುಮಿತ್ರೆಯ ಮಾತು ತುಂಬಾ ಚಕಿತಗೊಳಿಸಿತ್ತು. ಸುಮಿತ್ರೆಯ ಬಾಯಿಂದ ಈ ಮಾತನ್ನು ಅವಳು ಅಷ್ಟು ಬೇಗ ನಿರೀಕ್ಷಿಸಿ ಇರಲಿಲ್ಲ. ಅವಳು ವಿಸ್ಮಯಗೊಂಡು ಸುಮಿತ್ರೆಯನ್ನೊಮ್ಮೆ ದುರದುರನೆ ನೋಡಿ ತನ್ನಲ್ಲೆ ಗೊಣಗಿಕೊಂಡಳು.

"ಓ! ಯು ಆರ್ ಎ ಮದರ್....ಆಲ್‌ರೆಡಿ ಎ ಮದರ್ (ಓ! ನೀನು ತಾಯಿ ಇಷ್ಟು ಬೇಗನೆ ತಾಯಿ)" ಈ ಮಾತು ಸುಮಿತ್ರೆಯ ಕಿವಿ ಸೇರಲಿಲ್ಲ. ಅವಳು ತಾನು ಆಗಷ್ಟೇ ಹೇಳಿದ ಮಾತಿನ ಮಾಧುರ್ಯವನ್ನು ಸವಿಯುತ್ತಾ ಕಣ್ಣುಮುಚ್ಚಿ ಮಲಗಿದ್ದಳು. ಲೀಲಾವತಿ ತನ್ನ ಮಾತಿನಿಂದ ವಿಸ್ಮಯ ವ್ಯಕ್ತಪಡಿಸಿದರೂ, ಅವಳು ಅದನ್ನು ಕೇಳಿ ಸಂತೋಷಪಡಿಸುವಳೆಂದು ಸುಮಿತ್ರೆ ಭಾವಿಸಿದ್ದಳು. ಆದರೆ ಲೀಲಾವತಿಯ ಬಾಯಿಂದ ಯಾವ ಬಗೆಯ ಸಂತೋಷದ ಮಾತೂ ಬರದೆ ಇರುವುದನ್ನು ಕಂಡು— ಪ್ರಶ್ನಾರ್ಥಕ ದೃಷ್ಟಿಯಿಂದ ಲೀಲಾವತಿಯನ್ನು ನೋಡಿದಳು. ಲೀಲಾವತಿ ಅದಕ್ಕೆ ಉತ್ತರವೆಂಬಂತೆ ಗಂಭೀರವಾಗಿ ಹೇಳಿದಳು—

"ಅಲ್ಲಿ ಸುಮಿತ್ರೆ....ನೀನು ಸಂಸಾರ ಹೂಡಿ ಇನ್ನೂ ಆರು ತಿಂಗಳು ಆಗಿಲ್ಲ. ಇಷ್ಟು ಬೇಗನೆ ನೀನು ತಾಯಿಯಾಗಿ ಬಿಟ್ಟಿರುವೆಯಲ್ಲ ಇದಕ್ಕಿಂತ ಆಶ್ಚರ್ಯ ಬೇಕೆ?"

"ಇದರಲ್ಲಿ ಏನು ವಿಶೇಷವಿದೆ ಎಂದು ಆಶ್ಚರ್ಯಪಡಬೇಕು?"

"ವಿಶೇಷವೆ? ಯು ಬೀಯಿಂಗ್ ಆನ್ ಎಜುಕೇಟೆಡ್ ಲೇಡಿ; ದಟ್ ಟೂ ಎ ಡಾಕ್ಟರ್, ಟು ಹ್ಯಾವ್ ಎ ಬೇಬಿ ಸೋ ಸೂನ್. ಟುಬಿ ಫ್ರಾಂಕ್ ಐ ಯಾಮ್ ರಿಯಲಿ ಆಷೇಮ್ಡ್ ಆಫ್ ಯು. (ನೀನು ವಿದ್ಯಾವತಿಯೂ ಡಾಕ್ಟರೂ ಆಗಿದ್ದು ಇಷ್ಟು ಬೇಗನೇ ತಾಯಿಯಾಗುವುದೆಂದರೆ ಇದನ್ನು ಕೇಳಿಯೇ ನನಗೆ ಅವಮಾನ)"—ಎಂದಳು ಕಳೆಗುಂದಿದ ಮುಖಮಾಡಿ.

"ನಿನಗೆ ಅವಮಾನವೆ? ಏಕೆ ಅವಮಾನವಾಗಬೇಕು?"

"ಇನ್ನೇನು?....ನೀನು ಎಲ್ಲ ವಿಷಯ ತಿಳಿದವಳಾಗಿದ್ದೂ, ಇಷ್ಟು

ಬೇಗ ತಾಯಿಯ ಪಟ್ಟ ಕಟ್ಟಿಕೊಂಡಿದ್ದೀಯಲ್ಲ. ಇನ್ನೂ ನಾಲ್ಕಾರು ವರ್ಷ ತಡೆದಿದ್ದರೆ ಏನು ನಷ್ಟವಾಗುತ್ತಿತ್ತು ?"

"ನಾಲ್ಕು ವರ್ಷ ತಡೆಯುವುದು? ಹಾಗೆಂದರೆ ಏನೆಂದು ತಿಳಿದಿರುವೆ ಲೀಲಾ? ನಾಲ್ಕು ವರ್ಷ ತಡೆಯುವುದೂ ಬಿಡುವುದು ಎಲ್ಲ ಯಾರ ಇಚ್ಛೆ!"

"ಇವೇಗ ಇನ್ನೂ ಚೆನ್ನಾಯಿತು! ನೀನು ಇಷ್ಟೆಲ್ಲ ಕಾಲೇಜಿನಲ್ಲಿ ಓದಿ ಡಾಕ್ಟರಾಗಿರುವುದು ಸಾರ್ಥಕವಾಯಿತು. ಅಲ್ಲ ಸುಮಿತ್ರೆ, ಹಳ್ಳಿ ಹಳ್ಳಿಗಮಾರರು ಹೇಳುವಂತೆ ನೀನೂ ಹೇಳುತ್ತಿದ್ದೀಯಲ್ಲ—ಇವೆಲ್ಲ ಯಾರ ಇಚ್ಛೆ ಅಂತ...."

ಈ ಮಾತನ್ನು ಕೇಳಿ ಸಿಟ್ಟಾಗುವ ಬದಲು ನಕ್ಕು ಹೇಳಿದಳು ಸುಮಿತ್ರೆ.

"ಲೀಲಾ. ನನ್ನ ಮಾತು ನಿನಗೆ ನಗುಪಾಟಲಾದರೂ ಚಿಂತೆ ಇಲ್ಲ. ಇಲ್ಲಿ ಕೇಳು ಹೆಣ್ಣಾಗಿ ಹುಟ್ಟಿದ ಮೇಲೆ ತಾಯಿಯಾಗುವುದರಲ್ಲಿ ಅವಮಾನವೇನಿದೆ? ಮಕ್ಕಳನ್ನು ಪಡೆಯುವುದು ಬಿಡುವುದು ಎಲ್ಲ ವ್ಯಕ್ತಿಯ ಕೈಯಲ್ಲಿ ಇದೆ ಎಂದು ತಿಳಿದಿರುವೆಯಾ? ಅದು ಸುಳ್ಳು. ದೇವರು ಕೊಡಬೇಕು. ನಾವು ಅನುಭವಿಸಬೇಕು. ಹೌದು ನಿಜ. ಕೃತಕವಾಗಿ ಇಲ್ಲ ನೈಸರ್ಗಿಕವಾಗಿ ನಾವು ಮಕ್ಕಳನ್ನು ಪಡೆಯುವುದನ್ನು ತಡೆಗಟ್ಟಬಹುದು. ಎಲ್ಲಿ—ದೈವ ಪ್ರೇರಣೆ ಇಲ್ಲದೆ ಕೃತಕವಾಗಿ ಮನುಷ್ಯಪ್ರಾಣಿ ಮಗುವನ್ನೊಮ್ಮೆ ಸೃಷ್ಟಿಸಲಿ. ಆಗ ಸಂತಾನಲಾಭ ಮಾನವನ ಇಚ್ಛೆಯನ್ನು ಅನುಸರಿಸದೆಯೋ ಇಲ್ಲವೋ ತಿಳಿಯುತ್ತದೆ. ಇಲ್ಲಿ ಕೇಳು ಲೀಲಾ ಈ ವಿಷಯದಲ್ಲಿ ನಮ್ಮ ಮೆಡಿಕಲ್ ಜರ್ನಲುಗಳು ಏನು ಹೇಳುತ್ತವೆ ಗೊತ್ತೆ? ಶಿಶು ಜನನ ಪ್ರಕೃತಿಯ ಅತ್ಯಂತ ವಿಸ್ಮಯವೂ ಮಹತ್ವಪೂರಿತವೂ ಆದ ಘಟನೆಯಂತೆ. ಗಂಡು ಹೆಣ್ಣಿನ ಮಿಲನದಿಂದ ಪುಷ್ಪೋದಯವಾಗುವುದಕ್ಕಿಂತಲೂ, ಹುಟ್ಟಿದ ಮಗುವಿಗೆ ಅಮೆರಿಕದ ಅಧ್ಯಕ್ಷ ಪದವಿ ಸಿಕ್ಕುವ ಸಂದರ್ಭವು ಹೆಚ್ಚು ಸಂಘಟಿತವೆಂದು ವೈಜ್ಞಾನಿಕರು ಅಭಿಪ್ರಾಯಪಟ್ಟಿರುವಾಗ—ತಾಯಿಯಾಗುವ ವಿಷಯ ಅಲ್ಪದ ಮಾತೆಂದು ತಿಳಿದಿರುವೆಯಾ ?" ಎಂದಳು.

"ಸಂತತಿ ನೀನು ಹೇಳುವಷ್ಟು ಮಹತ್ಪೂರಿತ ಘಟನೆಯಾಗಿದ್ದರೆ ನಮ್ಮ ದೇಶಕ್ಕೆ ಇಷ್ಟು ಬಡತನವಿರುತ್ತಲೇ ಇರಲಿಲ್ಲ. ನಮ್ಮ ಜನಕ್ಕೆ ಮದುವೆಯಾಗಿ ಮಕ್ಕಳನ್ನು ಪಡೆಯುವುದೆಂದರೆ—ಅದಕ್ಕಿಂತಲೂ ಸುಲಭದ ಕೆಲಸ ಇನ್ನೊಂದಿಲ್ಲ." ಎಂದು ನಕ್ಕಳು.

"ಸಂತಾನ ಕಾರ್ಯ ಸಹಜವಾಗಿ ಸರಳವಾಗಿ ಕಂಡ ಮಾತ್ರಕ್ಕೇ ಅದರ ಬೆಲೆ ಕಡಮೆಯಾಯಿತೆ? ನೀನು 'ರೀಡರ್ಸ್ ಡೈಜಸ್ಟ್' ನಲ್ಲಿ ಬಂದ ಒಂದು ಲೇಖನ ಓದಿದ್ದರೆ ಬಹುಶಃ ಇಷ್ಟು ಹಗುರವಾಗಿ ಮಾತನಾಡುತ್ತಿರಲಿಲ್ಲವೆಂದು ತೋರುತ್ತೆ" ಎಂದಳು.

ಸುಮಿತ್ರೆ ಹೇಳಿದ ತೂಕವಾದ, ಪ್ರಮಾಣ ಪೂರ್ವಕವಾದ ಮಾತುಗಳು ಲೀಲಾವತಿಯನ್ನು ವಿಚಾರ ಮಾಡುವಂತೆ ಮಾಡಿದುವು. ಅವಳು ಆಲೋಚಿಸಿದಷ್ಟೇ ಆ ವಿಷಯ ಗಾಢವಾಯಿತು. ಅದು ತನ್ನ ಸಾಮಾನ್ಯ ತಿಳಿವಳಿಕೆಗೆ ಮೀರಿದ ವಿಷಯವೆಂದು ಅನಿಸಿತೋ ಏನೋ. ಆ ವಿಷಯವನ್ನು ಅಲ್ಲಿಗೇ ಬಿಟ್ಟು ಬೇರೆ ಯಾವುದೋ ಮಾತು ತೆಗೆದು ಆ ವಿಷಯವನ್ನು ಮರೆಸಿದಳು.

ಸುಮಿತ್ರೆಗೆ ಏಳು ತಿಂಗಳು ತುಂಬಿದಾಗ ಪಾರ್ವತಮ್ಮನವರಿಗೆ ಸುದ್ದಿ ಹೋಯಿತು. ಅವರು ಸೊಸೆಯನ್ನು ಬಾಣಂತನಕ್ಕೆ ತಮ್ಮ ಮನೆಗೆ ಕರೆತರಲು ಸದಾಶಿವನಿಗೆ ಕಾಗದ ಹಾಕಿದರು. ಅವರಿಗೆ ಸುಮಿತ್ರೆ ಚೊಚ್ಚಲು ಬಸುರಿ, ಮೊದಲನೆಯ ಹೆರಿಗೆ ತಮ್ಮ ಕಣ್ಣಿನ ಮುಂದೆಯೇ ನಡೆಯಲಿ ಎಂದು ಆಸೆ. ಆದರೆ ಸದಾಶಿವನಿಗೆ ಹೆಂಡತಿಯನ್ನು ಮಡಕೇರಿಗೆ ಕಳುಹಿಸಿಕೊಡಲು ಇಷ್ಟವಿರಲಿಲ್ಲ. ಸುಮಿತ್ರೆಗೂ ಮೂರು ತಿಂಗಳ ಕಾಲ ಫಾರ್ಮಸಿ ಮುಚ್ಚಿ ಮಡಕೇರಿ ಯಾತ್ರೆ ಮಾಡುವುದು ಸರಿ ಕಾಣಲಿಲ್ಲ. ಅಲ್ಲದೆ ಹೆರಿಗೆಗೆ ಮೈಸೂರಿನಲ್ಲಿ ಇರುವಷ್ಟು ಅನುಕೂಲಗಳು ಮಡಕೇರಿಯಲ್ಲಿ ಇವೆಯೇ? ಇನ್ನು ತನಗೆ ಯಾರಾದರೂ ನೆರವಾಗಲು ಬಯಸುವುದಾದರೆ ಒಂದೆರಡು ತಿಂಗಳು ಇಲ್ಲಿಗೆ ಬಂದಿದ್ದು ಹೋಗಲಿ—ಎಂದು ಗಂಡನಿಗೆ ಹೇಳಿ ಅದರಂತೆ ಕಾಗದ ಬರೆಸಿದಳು. ಪಾರ್ವತಮ್ಮನವರು ಆ ಕಾಗದ ಕಂಡು, ಅಲ್ಲಿನ ಅಸಂದರ್ಭಗಳನ್ನು ಅರ್ಥಮಾಡಿಕೊಂಡು, ಅವರು ಎಂಟನೆಯ ತಿಂಗಳಲ್ಲೇ

ಮೈಸೂರಿಗೆ ಬಂದರು. ಸುಮಿತ್ರೆ ಕೆಲಸದ ಗಡಿಬಿಡಿಯಲ್ಲಿ ತನಗೆ ಹೆಚ್ಚು ದಣಿವಾಗದೆ ಇರಲೆಂದು ಚೆಲುವಾಂಬಾ ಆಸ್ಪತ್ರೆಯಲ್ಲಿ ಕೆಲಸಮಾಡುತ್ತಿದ್ದ ತನ್ನ ಸಹಾಧ್ಯಾಯಿನಿಯಾಗಿದ್ದ ಒಬ್ಬ ಡಾಕ್ಟರನ್ನು ಅವರ ವಿರಾಮದಲ್ಲಿ ತನ್ನ ಫಾರ್ಮಸಿಗೆ ಬಂದು ಹೋಗಲು ಗೊತ್ತುಪಡಿಸಿ, ಆದಷ್ಟುಮಟ್ಟಿಗೆ ಕೆಲಸದ ಹೊರೆಯಿಂದ ವಿಶ್ರಾಂತಿ ತೆಗೆದುಕೊಂಡಿದ್ದಳು.

ದಿನಗಳು ತುಂಬಿ ಸುಮಿತ್ರೆ ಸುಮುಹೂರ್ತದಲ್ಲಿ ಗಂಡು ಮಗುವನ್ನೇ ಹಡೆದಳು. ಹೆರಿಗೆನೋವು ಕಾಣಿಸಿಕೊಳ್ಳುವ ತನಕ ಮನೆಯಲ್ಲಿಯೇ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದವಳು ನೋವು ಕಾಣಿಸಿಕೊಂಡೊಡನೆಯೇ ಹೆರಿಗೆ ಆಸ್ಪತ್ರೆಗೆ ಹೋದಳು. ಆಸ್ಪತ್ರೆಯಲ್ಲಿ ಹೆರಿಗೆ ಸುಸೂತ್ರವಾಗಿ ನಡೆ ಯಿತು. ಅನಂತರ ಒಂದು ವಾರದ ತನಕ ಅಲ್ಲಿದ್ದು ಮಗುವಿನೊಡನೆ ಮನೆ ಸೇರಿದಳು. ಹತ್ತನೆಯ ದಿನ ಬಾಣಂತಿಗೆ ನಡೆ[illegible] ಶಾಸ್ತ್ರ ಗಳೂ ಚುಟುಕದಲ್ಲಿ ನಡೆದುವು. ಇವುಗಳಲ್ಲಿ ಅಷ್ಟು ಆಸಕ್ತಿಶ್ರದ್ಧೆ[illegible] ಇಲ್ಲದೆ ಇದ್ದರೂ ಹಳೆಯ ಕಾಲದ ಮುತ್ತೈದೆಯಾದ ಪಾರ್ವತಮ್ಮನವರ ಮನಸ್ಸು ನೋಯಿಸಲಾರದೆ ಅವರು ಹೇಳಿದ ಎಲ್ಲ ಕೆಲಸಗಳನ್ನು ಮಾಡಿ ಮುಗಿಸಿದಳು—ಈ ಶಾಸ್ತ್ರಗಳೆಲ್ಲ ನಡೆಯುವಾಗ ಲೀಲಾವತಿಗೆ ಅದೊಂದು ವಿನೋದದ ದೃಶ್ಯ. ಅವಳು ವಿದ್ಯೆ ಕಲಿತು ಡಾಕ್ಟರಾಗಿದ್ದೂ ಹಳೆಯ ಮುತ್ತೈದೆಯಂತೆ ಶಾಸ್ತ್ರವಿಧಿಗನುಗುಣವಾಗಿ ನಡೆದುಕೊಂಡಿದ್ದು ಅವಳಿಗೆ ಮೋಜಿನ ಸಂಗತಿಯಾಗಿತ್ತು. ಅವಳು ಸುಮಿತ್ರೆಯನ್ನು ಆ ಬಗ್ಗೆ ಗೋಳು ಹೊಯ್ದುಕೊಳ್ಳದೆ ಇರಲಿಲ್ಲ.

ಪಾರ್ವತಮ್ಮನವರು ಮಗು ಬಾಣಂತಿಯರಿಗೆ ಮೂರು ತಿಂಗಳು ತುಂಬುವ ತನಕ ಮೈಸೂರಿನಲ್ಲಿ ಇದ್ದು ಅನಂತರ ಮಡಕೇರಿಗೆ ಪ್ರಯಾಣ ಬೆಳೆಸಿದರು.

ಈಗ ಸುಮಿತ್ರೆಯ ಜೀವನದಲ್ಲಿ ಒಂದು ಬಗೆಯ ಪೂರ್ಣತೆ ಕಾಣಿಸಿ ಕೊಂಡಿತ್ತು. ಅವಳ ಮನಸ್ಸು ಸದಾ ಶಾಂತಿಯಿಂದ ತೃಪ್ತಿಯಿಂದ ಕೂಡಿ ರುತ್ತಿತ್ತು. ಕೆಲಸದಲ್ಲಿ ಅವಳಿಗೆ ಹೆಚ್ಚು ಹೆಚ್ಚು ಶ್ರದ್ಧಾಸಕ್ತಿಯುಂಟಾ ಗಿತ್ತು. ಅವಳಿಗೆ ಎಷ್ಟು ದಣಿವಾದರೂ ಮನೆಗೆ ಬಂದು ಮಗುವಿನ ಮುಖ

ನೋಡಿಬಿಟ್ಟರೆ ಅವಳ ಆಯಾಸವೆಲ್ಲ ಪರಿಹಾರವಾಗಿಬಿಡುತ್ತಿತ್ತು. ಮಗುವಿನ ಆರೈಕೆಯಲ್ಲಿ ಸುಮಿತ್ರೆ ಹೆಚ್ಚಿನ ಆಸಕ್ತಿ ತೆಗೆದುಕೊಂಡಿದ್ದರೂ, ಆ ಮಗು ಅತ್ತಾಗ ಆಟವಾಡಿಸುವುದು, ತೂಗಿ ಮಲಗಿಸುವುದು ಎಲ್ಲವನ್ನೂ ಮನೆಯಲ್ಲಿ ಇದ್ದ ಹುಡುಗನೇ ನೋಡಿಕೊಳ್ಳುತ್ತಿದ್ದ. ಮಗುವಿನ ಯಾವ ಕೆಲಸವನ್ನು ಇನ್ನೊಬ್ಬರಿಗೆ ವಹಿಸಿದ್ದರೂ, ತಾಯಿಯಾದವಳು ಮಾಡಬೇಕಾಗಿದ್ದ ಆ ಒಂದು ಕೆಲಸ (ಮಗುವಿಗೆ ಸ್ತನ್ಯಪಾನಮಾಡಿಸುವ ಕೆಲಸವನ್ನು) ತಾನೇ ಇಟ್ಟುಕೊಂಡಿದ್ದಳು. ಇದೂ ಆಧುನಿಕ ಯುವತಿಯಾಗಿದ್ದ ಲೀಲಾವತಿಯ ಗಮನ ಸೆಳೆದು ಅವಳ ಟೀಕೆಗೆ ಒಳಗಾಗದೆ ಇರಲಿಲ್ಲ.

ಒಂದು ದಿನ ಲೀಲಾವತಿ ಸುಮಿತ್ರೆಯರು ಮಾತನಾಡುತ್ತಾ ಕುಳಿತಿದ್ದಾಗ ಮಗುವನ್ನಾಡಿಸುತ್ತಿದ್ದ ಹುಡುಗ, ಮಗುವಿಗೆ ಹಸಿದುದರಿಂದ ಅದನ್ನು ತಾಯಿಯ ಬಳಿಗೆ ತಂದುಬಿಟ್ಟ. ಸುಮಿತ್ರೆ ಮಾತೃ ಸಹಜಪ್ರೇಮದಿಂದ ಮಗುವಿಗೆ ಸ್ತನ್ಯಪಾನ ಮಾಡಿಸಿದಳು. ಇದನ್ನು ನೋಡಿದ ಲೀಲಾವತಿಯ ಹೃದಯದಲ್ಲಿ ಏನೋ ಒಂದು ಮಾತಿಗೆ ನಿಲುಕದ ಅವ್ಯಕ್ತ ಸಂವೇದನೆಯಾಯಿತು. ಅವಳು ಕಸಿವಿಸಿಗೊಂಡು ಮಗು ಹಾಲು ಕುಡಿಯುವುದನ್ನೇ ನೋಡುತ್ತಾ ಕುಳಿತಳು. ಅವಳ ದೃಷ್ಟಿ ಸುಮಿತ್ರೆಯ ಗಮನ ಸೆಳೆದಾಗ ಸುಮಿತ್ರೆ ಸಹಜವಾಗಿಯೆ ನಸುನಕ್ಕಳು. ಆ ನಗುವನ್ನು ಕಂಡು ಸುಮ್ಮನಿರಲಾಗದೆ ಲೀಲಾವತಿ ಹೇಳಿದಳು.

" ಸುಮಿತ್ರಾ, ನೀನು ವಿದ್ಯಾವತಿಯಾಗಿದ್ದರೂ ಹಳ್ಳಿಯ ಹೆಣ್ಣಿನಂತೆ ಮಗುವಿಗೆ ಹಾಲು ಕೊಡುತ್ತಿರುವೆಯಲ್ಲ? "

" ಮಕ್ಕಳಿಗೆ ತಾಯಿಯ ಹಾಲೇ ಶ್ರೇಷ್ಠ. ಮಕ್ಕಳಿಗೆ ಅದು ಅತ್ಯುತ್ತಮ ಆಹಾರ. "

" ಹಾಗಾದರೆ ನಿನ್ನ ಸೌಂದರ್ಯದ ಗತಿ ? "

" ಅಂದರೆ ? "

" ಮಗುವಿಗೆ ಹಾಲುಣಿಸುವುದರಿಂದ ನಿನ್ನ ಅಂಗಸೌಂದರ್ಯ ಕೆಡುವುದಿಲ್ಲವೆ ? " ಎಂದಳು ಅಳುಕುತ್ತ.

" ಹಾಲುಣಿಸಿದರೆ ಸೌಂದರ್ಯಕ್ಕೆ ಕುಂದೆ ? ಹಾಗಾದರೆ ಸೌಂದರ್ಯ

ವೆಂದರೆ ಏನೆಂದು ತಿಳಿದಿರುವೆ? ದೇಹ ಮಾಟವಾಗಿದ್ದ ಮಾತ್ರಕ್ಕೆ ಸುಂದರ
ವಾದೀತೆ? ಸೌಂದರ್ಯ ಅಂತರಂಗದ ಚೆಲುವಲ್ಲದೆ ಕೇವಲ ದೇಹದ ಚೆಲು
ವಾದರೆ ಪಂಚಭೂತಗಳಿಂದಾದ ಈ ದೇಹದ ಅಳಿವಿನೊಡನೆ ಜಗತ್ತಿನ
ಎಲ್ಲ ಚೆಲುವೂ ಅಳಿದುಹೋಗುತ್ತಿತ್ತು. ಆದರೆ ಇಂದು ಜಗತ್ತು ಚೆಲು
ವಿನ ಆಗರವಾಗಿರುವುದು ಬಾಹ್ಯಾಡಂಬರದ ಚೆಲುವಿನಿಂದ ಅಲ್ಲ. ಸತ್ಯವೂ
ಚಿರನೂತನವೂ ಆದ ಅಖಂಡ ಸೌಂದರ್ಯ ಉಳಿದಿರುವುದು ಅಂತರಂಗದ
ಚೆಲುವಿಕೆಯಿಂದ. ಹೀಗಿರುವಲ್ಲಿ ಮಗುವಿಗೆ ಹಾಲು ಉಣಿಸಿದ ಮಾತ್ರಕ್ಕೆ
ಸೌಂದರ್ಯಕ್ಕೆ ಊನ ಬರುವುದೆಂದು ನಾನು ಮಾತೃಕರ್ತವ್ಯದಲ್ಲಿ ಲೋಪ
ಮಾಡಲೇ. ಇಷ್ಟಕ್ಕೂ ಜಗತ್ತಿನ ಎಲ್ಲ ಶಿಶುವೈಜ್ಞಾನಿಕರು ತಾಯಿಯ
ಹಾಲೇ ಮಗುವಿಗೆ ಪರಮೋತ್ಕೃಷ್ಟ ಆಹಾರವೆಂದು ಪರಿಗಣಿಸಿರುವಾಗ
ದೈವದತ್ತವಾದ ಅಮೃತವನ್ನು ಕ್ಷುಲ್ಲಕ ಕಾರಣಕ್ಕಾಗಿ ಹಾಳುಮಾಡಲೇ? ”
ಎಂದಳು ಸುಮಿತ್ರೆ.
ಈ ಮಾತಿಗೆ ಸರಿಯಾದ ಉತ್ತರ ಕೊಡಲಾಗದೆ ಹೋದರೂ ತನ್ನ
ದೃಷ್ಟಿಯನ್ನು ಲೀಲಾವತಿ ಬದಲಿಸಲು ಒಪ್ಪಲಿಲ್ಲ.
“ನನ್ನ ಅಭಿಪ್ರಾಯ ಹೇಳಿದೆ, ಇಷ್ಟರ ಮೇಲೆ ನಿನ್ನ ಇಷ್ಟ, ನೀನುಂಟು
ನಿನ್ನ ಮಗುವುಂಟು ” ಎಂದು ಒರಟು ಉತ್ತರ ಕೊಟ್ಟು ಅಲ್ಲಿಂದ ಕಾಲ್ತೆಗೆ
ದಳು. ಅವಳು ಹೊರಟುಹೋದ ಮೇಲೆ ಆಧುನಿಕ ವಿದ್ಯಾವತಿಯರ
ಪ್ರತಿನಿಧಿಯಂತೆ ಇದ್ದ ಲೀಲಾವತಿಯ ವಿಚಾರಧಾರೆಯನ್ನು ಕಂಡು
ಸುಮಿತ್ರೆ ಪಶ್ಚಾತ್ತಾಪಪಟ್ಟಳು. ಅನೇಕ ವಿದ್ಯಾವತಿಯರು ಲೀಲಾವತಿ
ಯಂತೆ ಆಲೋಚಿಸುವುದರಿಂದಲೇ, ತಾಯಿಮಕ್ಕಳ ನಡುವೆ ಆರಂಭ
ದಿಂದಲೇ ಇರಬೇಕಾಗಿರುವ ಮಧುರ ಸಂಬಂಧ ನಷ್ಟವಾಗಿರುವುದು. ಅನೇಕ
ತಾಯಂದಿರು ಮಕ್ಕಳಿಗೆ ತಾಯಿಯ ಹಾಲಿಲ್ಲದೆ ತೊಂದರೆಪಡಿಸುವುದರ
ಜತೆಗೆ, ಎದೆಯ ಹಾಲು ಎದೆಯಲ್ಲಿಯೇ ಇಂಗಿ ಅನೇಕ ಬಗೆಯ ಕಾಹಿಲೆ
ಗಳಿಗೆ ತುತ್ತಾಗಿರುವರೆಂಬ ಮಾತು ನೆನಪಾಗಿ ಅವಳಿಗೆ ತುಂಬಾ ಪಶ್ಚಾ
ತ್ತಾಪ ಉಂಟಾಯಿತು.

# ೧೦

ವಿಶ್ವನಾಥರಾಯರು ಮೈಸೂರಿಗೆ ಬಂದ ಲಾಗಾಯಿತು, ಕನಕಲಕ್ಷ್ಮಮ್ಮನವರ ಮನೆಯ ಕಡೆ ಅಷ್ಟು ಹೆಚ್ಚಾಗಿ ಹೋಗಿರಲಿಲ್ಲ. ಅವರಿಗೆ ಬಿಡುವು ಇಲ್ಲವೆಂದಲ್ಲ. ಆದರೆ ಮನೆಯಲ್ಲಿ ಕನಕಲಕ್ಷ್ಮಮ್ಮನಾಗಲಿ, ರಾಘವೇಂದ್ರರಾಯರಾಗಲೀ ಇರಲಿಲ್ಲ. ಮನೆಯ ಯಜಮಾನ ಈಗ ಸುಧಾಕರ. ಅವನು ಮುಂಜಾನೆಗೆ ದುಡಿಯಲು ಹೊರಟರೆ ರಾತ್ರಿಯೇ ಮನೆ ಸೇರುತ್ತಿದ್ದುದು. ಹೀಗಾಗಿ ತುಂಬಿದ ಮನೆಯಲ್ಲಿ ಇದ್ದ ಕನಕಲಕ್ಷ್ಮಮ್ಮನವರ ಸಂಸಾರ ಛಿನ್ನಭಿನ್ನವಾಗಿತ್ತು. ದಿವಾಕರನ ಸಂಸಾರ ಒಂದು ಕಡೆ, ಸುಧಾಕರನ ಸಂಸಾರ ಒಂದು ಕಡೆ, ಕನಕಲಕ್ಷ್ಮಮ್ಮನ ಸಂಸಾರ ಒಂದು ಕಡೆ ಹೀಗೆ ಒಡೆದುಹೋಗಿತ್ತು. ಆದರೂ ಎಂದಾದರೊಮ್ಮೆ ಅವರ ಮೊಹಲ್ಲಾದ ಕಡೆ ಹೋಗಿದ್ದಾಗ ಹಾಗೆಯೇ ಮನೆಗೂ ಹೋಗಿ ಎಲ್ಲರ ಯೋಗಕ್ಷೇಮ ವಿಚಾರಿಸಿಕೊಂಡು ಬರುತ್ತಿದ್ದರು. ಎಂದಾದರೂ ಕಾಗದ ಬರೆಯಬೇಕೆನಿಸಿದಾಗ ತಂಗಿಗೊಂದು ಕಾಗದ ಬರೆದು ಅವರ ಯೋಗಕ್ಷೇಮ ತಿಳಿದುಕೊಳ್ಳುತ್ತಿದ್ದರು.

ಒಂದು ದಿನ ಸಂಜೆ ವಿಶ್ವನಾಥರಾಯರಿಗೆ ವಿರಾಮವಿತ್ತು. ಅವರು ಮಗಳೊಂದಿಗೆ ಮಹಾರಾಜಾ ಕಾಲೇಜಿನ ಬಳಿ ನಡೆದ ಟೆನಿಸ್ ಮ್ಯಾಚೊಂದನ್ನು ನೋಡಿಕೊಂಡು, ಬಳಿಯಲ್ಲಿಯೇ ಇದ್ದ ಕಾಸ್ಮಾಪಾಲಿಟನ್ ಕೆಫೆಯಲ್ಲಿ ಕಂಠಪೂರ್ತಿ ಫಲಾಹಾರಮಾಡಿ ಮ್ಯಾಚಿನ ವಿಷಯವನ್ನೇ ಮಾತನಾಡುತ್ತಾ ಜಯನಗರದ ಕಡೆ 'ವಾಕ್' ಹೊರಟರು. ಅಂದು ಲೀಲಾವತಿ ತಾನು ಮ್ಯಾಚಿನಲ್ಲಿ ಗೆದ್ದುದರಿಂದ ಸಂತೋಷದ ಹೆಚ್ಚಳದಲ್ಲಿ ಇದ್ದಳು. ಮಿಕ್ಸೆಡ್ ಡಬ್ಬಲ್ಸಿನಲ್ಲಿ ಅವಳು ತನ್ನ ಎದುರುಪಕ್ಷದವರನ್ನು ೧೦:೪ ಪಾಯಿಂಟುಗಳಿಂದ ಸೋಲಿಸಿದ್ದಳು. ಅದೂ ಯಾವುದೋ ಒಂದು 'ಟೋರ್ನಮೆಂಟಿನ ಸೆಮಿಫೈನಲ್ಸ್' ಮ್ಯಾಚು ಆಗಿದ್ದುದರಿಂದ ಕಾಲೇಜಿನ ವಿದ್ಯಾರ್ಥಿ ವಿದ್ಯಾರ್ಥಿನಿಯರೂ, ಟೆನಿಸ್ ಕ್ರೀಡಾಭಿಮಾನಿಗಳೂ ಬಹಳ ಜನ ಬಂದಿದ್ದರು. ಆಟ ಬಹಳ ಸೊಗಸಾಗಿತ್ತು. ಮೊದಲನೆಯ ರೌಂಡಿನಲ್ಲಿ

ಲೀಲಾವತಿ ಸೋತಳು. ಎರಡು ಮತ್ತು ಮೂರನೆ ರೌಂಡ್ ಹೊತ್ತಿಗೆ ಅವಳು ಎಲ್ಲಿಂದ ಆವೇಶ ತೆಗೆದುಕೊಂಡಳೋ! ಅವಳು ಹೊಡೆದ 'ಸ್ಟ್ರೋಕ್'ಗಳನ್ನು 'ರಿಸೀವ್' ಮಾಡುವುದೇ ಕಷ್ಟವಾಗಿತ್ತು. ಲೀಲಾವತಿ ಹೊಡೆಯುತ್ತಿದ್ದ ಒಂದೊಂದು 'ಷಾಟು'ಗಳು 'ರೊಯ್' ಎಂದು ಶಬ್ದಮಾಡಿಕೊಂಡು ಹೋಗಿ, ಎದುರುಪಕ್ಷದ ಸುರೇಂದ್ರ ಎಲ್ಲಿ ಬೀಳಬಹುದೆಂದು ಊಹಿಸಿದ್ದನೋ ಅಲ್ಲಿ ಬೀಳದೆ ಬೇರೆಡೆಯಲ್ಲಿ ಬಿದ್ದು ಅವನಿಗೆ ಕಸಿವಿಸಿ ಹಿಡಿಸುತ್ತಿತ್ತು. ಅವನು ಪ್ರೇಕ್ಷಕರ ಕೈ ಚಪ್ಪಾಳೆ ಪ್ರೋತ್ಸಾಹೋದ್ಗಾರಗಳ ನಡುವೆ ಒಂದು ಪಾಂಯಿಂಟ್ ಬಿಟ್ಟು ಕೊಡುತ್ತಿದ್ದ. ಲೀಲಾವತಿ ರಾಕೆಟ್ ಬೀಸುತ್ತಿದ್ದ ರೀತಿ—ಅವಳದೇ ಒಂದು ಕೌಶಲ್ಯ. ಚೆಂಡನ್ನು ರಿಸೀವ್ ಮಾಡಲು ಅತ್ತಿತ್ತ ಹುಲ್ಲೆಯ ಮರಿಯಂತೆ ಚಿಮ್ಮುತ್ತಾ, ಬಾಗುತ್ತಾ ಇದ್ದ ಅವಳ ಮೈಯಾಟ, ಅತ್ತ ಇತ್ತ ಸುಳಿಯುವಾಗ ಬಿಗಿಯಾದ ಅವಳ ಎದೆ ಆಯ ತಪ್ಪಿ ಅತ್ತಿತ್ತ ಚಲಿಸುತ್ತಿದ್ದ ಆ ಚಲನೆ-ಪ್ರೇಕ್ಷಕರನ್ನು ಮಂತ್ರಮುಗ್ಧರನ್ನಾಗಿ ಮಾಡಿತ್ತು. ನೆರೆದಿದ್ದ ಪ್ರೇಕ್ಷಕರಲ್ಲಿ ಹೆಚ್ಚಾಗಿ ತರುಣರು. ಅವರೆಲ್ಲರ ಮನಸ್ಸು ಲೀಲಾವತಿಯ ಆಟಕ್ಕಿಂತ ಸಾಯಂಪ್ರಭೆಯಲ್ಲಿ ಮನಮೋಹಕವಾಗಿ ಕಾಣುತ್ತಿದ್ದ ವಕ್ಷ ಪುಷ್ಪಗಳೂ, ಸರಳ ಉಡುಗೆಯ ಅಸ್ಖಲಿತ ಸೌಂದರ್ಯಮೂರ್ತಿಯೂ ಆಗಿದ್ದ ಲೀಲಾವತಿಯ ದಿವ್ಯ ರೂಪವನ್ನು ನೋಡುವುದರಲ್ಲಿ ಹೆಚ್ಚು ಮಗ್ನವಾಗಿತ್ತು ಎನ್ನಬೇಕು. ಆ ದಿನ ಲೀಲಾವತಿ ಗೆಲ್ಲಲು ಆ ಪ್ರೇಕ್ಷಕರ ಪ್ರೋತ್ಸಾಹವೇ ಕಾರಣವೆನ್ನಬೇಕು. ತಂದೆಮಕ್ಕಳು ಇದೇ ವಿಷಯವನ್ನು ಮತ್ತೊಮ್ಮೆ ಮೆಲುಕು ಹಾಕಿಕೊಳ್ಳುತ್ತಾ, ಗಾಳಿ ಸಂಚಾರ ಹೊರಟಿದ್ದರು. ಹೋಗುತ್ತಿರುವಂತೆ ದಾರಿಯಲ್ಲಿ ವಿಶ್ವನಾಥರಾಯರಿಗೆ ಕನಕಲಕ್ಷ್ಮಮ್ಮನ ನೆನಪಾಗಿ, ಅಲ್ಲಿಗೆ ಸಮೀಪವಾಗಿದ್ದ ಅವರ ಮನೆಗೆ ಭೇಟಿಕೊಡುವ ಆಸೆಯಾಯಿತು. ಲೀಲಾವತಿಯೂ ಈಚೆಗೆ ನಾಲ್ಕೈದು ತಿಂಗಳಿಂದ ಅತ್ತ ಸುಳಿದೇ ಇರಲಿಲ್ಲ. ಅವಳಿಗೂ ಮನೆಗೆ ಹೋಗಿ, ದಿವಾಕರನ ಕ್ಷೇಮ ಸಮಾಚಾರ ತಿಳಿದುಕೊಂಡು ಬರುವ ಆಸೆಯಾಯಿತು. ತಂದೆ ಮಕ್ಕಳಿಬ್ಬರು ಸುಧಾಕರನ ಮನೆಗೆ ಬಂದರು.

ಅವರು ಮನೆಗೆ ಬಂದಾಗ ಸುಧಾಕರ ಕೆಲಸದಿಂದ ಹಿಂದಿರುಗಿ

ಬಂದಿದ್ದ. ಅವನಿಗೆ ವಿಶ್ವನಾಥರಾಯರು ಲೀಲಾವತಿಯನ್ನು ಕಂಡೊಡನೆಯೇ ಸಂತೋಷಾಶ್ಚರ್ಯಗಳಾದುವು. ಬಹಳ ಕಾಲದ ಮೇಲೆ ಅವರಿಬ್ಬರು ಹೀಗೆ ಕೂಡಿ ಆ ಮನೆಗೆ ಬಂದಿದ್ದರು. ಅವನು ಬಂದವರನ್ನು ಆದರದಿಂದ ಬರಮಾಡಿಕೊಂಡು ಕುಳಿತುಕೊಳ್ಳಲು ಆಸನ ತೋರಿಸಿದ. ವಿಶ್ವನಾಥರಾಯರು ಸುಧಾಕರನೊಡನೆ ಮಾತನಾಡುತ್ತ ಕುಳಿತುಕೊಂಡರು. ಆದರೆ ಲೀಲಾವತಿ ಆ ಮನೆಗೆ ಹೊಸಬಳಲ್ಲವಾದ ಕಾರಣ ಅವಳು ರಾಜಮಣಿಯನ್ನು ಮಾತನಾಡಿಸಿಕೊಂಡು ಬರಲು ಅಡಿಗೆ ಮನೆಯ ಕಡೆ ಹೊರಟಳು. ಅಡಿಗೆ ಮನೆಯಲ್ಲಿ ಯಾವುದೋ ಕೆಲಸದಲ್ಲಿ ತೊಡಗಿದ್ದ ರಾಜಮಣಿ—ಶುಭ್ರಶ್ವೇತವಸನಧಾರಿಯಾಗಿದ್ದ ಲೀಲಾವತಿಯನ್ನು ಕಂಡು ಚಕಿತಳಾದಳು.

"ಏನು ಲೀಲಾ....ನೀನು....ಇಲ್ಲಿ?"

"ನಿಮ್ಮನ್ನೆಲ್ಲಾ ನೋಡುವ ಮನಸ್ಸಾಯಿತು. ಹಾಗೇ ಬಂದೆವು."

"ಅಂತೂ ಬಡವರ ನೆನಪು, ಇನ್ನೂ ನಿಮಗೆ ಇದೆಯಲ್ಲಾ. ಸಂತೋಷ ಬಾ ಕೂತುಕೊ" ಎಂದು ಹಜಾರದಲ್ಲಿ ಚಾಪೆ ಹರಡಿದಳು. ಆದರೆ ಅವಳಿಗೆ ಲೀಲಾವತಿ ಚಾಪೆಯ ಮೇಲೆ ಕೂತುಕೊಳ್ಳುವಳೋ ಇಲ್ಲವೋ ಎನ್ನುವ ಸಂಶಯವಿತ್ತು. ಯಾಕೆಂದರೆ ಅವಳು ಆಧುನಿಕ ಯುವತಿ, ಸದಾ ಕುರ್ಚಿ ಸೋಫಗಳಲ್ಲಿ ಕುಳಿತವಳು—ಎಂದು ಕೊಳ್ಳುತ್ತಿರುವಂತೆಯೇ ಅವನ್ನೆಲ್ಲ ಸುಳ್ಳು ಮಾಡುವಂತೆ ಲೀಲಾವತಿ ಚಾಪೆಯ ಮೇಲೆ ಕುಳಿತುಕೊಂಡಳು.

"ಎಲ್ಲಮ್ಮ ನಿನ್ನ ಮಗ—ಕುಮಾರ ಕಂಠೀರವ ಕಾಣುವುದೇ ಇಲ್ಲವಲ್ಲ?"

"ಯಾರು ನಮ್ಮ ಮಾಧೂನೇ. ಎಲ್ಲೋ ಪಕ್ಕದ ಮನೆಯವರು ಎತ್ತಿಕೊಂಡಿರಬೇಕು."

"ಅವನಿಗೆ ಎಷ್ಟು ವರ್ಷ?"

"ಮೂರು ತುಂಬಿ ನಾಲ್ಕಕ್ಕೆ ಬಿದ್ದಿದೆ."

"ಹಾಗಾದರೆ ಮತ್ತೆ ನೀನು....?"

"ಸದ್ಯ ನನಗೇನೂ ಬೇಕಿಲ್ಲಮ್ಮ. ಇರುವ ಒಬ್ಬನ್ನ ಸುಧಾರಿಸಿ ಕೊಂಡು ಹೋದರೆ ಸಾಕಾಗಿದೆ" ಎಂದಳು ರಾಜಮಣಿ.

"ನಾನು ಇಲ್ಲಿ ಇದ್ದಾಗ ಮಕ್ಕಳು ಇಲ್ಲ ಅಂತ ಅತ್ತೆ ಒದ್ದಾಡುತ್ತಿದ್ದರು. ಅವರು ಮಕ್ಕಳಿಗಾಗಿ ಕೈಮುಗಿಯದ ದೇವರು ಇರಲಿಲ್ಲ."

"ಏನೋ ದೇವರು ಕಣ್ಣುಬಿಟ್ಟು ನೋಡಿದ. ಈಗ ನಾವು ಸುಖವಾಗಿ ಇದ್ದೇವೆ."

"ಒಂದೇ ಮಗುವಿಗೆ ತೃಪ್ತಿಯೆ? ನಿನ್ನಂಥವರಿಗೆ ಒಂದು ಡಜನ್ನಾದರೂ ಆಗ ಬೇಕು! ಮಕ್ಕಳೆಂದರೆ ಹತವರಿಯುವ ನಿಮಗೆ ದೇವರು ಎರಡೂ ಕೈಯಲ್ಲಿ ಮಕ್ಕಳನ್ನು ಕೊಡಬೇಕು."

ಈ ಮಾತು ಕೇಳಿ ಸಿಟ್ಟುಮಾಡುವ ಬದಲು ಸಂತೋಷಗೊಂಡಳು ರಾಜಮಣಿ. ಅವಳು ಈ ವೇಳೆಗೆ ಕಾಫಿ ತಯಾರಿಸಿದ್ದಳು. ಅದನ್ನು ಕಪ್ಪುಗಳಲ್ಲಿ ಬಸಿದು ವಿಶ್ವನಾಥರಾಯರು ಹಾಗೂ ಲೀಲಾವತಿಗೆ ಕೊಟ್ಟಳು. ತಂದೆಯವರ ಜತೆಯಲ್ಲಿ ಕಾಫಿ ಕುಡಿಯಲು ವರಾಂಡಕ್ಕೆ ಬಂದ ಲೀಲಾವತಿಯನ್ನು ನೋಡಿ ಸುಧಾಕರ ಪ್ರಶ್ನಿಸಿದ.

"ಏನ್ರಿ ಲೀಲಾವತಿ ಚೆನ್ನಾಗಿದ್ದೀರಾ?"

"ಚೆನ್ನಾಗಿಲ್ಲದೆ ನಮಗೇನು ಗುಲುಗು ಸುಧಾಕರರಾಯರೇ" ಎಂದಳು ಅಣಕಿಸುವ ದನಿಯಲ್ಲಿ.

"ಏನೇ ಇದು ನಿನ್ನ ಮಾತು?" ಎಂದರು ತಂದೆ.

"ಇನ್ನೇನು ಇದುವರೆಗೆ ಏಕವಚನ ಉಪಯೋಗಿಸುತ್ತಿದ್ದವನು ಈಗ ಇದ್ದಕ್ಕಿದ್ದಂತೆ ಬಹುವಚನ ಉಪಯೋಗಿಸಿದರೆ....! ನಾನೇನೂ ಹೊರಗಿನವಳೇ—ಹಾಗೆಲ್ಲ ಕರೆಯಲು?"

"ನೀನು ಎಷ್ಟೇ ಆಗಲಿ—ಆಗ ಹುಡುಗಿ ಎನಿಸಿಕೊಂಡಿದ್ದೆ. ಈಗ ದೊಡ್ಡವಳು ಆಗಿದ್ದೀಯೆ. ಅಲ್ಲದೆ ಕಾಲೇಜಿನಲ್ಲಿ 'ಮೇಡಂ' ಬೇರೆ ಆಗಿದ್ದೀ. ನಿನ್ನನ್ನು ಏಕವಚನದಲ್ಲಿ ಕರೆಯುವುದು ಹೇಗೆ?" ಎಂದ ಸುಧಾಕರ.

"ಹಾಗಾದರೆ ನಿನ್ನ ಅಭಿಪ್ರಾಯದಲ್ಲಿ ಹುಡುಗಿಯಾಗಿದ್ದ ನಾನು ಈಗ ಬೆಳೆದು ಮುದುಕಿಯಾಗಿಬಿಟ್ಟಿದ್ದೇನೆ ಅಲ್ಲವೆ? ನಾನು ಕಾಲೇಜಿನಲ್ಲಿ

ಲೆಕ್ಚರರ್ ಆದ ಮಾತ್ರಕ್ಕೆ ನಿಮಗೆಲ್ಲ ' ಮೇಡಂ ' ಆಗಿಬಿಟ್ಟೆನೆ ? "

" ಇಲ್ಲ ಲೀಲಾ ಹಾಗಲ್ಲ. ನೀನು ನಮ್ಮ ಮನೆ ಬಿಟ್ಟ ಮೇಲೆ ಬದಲಾಗಿರಬೇಕು ಅಂತ ಇದ್ದೆ. ಈಗ ಗೊತ್ತಾಯಿತು. ನೀನು ಮೊದಲಿದ್ದ ಹಾಗೇ ಇದ್ದಿ ಅಂತ. ಇನ್ನುಮೇಲಿಂದ ಹಾಗೆಲ್ಲ ಕರೆಯೋದಿಲ್ಲ. ಈ ಬಾರಿ ಕ್ಷಮಿಸು "—ಎಂದು ಕ್ಷಮಾಪಣೆ ಕೋರಿದ.

ಈ ವೇಳೆಗೆ ರಾಜಮಣಿ ಪಕ್ಕದ ಮನೆಯಲ್ಲಿ ಆಡುತ್ತಿದ್ದ ಮಗ ಮಾಧೂನ ಲೀಲಾವತಿಗೆ ತೋರಿಸಲು ಕರೆದು ತಂದಳು. ಅವನು ಮಣ್ಣಿನಲ್ಲಿ ಆಟವಾಡುತ್ತಿದ್ದುದರಿಂದ ಅವನ ಬಟ್ಟೆಗಳೆಲ್ಲ ಮಣ್ಣಿನಿಂದ ಕೊಳೆಯಾಗಿತ್ತು. ಪಕ್ಕದ ಮನೆಯ ಹುಡುಗನೊಡನೆ ಜಗಳವಾಡಿದುದರಿಂದ ತಲೆ ಕೆದರಿತ್ತು. ಅವನಿಗೆ ನೆಗಡಿಯಾಗಿದ್ದುದರಿಂದ ಮೂಗಿನಲ್ಲಿ ಧಾರಾಪ್ರವಾಹವಾಗಿ ' ಸಿಂಬಳ ' ಸುರಿಯುತ್ತಿತ್ತು. ಅವನು ನಾಲ್ಕು ವರ್ಷದ ಹುಡುಗನಾದರೂ ತಾನು ಇನ್ನೂ ಎರಡು ವರ್ಷದವನೆಂಬಂತೆ ಸದಾ ಬಾಯಲ್ಲಿ ಹೆಬ್ಬೆಟ್ಟನ್ನು ಇಟ್ಟುಕೊಂಡು ಚೀಪುತ್ತಿದ್ದನು. ರಾಜಮಣಿ ಹೇಗಿದ್ದ ಮಗುವನ್ನು ಹಾಗೇ ಕರೆತಂದು ಇದ್ದುದರಲ್ಲಿ ಹಾಗೇ ಶುದ್ಧಿಗೊಳಿಸಿ, ಲೀಲಾವತಿಯ ಕೈಗೆ ಕೊಟ್ಟಳು. ಲೀಲಾವತಿಗೆ ಸಾಮಾನ್ಯವಾಗಿ ಮಕ್ಕಳನ್ನು ಎತ್ತಿಕೊಳ್ಳುವುದು, ಮುದ್ದು ಮಾಡುವುದೆಂದರೆ ಆಗದು. ಅವಳು ಮಕ್ಕಳನ್ನು ದೂರದಿಂದಲೇ ನೋಡಿ ಸಂತೋಷಪಡುತ್ತಿದ್ದಳೇ ಹೊರತು ಅವುಗಳನ್ನು ಎತ್ತಿಕೊಳ್ಳುವ ಸಾಹಸಮಾಡುತ್ತಿರಲಿಲ್ಲ. ಅವಳು ರಾಜಮಣಿಯ ಮಗು ಸುಮಿತ್ರೆಯ ಮಗುವಿನಂತೆ ರಬ್ಬರು ಬೊಂಬೆಯಂತೆ ಇರಬೇಕೆಂದು ಊಹಿಸಿದ್ದಳು. ಆದರೆ ರಾಜಮಣಿಯ ಮಗು ತಾಯಿಯನ್ನು ಹೋತಿದ್ದರಿಂದ ಅದೂ ಚಿಗಳಿಯ ಬೊಂಬೆಯಂತೆ ಇತ್ತು. ಕೈಗೆ ಕೊಟ್ಟ ಮಗುವನ್ನು ಮನಸ್ಸಿಲ್ಲದ ಮನಸ್ಸಿನಿಂದ ಕ್ಷಣಕಾಲ ಎತ್ತಿಕೊಂಡಿದ್ದು, ನೆಲದ ಮೇಲೆ ನಿಲ್ಲಿಸಿದಳು. ಅವನು ಲೀಲಾವತಿಯ ಬಳಿ ಸಲಿಗೆ ತೋರಿಸಲು ಹೋಗಿ ಅವಳನ್ನು ಅಪ್ಪಿ ಅವಳ ಬಿಳಿಸೀರೆಯನ್ನು ಮಲಿನಗೊಳಿಸಿದ. ಲೀಲಾವತಿಗೆ ಒಳಗೊಳಗೆ ಸಿಟ್ಟು ಬಂದಿದ್ದರೂ ನಿರ್ವಾಹವಿಲ್ಲದೆ ತಡೆದುಕೊಂಡಳು. ಉಪಾಯವಾಗಿ ಅವನನ್ನು ಆದಷ್ಟು ದೂರವಿಡಲು ಪ್ರಯತ್ನಿಸಿದಳು. ಸುಧಾಕರ ಮಗುವನ್ನು

ಶುಭ್ರಗೊಳಿಸಿ, ಜೇರೆ ಬಟ್ಟೆ ಹಾಕಿ ಕರೆತಂದು ಬಿಡದೆ, ಹೇಗಿರುವ ಮಗುವನ್ನು ಹಾಗೆಯೇ ಕರೆತಂದ ಹೆಂಡತಿಯ ಮುಖವನ್ನು ದುರದುರನೆ ನೋಡಿ, ಕಡೆಗೆ ತಾನೇ ಮಗುವನ್ನು ಬಳಿಗೆ ಕರೆದು ಅವನ ಮುಖವನ್ನು ವರೆಸಿ, ತಲೆಯನ್ನು ಬಾಚಿ, ಬಟ್ಟೆಯನ್ನು ಕೊಡವಿ, ಆದಷ್ಟು ಶುದ್ಧಿಗೊಳಿಸಿ ವಿಶ್ವನಾಥರಾಯರ ಬಳಿಗೆ ಕಳುಹಿಸಿದ. ವಿಶ್ವನಾಥರಾಯರು ಮಗುವನ್ನು ಎತ್ತಿಕೊಂಡು ಮುದ್ದಾಡಿ, ಅವನ ಕೈಗೆ ಐದು ರೂಪಾಯಿಯ ನೋಟನ್ನು ಕೊಟ್ಟರು. ಮಗು ನೋಟನ್ನು ತಾಯಿಗೆ ಕೊಡಲು ಓಡಿತು.

ಇದೇ ಸಂದರ್ಭದಲ್ಲಿ ಲೀಲಾವತಿ ಹೇಳಿದಳು—ನೋಟನ್ನು ಮುಷ್ಟಿಯಲ್ಲಿ ಹಿಡಿದುಕೊಂಡು, ಹೆಬ್ಬೆಟ್ಟನ್ನು ಚೀಪುತ್ತ ನಡೆದ ಮಗುವನ್ನು ನೋಡಿ:

"ರಾಜಮಣಿ ಮಕ್ಕಳ ದುರಭ್ಯಾಸವನ್ನು ಈಗಿನಿಂದಲೇ ಬಿಡಿಸಬೇಕಮ್ಮ."

ಲೀಲಾವತಿ ಯಾವ ವಿಷಯ ಹೇಳುತ್ತಿರುವಳೆಂದು ರಾಜಮಣಿಗೆ ತಿಳಿಯಲಿಲ್ಲ.

"ನೋಡು, ಅವನು ಹೆಬ್ಬೆರಳನ್ನು ಸದಾಕಾಲ ಚೀಪುತ್ತಿರುತ್ತಾನೆ. ಅದೇ ಕೈಯಲ್ಲಿ ಮಣ್ಣಿನಲ್ಲಿ ಆಡುತ್ತಾನೆ. ಬೀದಿಮಣ್ಣಿನಲ್ಲಿ ಆಡಿದ ಕೈಯನ್ನು ಬಾಯಿಗೆ ಇಟ್ಟುಕೊಂಡರೆ ಇಲ್ಲದ ಖಾಯಿಲೆ ಬರುವುದಿಲ್ಲವೆ? ನೋಡು ಅವನ ಬಟ್ಟೆ ಬರೆ. ಅವನು ಮಣ್ಣಿನಲ್ಲಿ ಎಲ್ಲೋ ಹೊರಳಿ ಬಂದಿರಬೇಕು. ತಲೆಯ ತುಂಬಾ ಮರಳು. ಮಕ್ಕಳನ್ನು ಹೀಗೆ ಬಿಟ್ಟರೆ ಹೇಗೆ?"

"ಅಯ್ಯೋ, ಈ ತುಂಟನ ಮಾತು ಅದೇನು ಹೇಳುತ್ತಿ ಲೀಲಾ. ದಿನಕ್ಕೆ ನೂರು ಸಲ ಸ್ನಾನ ಮಾಡಿಸಿದರೂ, ನೂರು ಸಲ ಬಟ್ಟೆ ಬದಲಾಯಿಸಿದರೂ ಇವನು ಇರೋ ಹುಟ್ಟು ಇದೇ....ಒಗೆದ ಬಟ್ಟೆ ಹಾಕಲಿ ಕೊಳೆ ಬಟ್ಟೆ ಹಾಕಲಿ ಮಣ್ಣಿನಲ್ಲಿ ಹೊರಳಾಡಿ ಕೊಳೆಮಾಡಿಕೊಳ್ಳುವ ತನಕ ಇವನಿಗಲ್ಲಿ ಸಮಾಧಾನ. ಸುಮ್ಮನೆ ಹೊಡೆದರೆ ಏಟು ತಿನ್ನುತ್ತಾನೆಯೇ ಹೊರತು ಬುದ್ಧಿ ಬರುವುದಿಲ್ಲ" ಎಂದಳು—ರಾಜಮಣಿ.

"ಒಂದೇ ಮಗುವಿಗೆ ನೀನು ಹೀಗೆ ಹೇಳ್ತೀಯಲ್ಲ. ನೀನು ಚೀಪರ್

ಬೈ ದಿ ಡಜನ್ ಆಗಿದ್ದರೆ ಏನು ಹೇಳುತ್ತಿದ್ದಿಯೋ ಕಾಣೆ."

—ಎಂದು ಲೀಲಾವತಿ ಹಾಸ್ಯಮಾಡಿದಳು.

ಈ ಮಾತು ಕೇಳಿ ಎಲ್ಲರೂ ನಕ್ಕರು. ಆಗ ಸುಧಾಕರ ಹೇಳಿದ.

"ಲೀಲಾ, ನಿನ್ನದೆಲ್ಲ ಕೇವಲ ಮಾತಿನಲ್ಲೇ ಮುಗಿದುಹೋಯಿತು. ಬೇಗ ಮದುವೆ ಮಾಡಿಕೊಂಡು ನಮಗೆಲ್ಲ ಬಾಯಿ ಸಿಹಿ ಮಾಡುವುದು ಯಾವಾಗಲೋ? ನಾವಂತೂ ನಿನ್ನ ಮದುವೆಯನ್ನು ಆಗಿನಿಂದ ಎದುರು ನೋಡುತ್ತಿದ್ದೇವೆ."

"ಬಾಯಿಗೆ ಸಿಹಿ ಬೀಳಬೇಕಾದರೆ ಮದುವೆಯೇ ಆಗಬೇಕೆ? ನಮ್ಮ ಮನೆಗೆ ಬನ್ನಿ. ತಪ್ಪದೆ ನೀವು ಬಯಸುವ ತಿಂಡಿಮಾಡಿಸಿ, ದಣಿಸಿ ಕಳುಹಿಸುತ್ತೇನೆ.

"ನಮಗೆ ಬೇಕಾಗಿರುವುದು ನಿಮ್ಮ ಮನೆಯ ಔತಣವಲ್ಲ. ನಿನ್ನ ಮದುವೆ."

"ನನ್ನ ಮದುವೆಯೇ....ಇನ್ನು ನನಗೇಕೆ ಮದುವೆ? ಈಗಲೇ ಅರ್ಧ ವಯಸ್ಸು ಕಳೆದು ಮುದುಕಿಯಾಗಿದ್ದೇನೆ." ಎಂದು ನಕ್ಕಳು. ಈ ಮಾತು ಕೇವಲ ಮೋಜಿಗಾಗಿ ಹೇಳಿರುವಳೆಂಬ ವಿಷಯ ಎಲ್ಲರಿಗೂ ತಿಳಿಯಿತು. ಲೀಲಾವತಿಗೆ ಅಂತಹ ವಯಸ್ಸೇನು. ಅವಳು ಇನ್ನೂ ಇಪ್ಪತ್ತಾರು ಇಪ್ಪತ್ತೇಳು ವರ್ಷ ಪ್ರಾಯದ ಯುವತಿ. ಅವಳ ಅಂಗಾಂಗಗಳಲ್ಲಿ ಮನೆ ಮಾಡಿಕೊಂಡಿದ್ದ ಅವಳ ಚೆಲುವು, ಯೌವನ ಇಳಿವಯಸ್ಸಿನ ಮುದುಕರಲ್ಲಿಯೂ ಪೌರುಷ ಉತ್ತರಿಸುವಂತಹದು. ಎಂದ ಮೇಲೆ ಸುಧಾಕರ ಲೀಲಾವತಿಯ ಮಾತು ಕೇಳಿ ನಕ್ಕನೇ ಹೊರತು ಬೇರೆ ಮಾತು ಹೇಳಲಿಲ್ಲ. ವಿಶ್ವನಾಥ ರಾಯರು ವರಾಂಡದಲ್ಲಿದ್ದ ಕನಕಲಕ್ಷ್ಮಮ್ಮನವರ ಫೋಟೊ ನೋಡಿ ಹೇಳಿದರು.

"ಅಂದ ಹಾಗೆ ಸುಧಾಕರ, ಕನಕಳಿಂದ ಈಚೆಗೆ ಕಾಗದ ಬಂದಿತ್ತೆ? ನನಗೆ ಮೂರು ತಿಂಗಳ ಹಿಂದೆ ಒಂದು ಪತ್ರ ಬರೆದಿದ್ದಳು. ಆದಾದ ಮೇಲೆ ಕಾಗದವೇ ಇಲ್ಲ. ಹಳ್ಳಿಯಲ್ಲಿ ಎಲ್ಲ ಆರೋಗ್ಯ ತಾನೆ?"

"ಮೊನ್ನೆ ಅಮ್ಮ ಕಾಗದ ಬರೆದಿದ್ದಳು. ಅಣ್ಣನಿಗೆ ಏಕೋ ಸಣ್ಣ ಜ್ವರ ಬರುತ್ತಿದೆಯಂತೆ. ಈಗ ಮಳೆಗಾಲ. ಮಲೇರಿಯಾ ಇರಬಹುದು.

ಅಲ್ಲೇ ಯಾರ ಹತ್ತಿರವೋ ಔಷಧಿ ಕೊಡಿಸುತ್ತಿದ್ದಾಳಂತೆ. ನಾನು ಸಾಧ್ಯವಾದರೆ ಈ ಶನಿವಾರ ಭಾನುವಾರ ಹೋಗಿ ಬರಬೇಕೆಂದಿದ್ದೇನೆ."

"ನಾನೂ ಅವಳನ್ನು ನೋಡಿ ಬಹಳ ದಿನಗಳಾಯಿತು. ಅವಳನ್ನು ನೋಡುವ ಆಸೆ ಆಗುತ್ತಿದೆ. ನೀನು ಹೋಗುವಾಗ ನನ್ನನ್ನು ಕರೆ. ನಾನೂ ಜತೆಗೆ ಬರುತ್ತೇನೆ."

"ಹೂಂ. ಹಾಗೇ ಆಗಲಿ. ಹೋಗುವ ಮುನ್ನ ನಿಮಗೆ ಯಾವ ಸುದ್ದಿಯನ್ನೂ ತಿಳಿಸುತ್ತೇನೆ" ಎಂದ.

ಅನಂತರ ದಿವಾಕರನ ಮಾತು ಬಂತು.

"ಈಗ ದಿವೂ ಎಲ್ಲಿದಾನೆ ?"

"ಬೊಂಬಾಯಿಯಲ್ಲೇ ಇದ್ದಾನೆ. ಅವನಿಗೇನು ಕೈತುಂಬಾ ಸಂಬಳ ಬರುತ್ತಿದೆ. ಯಾವುದೋ ಸಬರ್ಬನಲ್ಲಿ ಮನೆಮಾಡಿ ಸುಖವಾಗಿ ಇದ್ದಾನೆ. ಈಗ ಅವನು ಒಂದು ಮಗುವಿನ ತಂದೆ ಬೇರೆ."

ಈ ಮಾತು ಕೇಳಿ ಲೀಲಾವತಿಗೆ ಷಾಕ್ ಹೊಡೆದಂತಾಯಿತು. ತನ್ನ ದಿವಾಕರ ಈಗ ಒಂದು ಮಗುವಿನ ತಂದೆಯಾಗಿದ್ದಾನೆಯೆ ? ಯಾಕೋ ಈ ವಿಷಯ ಲೀಲಾವತಿಯ ಹೃದಯದಲ್ಲಿ ಹೇಳಲಾಗದ ಯಾವುದೋ ಅವ್ಯಕ್ತ ವೇದನೆಯುಂಟುಮಾಡಿತು. ಅವನನ್ನು ಅವಳು ನೋಡಿ ಬಹಳ ಕಾಲವಾಗಿತ್ತು. ಅವನ ಬಗ್ಗೆ ಯಾವ ಸುದ್ದಿಯನ್ನು ಕೇಳಿರಲಿಲ್ಲ. ಅವನು ಬೊಂಬಾಯಿಯಲ್ಲಿ ಸಂಸಾರ ಹೂಡಿರಬಹುದು ಎಂದುಕೊಂಡಿದ್ದಳು. ಆದರೆ ಅಷ್ಟು ಮಾತ್ರವೇ ಅಲ್ಲ, ಅವನು ಈಗ ತಂದೆ ಬೇರೆ ಆಗಿಬಿಟ್ಟಿದ್ದಾನೆ. ಇಷ್ಟು ಬೇಗನೇ ? ಇನ್ನೂ ಮದುವೆಯಾಗಿ ನಾಲ್ಕು ವರ್ಷ ಕೂಡಾ ಆಗಿಲ್ಲ. ಆಗಲೇ ಒಂದು ಮಗುವಿನ ತಂದೆ! ಅತ್ತ ಸುಮಿತ್ರೆ ಸಂಸಾರ ಹೂಡಿದ ವರ್ಷದಲ್ಲಿಯೇ ಅವಳು ಮಗುವಿನ ತಾಯಿ. ಇತ್ತ ದಿವಾಕರ ಮದುವೆಯಾದ ನಾಲ್ಕು ವರ್ಷಕ್ಕೆ ಮಗುವಿನ ತಂದೆ. ಈ ವಿಷಯ ನೆನೆದಷ್ಟು ಅವಳ ಹೃದಯದಲ್ಲಿ ಏನೋ ಹೊಯಿದಾಟ ನಡೆಯಿತು. ಅವಳಿಗೆ ಅಲ್ಲಿ ಹೆಚ್ಚು ಕಾಲ ಕುಳಿತಿರಲು ಆಗದೆ ಹೋಯಿತು. ಆ ಮನೆಯಲ್ಲಿ ತಾನು ಇದ್ದಾಗ ನಡೆದ ಒಂದೊಂದು ಸಂಗತಿ, ದಿವಾಕರ

ನೊಡನೆ ಆಡಿದ ಒಂದೊಂದು ಮಾತು ನೆನಪಿಗೆ ಬಂದು ಅವಳ ಹೃದಯ ಭಾರವಾಯಿತು. ಮುಖ ಕಳೆಗುಂದಿತು. ಅವಳು ಆದಷ್ಟು ಬೇಗ ಅಲ್ಲಿಂದ ಹೊರಟುಬಿಡಲು ಆಶಿಸಿದಳು. ಅವಳ ಸ್ಥಿತಿಯನ್ನು ಕಂಡೋ ಏನೋ ವಿಶ್ವನಾಥರಾಯರೂ ಹೊತ್ತಾಯಿತೆಂದು ಅವರನ್ನು ಬೀಳ್ಕೊಂಡು ಹೊರಟರು.

ತಂದೆ ಮಕ್ಕಳಿಬ್ಬರಲ್ಲಿ ಹೊರಡುವಾಗ ಇದ್ದ ಉತ್ಸಾಹ, ಸಂತೋಷ ಈಗ ಮರುಳುವಾಗ ಇರಲಿಲ್ಲ. ಇಬ್ಬರೂ ಏನನ್ನೋ ಯೋಚಿಸುತ್ತಾ ಮನೆಯ ಕಡೆ, ಮಾತಿಲ್ಲದೆ ನಡೆದಿದ್ದರು. ವಿಶ್ವನಾಥರಾಯರಿಗೆ ಅದು ಯಾವ ಚಿಂತೆ ಮುತ್ತಿತ್ತೋ ಅವರು ಮನೆ ತಲಪುವ ತನಕ ಒಂದು ಮಾತೂ ಆಡಲಿಲ್ಲ. ಮನೆ ತಲುಪಿ, ಊಟಮಾಡಿದ ಮೇಲೆ ಲೀಲಾವತಿಯೇ ತಂದೆಯನ್ನು ಮಾತನಾಡಿಸಿದಳು.

“ಯಾಕೆ ಅಣ್ಣ—ನೀನು ಒಂದು ತರಹ ಇದ್ದಿ?”

ವಿಶ್ವನಾಥರಾಯರು ನಕ್ಕರು.

“ನೀನು ಏನೋ ಯೋಚಿಸುತ್ತಿದ್ದೀ ಅಣ್ಣ!”

“ಏನೂ ಇಲ್ಲ. ನಮ್ಮ ಸುಧಾಕರನ ಸಂಸಾರ ನೋಡಿ ಸಂತೋಷವಾಯಿತು. ನಮ್ಮ ದಿವಾಕರನ ವಿಷಯ ಕೇಳಿ ಸಂತೋಷವಾಯಿತು.” ಎಂದರು.

“ಹೌದು ನನಗೂ ಸಂತೋಷವಾಯಿತು.”

“ಕನಕ ಈಗ ಮೊಮ್ಮಕ್ಕಳನ್ನು ಕಂಡು ಅದೆಷ್ಟು ಸಂತೋಷಪಡುತ್ತಾಳೋ ಕಾಣೆ. ಅವಳು ಮೊಮ್ಮಕ್ಕಳಿಗಾಗಿ ಎಷ್ಟು ಒದ್ದಾಡುತ್ತಿದ್ದಳೆಂಬುದು ನೀನೇ ನೋಡಿದ್ದೆಯಲ್ಲ.”

“ಹೂಂ, ಅವರದು ತಾಯಿಕರುಳು. ಅವರಿಗೆ ಮೊದಲಿನಿಂದಲೂ ಮಕ್ಕಳೆಂದರೇ ಹಾಗೆ. ಇವರು ತನ್ನ ಮಕ್ಕಳು—ಇವರು-ಪರರ ಮಕ್ಕಳೆನ್ನುವ ಭೇದವೇ ಇಲ್ಲ.”

“ನನಗೆ ಅವಳಂತೆ ಮೊಮ್ಮಕ್ಕಳನ್ನ ನೋಡುವ ಭಾಗ್ಯವಿಲ್ಲ.”

ಅನ್ಯಮನಸ್ಕರಾಗಿ ವಿಶ್ವನಾಥರಾಯರು ಹೇಳಿದರು.

" ನೀವೇಕೆ ಹಾಗೆ ತಿಳಿಯಬೇಕು ? ನಮ್ಮ ಶ್ಯಾಮಸುಂದರನಿಗೊಂದು ಲಗ್ನವಾದರೆ ನಿಮ್ಮ ಆಸೆ ಈಡೇರುತ್ತದೆ."

" ನನಗೆ ಶಾಮಣ್ಣನ ಮಾತು ಬೇಡ. ನಿನ್ನ ಮಾತು ಹೇಳು ? "

ಈ ಮಾತು ಕೇಳಿ ಲೀಲಾವತಿ ಸುಮ್ಮನೆ ನಕ್ಕುಬಿಟ್ಟಳೇ ಹೊರತು ಮಾತನಾಡಲಿಲ್ಲ. ಅವಳು ತನ್ನ ನಗುವಿನಲ್ಲಿ ವಿಶ್ವನಾಥರಾಯರ ಮಾತನ್ನು ತೇಲಿಸಿಬಿಡಬೇಕೆಂದು ಬಯಸಿದಳು. ಆದರೆ ವಿಶ್ವನಾಥರಾಯರು ತಮ್ಮ ಮಾತನ್ನು ಅಷ್ಟು ಬೇಗ ಮರೆಯಲಿಲ್ಲ.

" ಲೀಲಾ, ನೀನು ಮನಸ್ಸು ಮಾಡಿದರೆ ಈ ಸೌಭಾಗ್ಯವನ್ನು ಕರುಣಿಸ ಬಲ್ಲೆ. ನನ್ನ ಮನದ ಆಸೆಯನ್ನು ಈಡೇರಿಸ ಬಲ್ಲೆ ! " ಎಂದು ಉನ್ಮತ್ತ ರಂತೆ ಹೇಳಿದರು.

ಈ ಮಾತಿಗೂ ಲೀಲಾವತಿ ಏನೂ ಉತ್ತರ ಕೊಡಲಿಲ್ಲ. ಅವಳು ಸುಮ್ಮನೆ ಕುಳಿತುದನ್ನು ಕಂಡು ರಾಯರು ಹೇಳಿದರು.

" ಏಕೆ ಲೀಲಾ ಸುಮ್ಮನೆ ಕುಳಿತೆ ? ನನ್ನ ಮಾತು ನಿನಗೆ ಬೇಸರವಾಯಿತೇ ? "

" ನನಗೇಕೆ ಬೇಸರವಾಗಬೇಕು—" ಎಂದಳು ಎಲ್ಲೋ ನೋಡುತ್ತಾ.

" ನೀನು ಈಗ ಹೂಂ ಅನ್ನು. ನಾಳೆ ಇಷ್ಟು ಹೊತ್ತಿಗೆ ನಿನಗೆ ಎಲ್ಲ ರೀತಿಯಲ್ಲಿ ಅನುರೂಪನಾದ ಗಂಡನ್ನು ಪತ್ತೆಮಾಡಿ ತರುತ್ತೇನೆ."

" ಅಣ್ಣ, ನೀನು ಸುಮ್ಮನೆ ಇಲ್ಲದ ಕೊರಗು ಹಚ್ಚಿಕೊಳ್ಳುತ್ತಿದ್ದಿ." ಎನ್ನಲೇ ಬೇಕಾಯಿತು ಲೀಲಾವತಿ.

" ನಿನಗೆ ಮದುವೆಯಾದರೆ ನನ್ನ ಮನದ ಎಲ್ಲ ಕೊರಗೂ ನಿವಾರಣೆ ಯಾದಂತೆ ಮಗು."

" ನನ್ನ ಮದುವೆಯ ಬಗ್ಗೆ ನಿನಗೇಕೆ ಅಷ್ಟು ಚಿಂತೆ ಅಣ್ಣ ? ನನಗಿಲ್ಲದ ಚಿಂತೆ ನಿನಗೇ ? "

" ಮಗಳ ಮದುವೆ ಮಾಡುವುದು ಹೆತ್ತ ತಂದೆಯ ಕರ್ತವ್ಯವಲ್ಲವೇ ಮಗು ? ನಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮೇಲೆ ನೀನು ಸುಖವಾಗಿರೆಂದು ಬಯಸುವುದು ತಪ್ಪೆ ? "

" ನೀನು ಬಯಸುವ ಸುಖ ಮದುವೆಯಿಂದ ನನಗೆ ಸಿಗುವುದೆಂದು ನಾನು ತಿಳಿದಿಲ್ಲ."

" ಏಕೆ? "

" ಮದುವೆಯಾದರೆ ನಾನು ನಿಮ್ಮಿಂದ ದೂರ ಹೋಗಬೇಕಾಗುತ್ತದೆ. ನನ್ನ ಅಖಂಡ ಪ್ರೀತಿಯಲ್ಲಿ ಇನ್ನೊಬ್ಬರಿಗೆ ಪಾಲುಗೊಡಬೇಕಾಗುತ್ತದೆ. ಇಲ್ಲ........ಅಣ್ಣ ನಿನ್ನನ್ನು ಬಿಟ್ಟು ನಾನು ಕ್ಷಣಕಾಲ ಬೇರೆ ಇರಲಾರೆ........ ಇರಲಾರೆ."

—ಎಂದಳು ಉನ್ಮತ್ತಳಂತೆ.

" ಹೆಣ್ಣಾಗಿ ಹುಟ್ಟಿದ ಮೇಲೆ ಹೆತ್ತವರೊಂದಿಗೆ ಎಷ್ಟು ಕಾಲ ಇರಲಾದೀತು ಮಗು? ಹೆಣ್ಣು ಮಕ್ಕಳು ಒಂದಲ್ಲ ಒಂದು ದಿನ ಗಂಡನ ಮನೆಗೆ ಹೋಗಲೇ ಬೇಕು—"

" ಇತರರ ಮಾತು ಬೇಡ. ನನಗೆ ನೀವೇ ಸರ್ವಸ್ವ. ನಿಮ್ಮನ್ನು ಬಿಟ್ಟು ನಾನು ಬೇರೆಲ್ಲಿಗೂ ಹೋಗಲಾರೆ. "

" ನನ್ನೊಂದಿಗೆ ನಿನ್ನ ಇಡೀ ಆಯುಷ್ಯ ಕಳೆಯಲು ನಾನು ಅಮರನೆಂದು ನಿನ್ನ ಭಾವನೆಯೆ? ನಾನೂ ಎಲ್ಲರಂತೆ ಒಂದು ದಿನ ಕಣ್ಣುಮುಚ್ಚಿಕೊಳ್ಳುವವನೇ. ಒನ್ ಸ್ಟೆಪ್ ಇನ್ ದಿ ಗ್ರೇವ್ ಅಂತಾರಲ್ಲ. ಹಾಗಿವೆ ನನ್ನ ಸ್ಥಿತಿ. ಇಂಥವನನ್ನು ನೀನು ನೆಚ್ಚಿಕೊಂಡರೆ ನಿನಗೆ ಸುಖವೆಲ್ಲಿಯದು ಮಗು?....ಸಾಯುವ ಮುನ್ನ ನೀನು ಸುಖವಾಗಿರುವ ದಾರಿ ನಿನಗೆ ತೋರಿಸಬೇಡವೆ? "

" ನಾನು ಮದುವೆಯಾದರೆ ಸುಖದ ದಾರಿ ತೋರಿಸಿದಂತೆ ಆಯಿತೇ ಅಣ್ಣ? ನನಗೆ ಈಗ ಇಲ್ಲಿ ಯಾತರ ಕೊರತೆ ಇದೆ ಎಂದು ಆ ಮಾತು? ನನಗೆ ನನ್ನದೆನ್ನುವ ಮನೆಯಿದೆ. ಮನಸ್ಸು ಮೆಚ್ಚಿದ ವ್ಯಕ್ತಿ ಇವೆ. ದೇವರು ಕೊಟ್ಟ ರೂಪ, ವಿದ್ಯೆ ಇದೆ. ಇದೆಲ್ಲಕ್ಕೂ ಮಿಗಿಲಾಗಿ ನನ್ನ ಭಾಗದ ದೇವರಾಗಿ ನೀನಿದ್ದಿ. ಹೀಗಿರುವಲ್ಲಿ ನನಗಿನ್ನೇನು ಬೇಕು? ನಾನು ಇನ್ನು ಯಾವುದರಲ್ಲಿ ಅಸುಖಿ ಎಂದು ನಿನ್ನ ಭಾವನೆ."

" ಯಾವುದು ಎಷ್ಟು ಇದ್ದರೇನು ಮಗು? ನಿನ್ನ ರೂಪ, ಯೌವನ

ವಿದ್ಯೆ ಇವುಗಳಿಂದ ಏನು ಸಾರ್ಥಕ? ಇದಕ್ಕೆಲ್ಲ ಕುಂದಣವಿಡುವ ಗಂಡ ನಿಲ್ಲದ ಮೇಲೆ? ಇವು ಎಲ್ಲ ಇದ್ದೂ ಇಲ್ಲದಂತೆಯೇ ಸರಿ. ಕಾಡುಮಲ್ಲಿಗೆ ಯಂತೆ ಎಲ್ಲವೂ ವ್ಯರ್ಥ."

"ವ್ಯರ್ಥವೊ ಸಾರ್ಥಕವೊ ಆ ಚಿಂತೆ ಕಾಡುಮಲ್ಲಿಗೆಯದಲ್ಲ. ಸೌರಭ ವನ್ನು ಹೊರಸೂಸುವುದೆಷ್ಟೊ ಅಷ್ಟು ಅದರ ಕರ್ತವ್ಯ."

"ಹಾಗಾದರೆ ನನ್ನ ಆಸೆ ಬಯಕೆಗಳೆಲ್ಲ ಮರಳುಗಾಡಿನಲ್ಲಿ ನೀರರಸಿ ದಂತೆಯೇ!"

"ಹಾಗೆಂದೂ ತಿಳಿಯಬೇಡ ಅಣ್ಣ. ನಾನು ಬದುಕಿರುವುದು ನಿನ ಗಾಗಿ, ನಿನ್ನ ಸುಖಕ್ಕಾಗಿ. ನನ್ನ ಮದುವೆಯ ಗೋರಿಯ ಮೇಲೆ ನಿನ್ನ ಸುಖದ ಸೌಧ ಕಟ್ಟುವ ಆಸೆ ನಿನಗಿದ್ದರೆ ಹೇಳು ಅದಕ್ಕೆ ನಾನು ಸಿದ್ಧ ಳಿದ್ದೇನೆ. ನೀನು ಬಯಸುವಂತೆ ನಾನು ಮದುವೆಯೂ ಆಗುತ್ತೇನೆ. ಮಕ್ಕಳನ್ನೂ ಪಡೆಯುತ್ತೇನೆ. ಇದರಿಂದ ನನಗೆ ಸುಖ ತಿಲಮಾತ್ರವೂ ಇಲ್ಲನೆಂಬುದನ್ನು ನೀನು ಮರೆಯಬೇಡ........"—ಎಂದಳು ಲೀಲಾವತಿ ಖಿನ್ನಳಾಗಿ.

ಈ ಮಾತು ಕೇಳಿ ವಿಶ್ವನಾಥರಾಯರಿಗೆ ಒಮ್ಮೆಲೇ ಸಾವಿರ ಚೇಳು ಗಳು ಕಡಿದಷ್ಟು ನೋವಾಯಿತು. ಮಗಳ ಮದುವೆಯ ಗೋರಿಯ ಮೇಲೆ ತಮ್ಮ ಸುಖದ ಸೌಧ! ಈ ಮಾತು ನೆನೆದು ಅವರ ಮೈ ಜುಂ ಎಂದಿತು. ಅವರು ಆ ಕ್ಷಣದಲ್ಲಿ ತಮ್ಮ ಹೆಂಡತಿಯನ್ನು ನೆನೆದರು. ತಮ್ಮ ವಿಷಮ ದಾಂಪತ್ಯ ಜೀವನವನ್ನು ಜ್ಞಾಪಿಸಿ ಕೊಂಡರು. ತಾವೂ ಹೀಗೇಯೇ ಬಲವಂತಕ್ಕೆ ಗಂಗಮ್ಮನನ್ನು ಮದುವೆಯಾಗಿದ್ದರು. ಆದರೆ ಕಡೆಗೆ ಆದು ದೇನು? ತಮ್ಮ ಹಾಗೂ ಗಂಗಮ್ಮನ ವಿಷಮ ದಾಂಪತ್ಯ! ತಮ್ಮ ವಿವಾಹ ದಿಂದ ಯಾರಿಗೆ ಸುಖ ದೊರೆಯಿತು? ತಾವು ಮಗಳನ್ನು ಅವಳ ಇಷ್ಟದ ವಿರುದ್ಧ ಮದುವೆಗೆ ಬಲವಂತ ಪಡಿಸಿದರೆ ತಮ್ಮ ಮಗಳೂ ತನ್ನಂತೆಯೇ ದಾಂಪತ್ಯ ಜೀವನದಲ್ಲಿ ಅಸುಖಿಯಾದರೆ? ಅವರು ಯೋಚಿಸಲೂ ಹೆದರಿ ದರು. ಲೀಲಾವತಿ ತಮ್ಮ ಮೇಲಣ ಪ್ರೀತಿಯಿಂದ ಮದುವೆಗೆ ಒಪ್ಪ ಬಹುದು. ಈ ಮದುವೆಯಿಂದ ಅವಳ ಜೀವಕ್ಕೆ ತಿಲ ಮಾತ್ರ ಸುಖ

ದೊರೆಯದೆ ಹೋದರೆ ಇಂಥ ಮದುವೆಯಿಂದ ಏನು ಪ್ರಯೋಜನ? ತಾನು ಸುಖದ ಹೆಸರಿನಲ್ಲಿ ಮಗಳ ಕತ್ತು ಹಿಸುಕುತ್ತಿರುವಂತೆ ಅವರಿಗೆ ಭಾಸವಾಗಿ ಅವರು ತತ್ತರಿಸಿದರು.

"ಬೇಡ ಲೀಲಾ, ಬೇಡ. ನೀನು ಮದುವೆಯಾಗದೆ ಇದ್ದರೂ ಚಿಂತೆಯಿಲ್ಲ. ನಿನ್ನ ಸುಖದ ದಾರಿ ನೀನು ಕಂಡುಕೋ. ನೀನು ಸುಖವಾಗಿದ್ದರೆ ಸಾಕು. ಸದಾ ನಗುನಗುತ್ತಿದ್ದರೆ ಸಾಕು. ಅದಕ್ಕೂ ಹೆಚ್ಚಿನ ಸುಖ ನನಗೆ ಬೇಡ." ಎಂದು ಮಗಳ ತಲೆಯನ್ನು ಪ್ರೀತಿಯಿಂದ ನೇವರಿಸಿದರು. ಈ ಮಾತು ಹೇಳುತ್ತಿದ್ದಂತೆ ಅವರ ಕಣ್ಣಿನಲ್ಲಿ ನೀರೂರಿತು. ಈ ಮಾತು ಕೇಳಿ ಲೀಲಾವತಿಯ ಕಣ್ಣಿನಲ್ಲಿಯೂ ನೀರು ತುಂಬಿಕೊಂಡಿತು.

ಆ ರಾತ್ರಿ ಲೀಲಾವತಿ ಮುಗ್ಧ ಮಗುವಿನ ರೀತಿಯಲ್ಲಿ ಕಣ್ಣು ತುಂಬಾ ನಿದ್ದೆಹೋದಳು. ಮದುವೆಯ ಭೂತ ತನ್ನನ್ನು ಇನ್ನು ಬಂದು ಕಾಡುವುದಿಲ್ಲವೆಂದು ಅವಳಿಗೆ ಖಚಿತವಾಗಿತ್ತು. ಮಗಳ ನಿರಾತಂಕವಾದ ನಿದ್ರೆಯನ್ನು ಕಂಡು ವಿಶ್ವನಾಥರಾಯರಿಗೆ ನಿಟ್ಟುಸಿರು ಬಿಡುವಂತೆ ಆಯಿತು. ಆ ರಾತ್ರಿ ಅವರಿಗೆ ಏನು ಮಾಡಿದರೂ ನಿದ್ರೆ ಬರಲಿಲ್ಲ. ತಮ್ಮೊಡನೆ ಲೀಲಾವತಿ ಹೇಳಿದ "ಮದುವೆಯ ಗೋರಿಯ ಮೇಲೆ ಸುಖದ ಸೌಧ" ಎನ್ನುವ ಮಾತು ಬಾರಿಬಾರಿಗೂ ನೆನಪಾಗಿ, ತಮ್ಮ ವಿಷಯದಲ್ಲಿ ಮಗಳಿಗೆ ಇರುವ ಅನನ್ಯಪ್ರೀತಿಯನ್ನು ಕಂಡು, ಅದಕ್ಕೆಲ್ಲ ತಾನು ಭಾಧ್ಯನೇ ಎನ್ನುವ ಚಿಂತೆಯಲ್ಲಿ, ಅವರಿಗೆ ನಿದ್ರೆ ಹತ್ತದಾಯಿತು.

ಊರಿಗೆ ಹೊರಡುವ ಮುನ್ನ ವಿಶ್ವನಾಥರಾಯರನ್ನು ಕಂಡು ಹೋಗು ವುದಾಗಿ ಹೇಳಿಹೋಗಿದ್ದ ಸುಧಾಕರ, ಊರಿನಿಂದ ಬಂದ ಭಯಂಕರ ಸುದ್ದಿ ಯನ್ನು ಕೇಳಿ ವಿಶ್ವನಾಥರಾಯರನ್ನು ಕಾಣುವ ವ್ಯವಧಾನವಿಲ್ಲದೆ, ಅದೇ ಘಳಿಗೆಯಲ್ಲಿ ಬಸ್ಸು ಹತ್ತಿ ಊರಿಗೆ ಹೊರಟ. ಕನಕಲಕ್ಷ್ಮಮ್ಮ ತಮ್ಮ ಯಜ ಮಾನರ ಖಾಹಿಲೆ ತುಂಬಾ ಉಲ್ಬಣಗೊಂಡಿರುವುದಾಗಿಯೂ, ಅವರು ಉಳಿಯುವುದು ಸಂಶಯಾಸ್ಪದವೆಂದೂ, ತಂತಿಕೊಡಲು ಅನುಕೂಲವಿಲ್ಲದೆ ಇದ್ದುದರಿಂದ ಆಳನ್ನು ಕಳುಹಿಸಿದ್ದರು. ಸುಧಾಕರ ನಿಂತ ಹೆಜ್ಜೆಯಲ್ಲಿ ಹಳ್ಳಿ ಸೇರಿದ. ಹಳ್ಳಿಯಲ್ಲಿ ರಾಘವೇಂದ್ರರಾಯರ ಸ್ಥಿತಿ ನಿಜಕ್ಕೂ ತುಂಬಾ ಹದ ಗೆಟ್ಟಿತ್ತು. ಕನಕಲಕ್ಷಮ್ಮನವರು ರಾಘವೇಂದ್ರರಾಯರಿಗೆ ಜ್ವರ ಬಂದಾಗ, ಎಲ್ಲರಿಗೂ ಬರುವಂತೆ ಇವರಿಗೂ ಮಲೇರಿಯಾ ಜ್ವರ ಬಂದಿದೆ, ಒಂದೆರಡು ದಿನಗಳಿದ್ದು ವಾಸಿಯಾಗುತ್ತೆ ಎಂದು ತಿಳಿದಿದ್ದರು. ಹೀಗಾಗಿ ಅವರನ್ನು ಕೂಡಲೇ ಮೈಸೂರಿಗೆ ಕರೆದುಕೊಂಡು ಹೋಗಿ ಔಷಧ ಪಥ್ಯಮಾಡಿಸದೆ, ಕೇವಲ ಹಳ್ಳಿಯ ಔಷಧಗಳನ್ನೇ ನೆಚ್ಚಿಕೊಂಡರು. ಇದರಿಂದ ರಾಘವೇಂದ್ರ ರಾಯರ ಖಾಹಿಲೆ ವಾಸಿಯಾಗುವ ಬದಲು ಇನ್ನೂ ಹೆಚ್ಚಾಯಿತು. ಆಗ ಬೇರೇನೂ ಮಾಡಲು ತೋಚದೆ ಸುಧಾಕರನಿಗೆ ಸುದ್ದಿ ಕೊಟ್ಟರು. ಸುಧಾ ಕರ ತಂದೆಯ ಸ್ಥಿತಿಯನ್ನು ಕಂಡು ಇಂತಹ ಖಾಹಿಲೆಯಲ್ಲೂ ತನಗೆ ಮುಂಚೆ ಸುದ್ದಿ ಕೊಡದೆ ಉದಾಸೀನಮಾಡಿದುದಕ್ಕಾಗಿ ತಾಯಿಯನ್ನು ಬೈದು, ಹಳ್ಳಿಯ ವೈದ್ಯರನ್ನು ನಂಬಿದರೆ ತಂದೆಯ ಆಸೆ ಬಿಡಬೇಕಾದೀತೆಂದು ಅವರನ್ನು ಆಸ್ಪತ್ರೆಗೆ ಸೇರಿಸಲು ಹೊಳೇನರಸೀಪುರಕ್ಕೆ ಗಾಡಿಯಲ್ಲಿ ಬಂದು ಅಲ್ಲಿಂದ ಬಸ್ಸಿನಲ್ಲಿ ಮೈಸೂರಿಗೆ ಬಂದರು. ಗಾಡಿಯ ಆಯಾಸ, ಮೋಟಾ ರಿನ ಕುಲಕಾಟ ರಾಘವೇಂದ್ರರಾಯರನ್ನು ತುಂಬಾ ಹಣ್ಣುಮಾಡಿತು. ಅವರು ಎರಡು ರಾತ್ರಿ ಆಸ್ಪತ್ರೆಯಲ್ಲಿ ನರಳಿ ನರಳಿ ಮೂರನೆಯ ದಿನ ದೈಹಿಕ ಯಾತನೆಯಿಂದ ಮುಕ್ತರಾದರು. ಡಾಕ್ಟರುಗಳು ಕೊಟ್ಟ ಇನ್‌ಜಕ್ಷನ್

ಹಾಗೂ ಔಷಧಿಗಳು ಯಾವುದೂ ಕೆಲಸಕ್ಕೆ ಬರಲಿಲ್ಲ. ಅವರ ಆಯಸ್ಸು ತೀರಿದಮೇಲೆ ಯಾವ ಡಾಕ್ಟರಿಂದ ಏನು ಪ್ರಯೋಜನವಾದೀತು ?

ಕನಕಲಕ್ಷಮ್ಮನವರು ಗಂಡನ ಶವದ ಮೇಲೆ ತಲೆ ಇಟ್ಟು ಎದೆ ಬಿರಿಯುವಂತೆ ಅತ್ತರು. ತಾವು ಉದಾಸೀನಮಾಡಿ ಗಂಡನನ್ನು ಕೊಂದೆ ನೆಂದು ತಮ್ಮನ್ನೇ ಸಾವಿರ ರೀತಿಯಲ್ಲಿ ಶಪಿಸಿಕೊಂಡರು. ಏನಾದರೇನು ? ಹೋದ ರಾಘವೇಂದ್ರರಾಯರು ಮರಳಿ ಬರಲಾರರು. ತಾವು ಗಂಡನ ಕಣ್ಮುಂದೆ ಮುತ್ತೈದೆ ಸಾವಿತ್ರಿಯಾಗಿ ಸಾಯುವ ಬದಲು ಇಳಿವಯಸ್ಸಿ ನಲ್ಲಿ ವೈಧವ್ಯವನ್ನು ಅನುಭವಿಸಬೇಕೆಂದು ತಮ್ಮ ಹಣೆಯಲ್ಲಿ ಬರೆದಿದ್ದರೆ ಯಾರಿಂದ ತಪ್ಪಿಸಲಾದೀತೆಂದು ಶೋಕಿಸಿದರು. ವಿಶ್ವನಾಥರಾಯರಿಗೆ ರಾಘವೇಂದ್ರರಾಯರು ಮೈಸೂರಿಗೆ ಬಂದ ದಿನವೇ ಸುದ್ದಿ ತಿಳಿಯಿತು. ಅವರು ಮಗಳೊಡನೆ ಆಸ್ಪತ್ರೆಗೆ ಧಾವಿಸಿ ಬಂದಿದ್ದರು. ಅವರಿಗೆ ಆಗಲೇ ರಾಘವೇಂದ್ರರಾಯರು ಉಳಿಯುವ ವಿಷಯ ಅನುಮಾನವಾಗಿತ್ತು. ಅವರ ಊಹೆ ನಿಜವಾಯಿತು. ಅವರು ಗಂಡನನ್ನು ಕಳೆದುಕೊಂಡು ಗೋಳಾ ಡುವ ತಂಗಿ ಕನಕಲಕ್ಷಮ್ಮನನ್ನು ತಮ್ಮ ಕೈಲಾದಷ್ಟು ರೀತಿಯಲ್ಲಿ ಸಮಾ ಧಾನ ಪಡಿಸಿದರು. ಯಾರು ಏನು ಸಮಾಧಾನ ಪಡಿಸಿದರೂ ಮುಕ್ಕಾದ ಕನಕಲಕ್ಷಮ್ಮನವರ ಬಾಳ್ವೆಯನ್ನು ಸರಿಮಾಡಲು ಅಸಮರ್ಥರಾಗಿದ್ದರು.

ನಡೆಯುಬೇಕಾದ ಅಂತ್ಯಕ್ರಿಯೆಗಳು ನಡೆದುವು. ತಂದೆ ತೀರಿಕೊಂಡ ಸುದ್ದಿಯನ್ನು ಕೇಳಿ ದಿವಾಕರ ಬೊಂಬಾಯಿಂದ ಹೆಂಡತಿ ಮಕ್ಕಳೊಡನೆ ಓಡಿ ಬಂದಿದ್ದ. ಅವನು ತನ್ನ ತಂದೆ ತೀರಿಕೊಳ್ಳುವಾಗ ಅವರ ಬಳಿ ಇಲ್ಲದು ದಕ್ಕಾಗಿ ತುಂಬಾ ವ್ಯಸನಪಟ್ಟ. ಆ ಪುಣ್ಯ ತನಗೆ ಇಲ್ಲದೆ ಹೋಯಿತೆಂದು ವ್ಯಥೆಪಟ್ಟ.

ಮನೆಗೆ ಹಿರಿಯರಾದ ವಿಶ್ವನಾಥರಾಯರೇ ನಿಂತುಕೊಂಡು ನಡೆಯ ಬೇಕಾದ ಅಪರ ಕರ್ಮಗಳನ್ನು ಮುಗಿಸಿಕೊಟ್ಟರು. ಮನೆಯ ನೋವಿನ ವಾತಾವರಣ ದಿನಗಳೆದಂತೆ ಕಡಿಮೆಯಾಯಿತು. ದಿವಾಕರ ತಾಯಿಯ ಕಣ್ಣುಮುಂದೆ ಇನ್ನು ಕೆಲವು ಕಾಲ ಇರಬಯಸಿ, ವಾರದ ತನ್ನ ರಜವನ್ನು ತಿಂಗಳ ಕಾಲ ಮುಂದುವರಿಸಿದ. ಇದರಿಂದ ಕನಕಲಕ್ಷಮ್ಮನಿಗೆ ಕೊಂಚ

ಸಮಾಧಾನವಾದರೂ ಅವರಿಗೆ ತಮ್ಮ ಪತಿ ಅಗಲಿದ ಮೇಲೆ ತಮ್ಮ ಬಾಳ್ವೆ ಬರಿದಾಗಿರುವಂತೆ ಕಂಡಿತು. ಅವರಿಗೆ ತಮ್ಮ ಒಂದು ಆಸೆ ನೆರವೇರದೆ ಹೋದುದಕ್ಕಾಗಿ ತುಂಬಾ ಮನೋಕ್ಲೇಶ ಉಂಟಾಗಿತ್ತು. ಅವರು ದಿವಾಕರ ಲೀಲಾವತಿಯರ ವಿವಾಹವನ್ನು ನೋಡುವ ಆಸೆಪಟ್ಟರು. ಅದು ದೈವ ನಿಯಾಮಕವಾಗಿರಲಿಲ್ಲವಾಗಿ ದಿವಾಕರ ಬೇರೊಂದು ಹುಡುಗಿಯನ್ನು ಕೈ ಹಿಡಿಯಬೇಕಾಯಿತು. ತಮ್ಮ ಗಂಡನೊಡನೆ ಮೈಸೂರಿನಲ್ಲಿಯೇ ಇರುವ ಆಸೆ ಇಟ್ಟುಕೊಂಡಿದ್ದರು. ಆದರೆ ಹಳ್ಳಿವಾಸ ಬಲವಂತವಾಗಿ ಮಾಡಲೇ ಬೇಕಾಗಿ ಬಂದು, ಅದಕ್ಕೆ ತಮ್ಮ ಗಂಡನನ್ನು ಬಲಿಕೊಟ್ಟಿದ್ದರು. ಸಾಯುವ ಗಳಿಗೆಯಲ್ಲಿ ಮಕ್ಕಳೆಲ್ಲ ಬಳಿಯಲ್ಲಿ ಇರುವ ಪುಣ್ಯ ತಾವು ಕೇಳಿಕೊಂಡು ಬರಲಿಲ್ಲ. ಅವರ ಪ್ರೀತಿಯ ದಿವಾಕರ ತಂದೆ ಸತ್ತು ಭಸ್ಮವಾದ ಮರುದಿನವೇ ಬರಲು ಆದದ್ದು ಅವರಿಗೆ ಮನುಷ್ಯನ ಆಸೆಗಳು ಎಷ್ಟು ಜೊಳ್ಳು ಎಂದೆನಿಸಿಬಿಟ್ಟಿತ್ತು.

ದಿವಾಕರ ಬೊಂಬಾಯಿಂದ ಬಂದ ಲಾಗಾಯಿತು ತಂದೆಯ ಅಪರಕರ್ಮಗಳಲ್ಲಿ ಲೀಲಾವತಿಯನ್ನು ಬಾಯಿತುಂಬಾ ಮಾತನಾಡಿಸಲು ಆಗಿರಲಿಲ್ಲ. ಇಷ್ಟಕ್ಕೂ ಅವಳು ಕಾಲೇಜಿಗೆ ತಪ್ಪದೆ ಹೋಗುತ್ತಿದ್ದುದರಿಂದ ದಿವಾಕರ ಹಾಗೂ ಅವಳ ಭೇಟಿ ನಡೆದಿರಲಿಲ್ಲವೆನ್ನಬೇಕು. ಅವನು ಮೈಸೂರಿಗೆ ಹಿಂದೊಮ್ಮೆ ಬಂದಿದ್ದಾಗಲೂ ಕಾರಣಾಂತರಗಳಿಂದ ಲೀಲಾವತಿಯನ್ನು ನೋಡಲು ಆಗಿರಲಿಲ್ಲ. ಅವನಿಗೆ ಲೀಲಾವತಿಯನ್ನು ಕಂಡು ಅವಳೊಡನೆ ಮಾತನಾಡಬೇಕೆಂಬ ಬಯಕೆ ಒಮ್ಮೊಮ್ಮೆ ಆಗುತ್ತಿತ್ತು. ಅವನು ತನಗೆ ಅನುರೂಪಳಾದ ಸತಿಯನ್ನೆ ವರಿಸಿ, ಅವಳಿಂದ ದೊರೆತ ದಾಂಪತ್ಯ ಸುಖ, ಪ್ರೇಮವನ್ನು ಅನುಭವಿಸಿದ್ದರೂ ಎಂದಾದರೊಮ್ಮೆ ಅವನಿಗೆ ಲೀಲಾವತಿಯ ನೆನಪು ಆಗುತ್ತಿತ್ತು. ಆಗ ಅವನಿಗೆ ಲೀಲಾವತಿ ಯಾವ ಬಗೆಯ ದೈಹಿಕ ಆಕರ್ಷಣೆಗಳ ಸೆಳೆಯಾಗದೆ, ಅವಳ ಬಗ್ಗೆ ಅವನ ಭಾವ ಮಧುರ ಮೈತ್ರಿಯ ಸೋದರಿ ವಾತ್ಸಲ್ಯವಾಗಿ ಕಾಣುತ್ತಿತ್ತು.

ವೈಕುಂಠ ಸಮಾರಾಧನೆಯ ದಿನ ಕಾಲೇಜಿದ್ದುದರಿಂದ ಅವಳು ಎಲ್ಲರ ಊಟವಾದ ಮೇಲೆ ಮನೆಗೆ ಬಂದಳು. ಅವಳಿಗೆ ಅದೇ ವೇಳೆಯಲ್ಲಿ

ಪರೀಕ್ಷೆಗಳ 'ಇನ್ವಿಜಿಲೇಷನ್' ಇದ್ದುದರಿಂದ ರಜ ತೆಗೆದುಕೊಳ್ಳಲು ಆಗಿರಲಿಲ್ಲ. ಲೀಲಾವತಿ ಮನೆಗೆ ಬಂದಾಗ ಎಲ್ಲರೂ ಊಟಮಾಡಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದರು. ಸುಧಾಕರ, ದಿವಾಕರ, ಅವರ ಪತ್ನಿಯರು, ಕನಕ ಲಕ್ಷಮ್ಮ ವಿಶ್ವನಾಥರಾಯರು ಯಾವುದೋ ಮಾತನಾಡುತ್ತ ಕುಳಿತಿದ್ದರು. ಇಷ್ಟು ಜನ ಸೇರಿದರೆ ಬೇರೆ ಯಾವ ಮಾತು ನಡೆದೀತು. ಎಲ್ಲಿಯೋ ಆರಂಭವಾದ ಮಾತು ಕಡೆಗೆ ರಾಘವೇಂದ್ರರಾಯರ ಗುಣ ಕಥನಕ್ಕೆ ಬಂದು ಮುಟ್ಟಿತ್ತು. ಅದನ್ನೆಲ್ಲಾ ಕೇಳುತ್ತಾ ದಿವಾಕರನ ಹೆಂಡತಿ, ತನ್ನ ಮಗು ವನ್ನು ತೊಡೆಯಮೇಲೆ ಮಲಗಿಸಿಕೊಂಡು ತಟ್ಟುತ್ತಿದ್ದಳು. ಲೀಲಾವತಿ ಬಂದೊಡನೆಯೇ ಕೆಲಸಮಾಡಿ ದಣಿದಿದ್ದ ಹೆಂಗಸರಿಗೆ ಬಿಡುವು ಕೊಡಲು ಅವಳ ಊಟದ ಏರ್ಪಾಡುಮಾಡಲು ದಿವಾಕರನೇ ಎದ್ದು ಅಡಿಗೆ ಮನೆ ಕಡೆ ಹೋದ. ಅಡಿಗೆಯವರು ಆಗಷ್ಟೇ ತಮ್ಮ ಊಟ ಮುಗಿಸಿ, ಉಳಿದು ಬಿಟ್ಟಿದ್ದ ಅಡಿಗೆಯನ್ನು ಎತ್ತಿಟ್ಟು ಮುಸುರೆ ಪಾತ್ರೆಗಳನ್ನು ಹೊರಗೆ ಇಡು ತ್ತಿದ್ದರು. ದಿವಾಕರನೇ ಅಡಿಗೆ ಮನೆಯಲ್ಲಿ ಲೀಲಾವತಿಗೆ ಎಲೆ ಮಣೆ ಹಾಕಿ ಸಿದ್ಧಪಡಿಸಿ, ಕೈಕಾಲುವರೆಸಿಕೊಳ್ಳಲು ಟವಲು ತಂದುಕೊಟ್ಟ. ಆಗ ದಿನದ ಕೆಲಸದಿಂದ ಆಯಾಸಗೊಂಡು ಬಂದಿದ್ದ ಲೀಲಾವತಿ ದಿವಾಕರನಿಗೆ ತುಂಬಾ ಬಡವಾದಂತೆ ಕಂಡಳು.

"ಯಾಕೆ ಲೀಲಾವತಿ ಹೀಗೆ ಆಗಿಬಿಟ್ಟಿದ್ದಿ?" ಎಂದ.

"ಹೇಗಾಗಿದ್ದೇನೆ?"

"ತುಂಬಾ ತೆಗೆದುಹೋಗಿ ಬಿಟ್ಟಿದ್ದಿ. ಹಿಂದೆ ನೋಡಿದಾಗ ನೀನು ಮೈತುಂಬಿಕೊಂಡು ಚೆನ್ನಾಗಿದ್ದಿ. ಈಗ ಏನೋ ಒಂದು ತರಹ ಕಾಣುತ್ತಿ."

"ಹೇಗೆ ಕಾಣುತ್ತೇನೆ?"

"ನಿನ್ನಲ್ಲಿ ಆಗ್ಗೂ ಈಗ್ಗೂ ಏನೋ ವ್ಯತ್ಯಾಸ ಕಾಣುತ್ತೆ."

"ನೀನು ತಾನೇ ಇನ್ನೇನು? ನೀನೂ ತುಂಬಾ ಬದಲಾಗಿಬಿಟ್ಟಿದ್ದಿ!"

"ಹೇಗೆ?"

"ಈಗ ನೀನು ಒಂದು ಮಗುವಿನ ತಂದೆಯಾಗಿದ್ದಿ!"

ಈ ಮಾತು ಕೇಳಿ ದಿವಾಕರನಿಗೆ ಸಂಕೋಚ ಎನಿಸಿತಾದರೂ ಅನ್ನು

ನಸುನಕ್ಕ.

"ನೀನೂ ಮದುವೆಯಾಗಿದ್ದರೆ ನೀನೂ ಮಕ್ಕಳ ತಾಯಿಯಾಗುತ್ತಿದ್ದೆ" ಎಂದು ಹೇಳಲು ಮನಸ್ಸು ಆವನಿಗೆ. ಆದರೆ ಹೇಳಲು ಬಾಯಿ ಬರದೆ ಸುಮ್ಮನೆ ಕುತೂಹಲಪೂರ್ವಕವಾಗಿ ನೋಡಿದ.

"ಯಾಕೆ ಹಾಗೆ ನೋಡುತ್ತಿ?"

"ಯಾಕೂ ಇಲ್ಲ!"

"ಏನು ಹೇಳು. ಪರವಾಗಿಲ್ಲ."

"ಅಲ್ಲ ಲೀಲಾ—ನೀನು ಇನ್ನೂ ಹೀಗೇನೇ ಇದ್ದೀಯಲ್ಲಾ...."

"ಹೀಗೆ ಅಂದರೆ?"

"ಇನ್ನೂ ಒಂಟಿಯಾಗಿ...."

"ಹೀಗೆಂದು ಯಾರು ಹೇಳಿದರು—ನನ್ನ ಜತೆಯಲ್ಲಿ ನಮ್ಮ ತಂದೆ ಇದ್ದಾರಲ್ಲ" ಎಂದು ಮುಗುಳುನಕ್ಕಳು. ಇಷ್ಟು ಹೊತ್ತಿಗೆ ಬಡಿಸಿಯಾಯಿತೆಂದು ಅಡಿಗೆ ಮನೆಯಿಂದ ಕರೆ ಬಂದುದರಿಂದ ಲೀಲಾವತಿ ದಿವಾಕರರಿಬ್ಬರೂ ಅಡಿಗೆ ಮನೆಗೆ ಬಂದರು.

ಆ ಸಂಜೆಯೆಲ್ಲಾ ತಂದೆಮಕ್ಕಳು ಅವರ ಮನೆಯಲ್ಲಿಯೇ ಕಳೆದು ರಾತ್ರಿ ಮಲಗಿಕೊಳ್ಳಲು ತಮ್ಮ ಮನೆಗೆ ಹೊರಟರು. ವಿಶ್ವನಾಥರಾಯರನ್ನು ಕಳುಹಿಸಿಕೊಡಲು ದಿವಾಕರನೇ ಅಷ್ಟು ದೂರ ಜತೆಯಲ್ಲಿ ಬಂದ.

"ದಿವೂ, ನೀನಿನ್ನು ಮನೆಗೆ ಹಿಂದಿರುಗು; ನಾವು ಹೋಗುತ್ತೇವೆ." ಎಂದು ಹೇಳುತ್ತಿದ್ದರು—ಅಷ್ಟು ದೂರ, ಇನ್ನಿಷ್ಟು ದೂರವೆಂದು ದಿವಾಕರ ಅವರ ಮನೆಯ ತನಕ ಬಂದೇ ಬಿಟ್ಟಿದ್ದ.

"ಹೇಗೂ ಮನೆಗೆ ಬಂದು ಬಿಟ್ಟಿದ್ದೀಯ—ಒಂದು ಕ್ಷಣ 'ರೆಸ್ಟು' ತೊಗೊಂಡು ಹೋಗುವಿಯಂತೆ ಬಾ ಕೂತುಕೋ" ಎಂದರು ವಿಶ್ವನಾಥರಾಯರು.

"ಇಲ್ಲ ಮಾವ ಇನ್ನೊಂದು ದಿನ ಬರುತ್ತೇನೆ. ಅವಳು ಅಲ್ಲಿ ಕಾಯುತ್ತಿರುತ್ತಾಳೆ" ಎಂದು ರಾಗ ತೆಗೆದ.

"ಅದೆಷ್ಟು ಹೆದರುತ್ತೀಯೆ ದೀವು ನಿನ್ನ ಹೆಂಡ್ತೀಗೆ?"

—ಎಂದು ಲೀಲಾವತಿ ಹಾಸ್ಯಮಾಡಿದಳು.

"ಅವಳು ನಿನ್ನ ಹಾಗಲ್ಲ ಲೀಲಾ. ಅವಳು ಒಂದು ತರಹದ ಹುಡುಗಿ ನಾನು ಸಂಜೆ ನಿನ್ನೊಡನೆ ತಮಾಷೆಯಾಗಿ ಹರಟುತ್ತಿದ್ದುದಕ್ಕೆ ನನ್ನನ್ನು ದುರುಗುಟ್ಟಿಕೊಂಡು ನೋಡುತ್ತಿದ್ದಳು."

"ಹಾಗಾದರೆ ಅಷ್ಟು ಸಂಶಯದ ಪ್ರಕೃತಿಯೆ ? ತಿರುಗಿ ಬೊಂಬಾಯಿಯಂತಹ ಶಹರಿನಲ್ಲಿ ಇದ್ದಾಳೆ ? "

"ಯಾವೂರಲ್ಲಿ ಇದ್ದರೆ ಏನು? ಹುಟ್ಟುಗುಣ ಎಲ್ಲಿ ಬಿಡುತ್ತೆ" —ಎಂದು ನಕ್ಕ.

"ಹೋಗಲಿ ನಾಳೆ ನನಗೆ ರಜವಿದೆ. ನೀನೂ ನಿನ್ನ ಹೆಂಡತಿಯೂ ಇಲ್ಲಿಗೇ ಊಟಕ್ಕೆ ಬಂದುಬಿಡಿ. ಮತ್ತೆ ನೀನು ಬೊಂಬಾಯಿಗೆ ಹೊರಟು ಹೋದಮೇಲೆ ಈ ಕಡೆ ಬರುವುದು ಎಷ್ಟು ವರ್ಷಕ್ಕೊ ಏನೋ...." ಎಂದಳು.

ವಿಶ್ವನಾಥರಾಯರೂ ಮಗಳ ಮಾತನ್ನು ಅನುಮೋದಿಸಿದರು. ತಂದೆ ಮಕ್ಕಳು ಕೂಡಿ ವಿಶ್ವಾಸದಿಂದ ಕೊಡುವ ಆಹ್ವಾನವನ್ನು ತಿರಸ್ಕರಿಸಲು ಮನವಾಗದೆ ದಿವಾಕರ ಹಾಗೆಯೇ ಆಗಲೆಂದು ಹೇಳಿ ಅವರನ್ನು ಬೀಳ್ಕೊಂಡು ಮನೆಯ ಕಡೆ ಹೊರಟ.

ಮಾರನೆಯ ದಿನ ದಿವಾಕರ ಹೇಳಿದ್ದಂತೆ ಹೆಂಡತಿ ಮಕ್ಕಳನ್ನು ಕರೆದುಕೊಂಡು ಬಂದ. ಲೀಲಾವತಿ ಬಂದವರನ್ನು ಆದರದಿಂದ ಬರಮಾಡಿಕೊಂಡಳು.

ಹೋಗುತ್ತಿದ್ದಂತೆ ಮೊದಲು ಫಲಹಾರವಾಯಿತು. ಅನಂತರ ವಿಶ್ವನಾಥರಾಯರ ಡ್ರಾಯಿಂಗ್ ರೂಮಿನಲ್ಲಿ ಎಲ್ಲರೂ ಕುಳಿತು ಹರಟೆ ಹೊಡೆಯಲು ಆರಂಭಿಸಿದರು.

ಮನೆಗೆ ನೆಂಟರು ಬಂದಿದ್ದರಿಂದ ಆ ದಿನದ ಊಟ ವಿಶೇಷ ರೀತಿಯದಾಗಿತ್ತು. ಲೀಲಾವತಿಯೇ ಖುದ್ದು ನಿಂತು ಜಹಂಗೀರ್, ಬಾದಾಮಿ ಹಾಲು, ಬಿಸಿ ಬೇಳೆ ಹುಳಿಯನ್ನವನ್ನು ಮುಖ್ಯ ಅತಿಥಿಗಳ ಸಲುವಾಗಿ ಮಾಡಿಸುತ್ತಿದ್ದಳು. ಊಟಕ್ಕೆ ತನ್ನ ಆಪ್ತಗೆಳೆಯರಾದ ಸುಮಿತ್ರೆ ಸದಾಶಿವರನ್ನು ಆಹ್ವಾನಿಸಿದ್ದಳು. ಸುಮಿತ್ರೆ ಲೀಲಾವತಿಯ ಆಗ್ರಹಕ್ಕೆ ತನ್ನ

ಫಾರ್ಮಸಿಯನ್ನು ಹನ್ನೊಂದಕ್ಕೇ ಮುಚ್ಚಿ ಸದಾಶಿವನೊಡನೆ ಲೀಲಾವತಿಯನ್ನು ಕೂಡಿಕೊಂಡಳು. ಲೀಲಾವತಿ, ಸುಮಿತ್ರೆ ಸದಾಶಿವರನ್ನು ದಿವಾಕರ ನಿರ್ಮಲೆಯರಿಗೆ ಪರಿಚಯ ಮಾಡಿಸಿಕೊಟ್ಟಳು. ಲೀಲಾವತಿಗೆ ಸುಮಿತ್ರೆಯ ಸಮ್ಮುಖದಲ್ಲಿ ದಿವಾಕರನ ಹೆಸರನ್ನು ಉಚ್ಚರಿಸದಾಗಿತ್ತು. ಧ್ವನಿಯೇ ಬವಲಾಗಿ, ಮುಖದಲ್ಲಿ ಒಂದು ಬಗೆಯ ಉದ್ವೇಗ ಕಾಣಿಸಿಕೊಂಡಿತ್ತು. ಹಾಸ್ಟೆಲಿನಲ್ಲಿ ಅವಳು ಇದ್ದಾಗ ಲೀಲಾವತಿ ಹಾಗೂ ದಿವಾಕರನ ಪ್ರಣಯ ಕಥೆಯನ್ನು ಸುಮಿತ್ರೆ ಕೇಳಿದ್ದಳು. ಅವಳು ದಿವಾಕರ ಲೀಲಾವತಿಯರ ಮುಖವನ್ನು ಕ್ಷಣಕಾಲ ನೋಡಿ ತನ್ನಲ್ಲೇ ನಸುನಕ್ಕಳು. ಲೀಲಾವತಿಗೆ ಎಂದೂ ಇಲ್ಲದಿದ್ದ ಒಂದು ಬಗೆಯ ಸಂಕೋಚ ಭಾವ ಇಂದು ಉಂಟಾಗಿತ್ತು. ಅವಳು ಯಾವುದೋ ಕೆಲಸ ನೆನೆಸಿಕೊಂಡು ಅಲ್ಲಿಂದ ಕಾಲು ತೆಗೆದಳು. ದಿವಾಕರನಿಗೂ ಹೀಗೆಯೇ ಆಯಿತು. ಅವನು ಹಿಂದೊಮ್ಮೆ ಲೀಲಾವತಿಯನ್ನು ಪ್ರೇಮಿಸಿದ್ದ ವಿಷಯ ಸುಮಿತ್ರೆಗೆ ತಿಳಿದಿದ್ದುದರಿಂದ ಅವನ ಈಚಿನ ಭಾವನೆಗಳನ್ನು ತಿಳಿಯಲು ಅವನನ್ನೇ ತೀಕ್ಷ್ಣವಾಗಿ ನೋಡುತ್ತಿದ್ದ ಅವಳ ಮಿಂಚುಗಣ್ಣುಗಳನ್ನು ಎದುರಿಸಲಾರದೆ ತಲೆತಗ್ಗಿಸಿನಿಂತು, ಅವಳೊಡನೆ ನಾಲ್ಕು ಉಪಚಾರದ ಮಾತನಾಡಿ ನಿರ್ಮಲೆಯನ್ನು ಅಲ್ಲಿಯೇ ಬಿಟ್ಟು ತಾನು ಸದಾಶಿವನೊಡನೆ ಮಾತನಾಡುತ್ತಾ ಕುಳಿತುಕೊಂಡ. ಕೊಂಚ ಹೊತ್ತಿನಲ್ಲಿಯೇ ಮಾತು ಬೇಸರವಾಯಿತೋ ಏನೋ. ಅವನು ಸದಾಶಿವನ ಕೈಗೆ ಅಂದಿನ ವೃತ್ತಪತ್ರಿಕೆ ಇತ್ತು, ಮನೆಯನ್ನೊಮ್ಮೆ ಪ್ರದಕ್ಷಿಣೆ ಹಾಕುತ್ತಾ ನಡೆದು ಲೀಲಾವತಿಯ ಲೈಬ್ರರಿ ಇದ್ದ ಅವಳ ವ್ಯಾಸಂಗದ ಕೋಣೆಗೆ ಬಂದ. ಅಲ್ಲಿ ಲೀಲಾವತಿ ಕನ್ನಡ, ಇಂಗ್ಲೀಷ್ ಸಾಹಿತ್ಯದ ಅತ್ಯುತ್ತಮ ಗ್ರಂಥ ಭಂಡಾರವನ್ನೇ ಸಂಗ್ರಹಿಸಿದ್ದಳು. ಅವುಗಳನ್ನು ನೋಡಿ ಚಕಿತನಾದ ದಿವಾಕರ. ಅವನೇ ಲೀಲಾವತಿಗೆ ಸಂಗೀತಗಳಲ್ಲಿ ಆಸಕ್ತಿ ಉಂಟುಮಾಡಿದ ಗುರು. ಅವನು ಹುಟ್ಟುಹಾಕಿದ್ದ ಬೀಜ ವಾಚನಾಭಿರುಚಿ ಇಂದು ಬೆಳೆದು ಹೆಮ್ಮರವಾಗಿದ್ದುದು ಅವನಿಗೆ ನಿಜವಾಗಿಯೇ ಹೆಮ್ಮೆಯ ಸಂಗತಿಯಾಯಿತು. ವಾಚನಾಭಿರುಚಿ ಲೀಲಾವತಿಯ ಜೀವನದಲ್ಲಿ ಹವ್ಯಾಸವಾಗದೆ ಅದು ಒಡನಾಡಿಯಾಗಿ ಮಾರ್ಪಟ್ಟಿತ್ತು. ಪುಸ್ತಕಗಳೇ ಅನೇಕ ಬಾರಿ ಅವಳ

ಸಂಗಾತಿ. ಅವಳು ಬೇಸರಗೊಂಡಾಗ ಅವಳ ಮನಶ್ಶಾಂತಿಗೆ ಭಂಗ ಬರದಂತೆ ನೋಡಿಕೊಳ್ಳುತ್ತಿದ್ದ ಆತ್ಮೀಯ ಮಿತ್ರರು, ನಿಜವಾದ ಬಂಧುಗಳು. ಅವನು ನೋಡುತ್ತಾ ಬೆರಗಾಗಿ ನಿಂತಿದ್ದಾಗ, ಹಿಂದುಗಡೆ ಯಾರೋ ಬಂದಂತಾಯಿತು. ದಿವಾಕರ ಹಿಂದಿರುಗಿದಾಗ ಲೀಲಾವತಿ ನಗುತ್ತ ನಿಂತಿದ್ದಳು.

"ಇದೇನು ದೇವೂ ನೀನು ಇಲ್ಲಿ?"

"ಬೇಜಾರಾಯಿತು. ಹಾಗೇ ನಿನ್ನ ಲೈಬ್ರರಿ ನೋಡುತ್ತಾ ನಿಂತುಕೊಂಡೆ."

"ನಿರ್ಮಲೆ ಎಲ್ಲಿ?"

"ಬಹುಶಃ ಸುಮಿತ್ರೆ ಅವನೊಡನೆ ಮಾತನಾಡುತ್ತಿರಬೇಕು."

ಈ ಮಾತು ಕೇಳಿ ಲೀಲಾವತಿ ಏನೋ ನೆನಪು ಮಾಡಿಕೊಂಡು ನಕ್ಕಳು.

"ಯಾಕೆ ನಗು?"

"ಏನೇ ಆಗಲಿ. ನಿಮ್ಮ ನಿರ್ಮಲೆ ನಿಮ್ಮಷ್ಟು ಮಾತುಗಾರಳಲ್ಲ."

"ಹಾಗೆಂದರೆ?"

"ನಮ್ಮಂತೆ ಮನಸ್ಸು ಬಂದಂತೆ ಹರಟುವ ಹುಡುಗಿಯಲ್ಲ. ಯಾವ ಮಾತನಾಡಿದರೂ ಮೊದಲು ಒಂದು ಬಾರಿ ಯೋಚನೆ ಮಾಡಿ, ಈ ಮಾತು ಹೇಳಿದರೆ ಸರಿಯೇ ತಪ್ಪೇ ಎಂದು ತೂಗಿ ನೋಡಿ ಆಡುತ್ತಾಳೆ........"

"ಹೌದು ಅವಳ ಸ್ವಭಾವವೇ ಹಾಗೆ. ಅವಳು ಇಷ್ಟೇ ಅಲ್ಲ. ಮನೆಯಲ್ಲೂ ಹೆಚ್ಚು ಮಾತನಾಡುವುದಿಲ್ಲ."

"ನಿನಗೆ ತುಂಬಾ ಮಾತುಬೇಕಲ್ಲ—"

"ಹೌದು ಏನು ಮಾಡುವುದು? ಅಷ್ಟೇ ಅವಳಿಗೆ ಮಾತು ಬೇಡವಾಗಿದೆ."

"ಹಾಗಾದರೆ ನಿಮ್ಮ ದಾಂಪತ್ಯ ಜೀವನ?"

"ಅದರಲ್ಲಿ ಯಾವ ಬಗೆಯ ಕೊರತೆ ಇಲ್ಲ—ಮಾತಿನಲ್ಲಿ ಹೇಳುವ ವಿಷಯವನ್ನು ಅವಳು ನೋಟದಲ್ಲಿ ಹೇಳುತ್ತಾಳೆ. ನನ್ನ ಮನಸ್ಸಿನಲ್ಲಿ

ಇರುವ ಎಲ್ಲ ಆಸೆ-ಬಯಕೆಗಳನ್ನು ಅದೂ ಯಾವ ಮಾಯದಲ್ಲಿ ಪತ್ತೆಮಾಡಿ ಬಿಡುತ್ತಾಳೋ ಅಂತೂ, ನಾನು ಬಯಸಿದುದೆಲ್ಲ ಕ್ಷಣಮಾತ್ರದಲ್ಲಿ ಈಡೇರುತ್ತದೆ. ಅವಳಲ್ಲಿ ಯಾವ ಕೊರತೆ ಕಂಡಿಲ್ಲ."

"ಹಾಗಾದರೆ ನೀನು ನಿರ್ಮಲೆಯೊಂದಿಗೆ ನಿಜವಾಗಿಯೂ ಸುಖವಾಗಿದ್ದೀಯಾ?"

"ನಿನ್ನ ಮಾತು ನನಗೆ ಅರ್ಥವಾಗುವುದಿಲ್ಲ ಲೀಲಾ. ಅವಳು ಹೆಚ್ಚು ಮಾತುಗಾರಳಲ್ಲವೆಂಬ ಮಾತ್ರಕ್ಕೆ ನಾನು ಅಸುಖಿ ಎಂದಾಯಿತೇ?"

"ನನ್ನ ಪ್ರಶ್ನೆ ಅದಲ್ಲ. ನಿರ್ಮಲೆಯನ್ನು ಮದುವೆಯಾದಾಗ ಅವಳಲ್ಲಿ ನಿನಗೆ ಪ್ರೀತಿ ಇರಲಿಲ್ಲ. ಇಂಥವಳನ್ನು ಮದುವೆಯಾಗಿ ನೀನು ಸುಖವಾಗಿದ್ದೀಯಾ ಎಂದು ಕೇಳಿದೆ."

"ಹೌದು ಅವಳನ್ನು ಮದುವೆಯಾಗುವಾಗ ಅವಳಲ್ಲಿ ನನಗೆ ಪ್ರೀತಿ ಇರಲಿಲ್ಲ ದಿಟ. ಆದರೇನು ಮದುವೆಯಾಗಿ ಮನೆಗೆ ಬಂದಮೇಲೆ ಅವಳು ಬೇರೆಯ ವ್ಯಕ್ತಿ ಎನ್ನುವ ಭಾವನೆ ನನಗೆ ಬರಲಿಲ್ಲ. ಅವಳನ್ನು ಸಹಜವಾಗಿಯೇ ಪ್ರೀತಿಸಿದೆ. ಇದು ನನಗೆ ಸುಖ ಶಾಂತಿಗಳನ್ನು ತಂದಿತ್ತಿತು."

"ಈ ಮಾತು ಕೇಳಿ ನನಗೆ ತುಂಬಾ ಸಂತೋಷವಾಗುತ್ತಿದೆ. ಯಾಕೆಂದರೆ ನೀನು ನನ್ನನ್ನು ಪ್ರಾಣಕ್ಕಿಂತ ಅಧಿಕವಾಗಿ ಪ್ರೀತಿಸುತ್ತಿದ್ದೆ. ನಾನು ಕಾರಣಾಂತರಗಳಿಂದ ನಿನ್ನನ್ನು ಮದುವೆಯಾಗಲು ಸಾಧ್ಯವಿಲ್ಲವಾದಾಗ ನೀನು—ನನ್ನಲ್ಲಿ ನಿಷ್ಕಳಂಕ ಪ್ರೇಮವುಳ್ಳ ನೀನು—ನನ್ನ ವರ್ತನೆಯಿಂದ ಭಗ್ನ ಮನೋರಥನಾಗಿ ಆತ್ಮಹತ್ಯಮಾಡಿಕೊಳ್ಳದೆ ಅಥವಾ ನನ್ನ ಧ್ಯಾನದಲ್ಲಿ ನಿನಗೆ ಬುದ್ಧಿ ವಿಕಲ್ಪವಾಗುವುದೆಂದು ತಿಳಿದಿದ್ದೆ. ಇಲ್ಲವಾಗಿದ್ದರೆ—ನೀನು ಆಜನ್ಮ ಪರ್ಯಂತ ಬ್ರಹ್ಮಚಾರಿಯಾಗಿ ಉಳಿಯುವೆ ಎಂದು ತಿಳಿದಿದ್ದೆ. ಆದರೆ ನನ್ನ ಎಲ್ಲ ಊಹೆಗಳೂ ಸುಳ್ಳಾಯಿತು. ನೀನು ನಿರ್ಮಲೆಯನ್ನು ಮದುವೆಯಾಗಿ, ಸುಖದಿಂದ ಇರುವುದು ನಿಜವಾಗಿಯೂ ಸಂತೋಷವನ್ನುಂಟುಮಾಡುವ ವಿಷಯ."

"ನಿಜ ಹೇಳುವುದಾದರೆ ನೀನು ಮದುವೆಗೆ ಒಪ್ಪದೆ ಹೋದಮೇಲೆ ನನ್ನ ಹೃದಯಕ್ಕಾದ ನೋವು ಎಷ್ಟೆಂದು ಹೇಳಿದರೆ ನೀನು ನಂಬುವುದಿಲ್ಲ.

ನನಗೆ ಜೀವನದಲ್ಲಿ ಕಾರ್ಗತ್ತಲೆ ಕವಿದು ಬದುಕುವ ಆಸೆಯೇ ಇಲ್ಲವಾಯಿತು. ಅದೇ ಸ್ಥಿತಿಯಲ್ಲಿ ನಾನು ಹೆಚ್ಚುಕಾಲ ಇದ್ದುಬಿಟ್ಟಿದ್ದರೆ ನೀನು ಹೇಳುತ್ತಿದ್ದ ಸಂಗತಿ—ಬುದ್ಧಿ ಭ್ರಮಣೆ ಇಲ್ಲ ಆತ್ಮಹತ್ಯೆಯ ಮಾತು ಸತ್ಯವಾಗುತ್ತಿತ್ತೋ ಏನೋ. ಆದರೆ ಆ ವೇಳೆಗೆ ನನ್ನ ದೈವ ಕಣ್ಣು ತೆರೆಯಿತು. ನನ್ನ ದೃಷ್ಟಿಪಥಕ್ಕೆ ನಿರ್ಮಲೆ ಬಿದ್ದಳು. ಅವಳು ದಿಕ್ಕುಕೆಟ್ಟ ನನ್ನ ಬಾಳಿಗೆ ಬೆಳಕಾದಳು. ಅವಳ ಅಮೃತಮಯ ಸಾನ್ನಿಧ್ಯದಲ್ಲಿ ನನ್ನ ಮನಸ್ಸಿನ ಬೇಗೆ ತಪ್ತವಾಯಿತು. ಬರಿದಾಗಿದ್ದ ಹೃದಯ ಮಂದಿರದಲ್ಲಿ ಪ್ರೇಮ ಮೂರ್ತಿ ಪ್ರತಿಷ್ಠಾಪನೆಯಾಯಿತು. ಆ ಲಾಗಾಯಿತು ನಾನು ನೆಮ್ಮದಿಯಾಗಿದ್ದೇನೆ. ದಾಂಪತ್ಯ ಜೀವನದಲ್ಲಿ ತೃಪ್ತಿಯಿಂದ ಇದ್ದೇನೆ. ಹೀಗೆಂದು ಹೇಳಿದಮಾತ್ರಕ್ಕೆ ನಿನ್ನನ್ನು ಪೂರ್ಣವಾಗಿ ಮರೆತುಬಿಟ್ಟಿರುವೆನೆಂದಲ್ಲ. ನಿನ್ನ ನೆನಪೂ ಆಗಿಂದಾಗ್ಯೆ ಉಂಟಾಗುತ್ತದೆ. ಆದರೆ ನೀನು ನನಗೆ ಧಾರೆ ಎರೆದ ನಿಸ್ವಾರ್ಥ ಪ್ರೇಮದಂತೆಯೇ ನಾನೂ ನಿನ್ನನ್ನು ನಿಸ್ವಾರ್ಥಪ್ರೇಮದಿಂದ ನೋಡುವುದನ್ನು ಕಲಿತಿದ್ದೇನೆ. ನೀನು ಈಗ ನನ್ನ ಭಾಗಕ್ಕೆ ಹೆಮ್ಮೆಯ ಸೋದರಿ. ಎಂದಮೇಲೆ ನೀನು ನನ್ನವಳಾಗದ ಮಾತ್ರಕ್ಕೆ ನನಗೆ ದುಃಖವಿಲ್ಲ. ನನಗೆ ಈಗ ಬೇಕಾಗಿರುವುದು ನೀನು ಎಲ್ಲಾದರೂ ಸುಖವಾಗಿರುವುದು. ದೇವರು ನಿನ್ನನ್ನು ಚೆನ್ನಾಗಿ ಇಟ್ಟಿರಲೆಂಬುದೇ ನನ್ನ ಹಾರೈಕೆ." ಈ ಮಾತು ಹೇಳುವಾಗ ಅವನ ಧ್ವನಿ ಗದ್ಗದಿತವಾಯಿತು. ಏಕೋ ಅವನ ಕಣ್ಣು ಹನಿಗೂಡಿತು. ಲೀಲಾವತಿಯ ಕಣ್ಣು ಮಂಜಾಯಿತು.

"ದಿವೂ, ಇಂದಿಗೆ ನಿನ್ನ ಪೂರ್ಣವಾಗಿ ತಿಳಿದುಕೊಳ್ಳಲು ನಾನು ಸಮರ್ಥಳಾದೆ. ನಿನಗೆ ನನ್ನಲ್ಲಿರುವ ಅನನ್ಯಭಾವ ಯಾವ ಆದರ್ಶ ಪ್ರೇಮಿಗೂ ಕಡಮೆ ಇಲ್ಲ. ನಿನ್ನನ್ನು ತಿರಸ್ಕರಿಸಿದ ನನ್ನಲ್ಲಿ ನಿನಗೆ ಸೇಡಿನ, ಪ್ರತೀಕಾರದ ಮನೋಭಾವ ಬೆಳೆಯದೆ ಪಾಷಾಣ ಹೃದಯಿಯಾದ ನನ್ನಂಥವಳ ಬಗ್ಗೆ ನಿನಗಿರುವ ಸದ್ಭಾವನೆಯನ್ನು ನೋಡಿದರೆ--ದಿವೂ, ನೀನು ಮನುಷ್ಯನಲ್ಲ. ದಿವೂ ನೀನು ದೇವತೆ. ನಿನ್ನನ್ನು ಕೈಹಿಡಿದ ಆ ನಿರ್ಮಲೆ ನಿಜವಾಗಿಯೂ ಪುಣ್ಯವಂತೆ" ಎಂದಳು ಉದ್ವೇಗದಿಂದ ಲೀಲಾವತಿ.

"ಕಳೆದುಕೊಂಡುದನ್ನು ಚಿಂತಿಸಿ ಫಲವಿಲ್ಲ ಲೀಲಾ. ಅದನ್ನೆಲ್ಲ

ಮರೆತು ನೀನೂ ನನ್ನಂತೆಯೇ ಹೊಸ ಜೀವನ ಆರಂಭಿಸು. ಹಳೆಯ ಕಹಿ ನೆನೆಪುಗಳ ಪುಟಗಳನ್ನು ನಿನ್ನ ಆತ್ಮವೃತ್ತದಿಂದ ಕಿತ್ತುಹಾಕಿ, ಹೊಸ ಬಾಳಗೀತೆಯನ್ನು ರಚಿಸು. ಅದೇ ನನ್ನ ಪುಟ್ಟ ಹೃದಯದ ಹಾರೈಕೆ."

"ಹಳೆಯ ಒಡಲಿನಲ್ಲಿ ಹೊಸ ಚೈತನ್ಯವನ್ನು ಹೇಗೆ ತುಂಬಲಿ ದಿವೂ? ಹಳೆಯ ವೀಣೆಯಲ್ಲಿ ಹೊಸದಾಗಿ ಸಂಚಾರ ಹೇಗೆ ಹುಟ್ಟಿಸಲಿ ?"

"ನನ್ನ ಜೀವನವನ್ನು ನೀನು ಅನುಕರಿಸಿ—ನನ್ನ ಹೆಜ್ಜೆಯಲ್ಲಿ ನಿನ್ನ ಹೆಜ್ಜೆ ಹಾಕು. ಈಗಲೂ ಕಾಲಮಿಂಚಿಹೋಗಿಲ್ಲ. ಅಳಿದು ಹೋದುದು ನಮ್ಮದಲ್ಲ, ಬರಲಿರುವುದು ನಮ್ಮದು. ನನ್ನಂತೆ ನೀನೂ ಸಂಸಾರಿಯಾಗು. ಆಗ ನಿನ್ನ ಬಾಳಿನ ಕಹಿಯನ್ನು ಮರೆಯಲು ಸಾಧ್ಯವಾದೀತು."

"ಈಗ ನಾನು ಸಂಸಾರಿಯಾಗಿಲ್ಲವೆಂದು ನಿನ್ನ ಭಾವನೆಯೇ ದಿವೂ?"

"ಸಂಸಾರವೆಂದರೆ ಏನೆಂದು ತಿಳಿದಿರುವೆ ಲೀಲಾ? ತನ್ನವರೆನ್ನುವ ಪತಿ ಪುತ್ರರಿಲ್ಲದ ಮೇಲೆ ಮಾಡುವ ಸಂಸಾರ ಒಂದು ಸಂಸಾರವೆ?—ಸಂಸಾರದ ಕೇಂದ್ರ ಸ್ವಾರ್ಥ—ಸ್ವಾರ್ಥರಹಿತ ಸಂಸಾರ ಅದು ಸಂಸಾರಿಯ ಸಂಸಾರವಲ್ಲ; ಸನ್ಯಾಸಿಯ ಸಂಸಾರ. ಇದಕ್ಕೆ ಮನಸ್ಸು ಪಕ್ವವಾಗುವ ಮುನ್ನ ಪತಿಸುತರ ವ್ಯಾಮೋಹ, ಅದರ ಹಿಂದೆ ಬರುವ ಕಷ್ಟಸುಖಗಳ ಉಳಿಯ ಪೆಟ್ಟು ಬೀಳದೆ—ಒಮ್ಮೆಲೇ ವಿರಕ್ತ ಸಂಸಾರಿಯಾಗಲು ಸಾಧ್ಯವೇ ಲೀಲಾ. ನಮ್ಮಲ್ಲಿನ ವಾಸನೆ ಕಳೆದುಕೊಳ್ಳದೆ ಜೀವನದಲ್ಲಿ ನಿರ್ಲಿಪ್ತವಾಗಲು ಸಾಧ್ಯವೇ ? ಸಂಸಾರದ ದಿವ್ಯಾಗ್ನಿಯಲ್ಲಿ ಬೇಯದೆ ಜೀವನ್ಮುಕ್ತರಾಗಲು ಸಾಧ್ಯವೇ ಲೀಲಾ ? ಆದುದರಿಂದ ನೀನೂ ನಮ್ಮೆಲ್ಲರಂತೆ ಮದುವೆಯಾಗಿ ಸಂಸಾರಿಯಾಗು. ಇದರಿಂದ ನಿನಗೆ ಇಹಪರಗಳೆರಡರಲ್ಲಿಯೂ ಸುಖ ಸದ್ಗತಿಯುಂಟು." ಎಂದ ದಿವಾಕರ.

"ದಿವೂ, ಇನ್ನೂ ನಿನಗೆ ನನ್ನ ಮದುವೆಯ ಚಪಲವೆ ?"

—ಎಂದು ಒಣನಗೆ ನಕ್ಕಳು ಲೀಲಾವತಿ.

"ನೀನೇಕೆ ಮದುವೆಯಾಗಬಾರದು ? ಮದುವೆಗೆ ಮೀರಿದ ವಯಸ್ಸೇ ನಿನ್ನದು ? ನೀನು ಮನಸ್ಸುಮಾಡಿದರೆ ಇಂದೇ ಅನುರೂಪನಾದ ಪತಿಯನ್ನೇ ಸೇರಿ ಆದರ್ಶ ಗೃಹಿಣಿಯಾಗಬಹುದು."

"ನಿಮಗೆಲ್ಲ ಮದುವೆಯ ಹುಚ್ಚು ಬಲವಾಗಿ ಹಿಡಿದಿರುವಂತೆ ತೋರುತ್ತದೆ. ಆ ದಿನ ನಮ್ಮ ಅಣ್ಣನೂ ಇದೇ ಮಾತನ್ನು ಹೇಳಿದ. ನಿಮ್ಮ ಅಣ್ಣನೂ ಇದೇ ಮಾತನ್ನು ಹೇಳಿದ. ಇಂದು ನೀನೂ ಇದೇ ಮಾತನ್ನು ಹೇಳುತ್ತಿದ್ದಿ. ನನ್ನ ಮದುವೆಯ ಬಗ್ಗೆ ನಿಮಗೆಲ್ಲ ಇಷ್ಟು ಚಿಂತೆ ಏಕೋ ನಾನು ಕಾಣೆ........ಕೇಳಿಲ್ಲ ದಿವೂ, ಈ ಲೀಲಾವತಿಗೆ ಈ ಜನ್ಮದಲ್ಲಿ ಮದುವೆ ಇಲ್ಲ. ಹೀಗೆಂದು ಯಾವುದೋ ಜನ್ಮದ ಶಾಪವಿದೆ. ನಾನೊಂದು ವೇಳೆ ಮದುವೆಯಾದರೂ ನನಗೆ ನೀವೆಲ್ಲ ಕನಸು ಕಾಣುವ ದಾಂಪತ್ಯ ಸುಖ ಸಿಗದೆ, ಮದುವೆಯೇ ನನ್ನ ಗೋರಿಯಾಗುವುದೆಂದು ಏಕೋ ನನ್ನ ಮನಸ್ಸಿಗೆ ಮೊದಲಿನಿಂದಲೂ ಅನಿಸುತ್ತಿದೆ. ನಾನೇನು ಮಾಡಲಿ ದಿವೂ?"

"ದಾಂಪತ್ಯ ಸುಖ ನಿನಗೆ ಇಲ್ಲವೆಂದು ನೀನೇಕೆ ತಿಳಿಯಬೇಕು? ನೀನು ತಿಳಿದಿರುವ ನಿನ್ನ ಅಂತರ್ಬೋಧೆ ಕೇವಲ ನಿನ್ನ ಕಲ್ಪನೆಯ ಕೂಸಲ್ಲದೆ ಬೇರೆಯಲ್ಲ."

"ಈ ಮಾತನ್ನ ನಾನೂ ಸಾವಿರ ಬಾರಿ ಕೇಳಿಕೊಂಡಿದ್ದೇನೆ ದಿವೂ. ಇದು ಕೇವಲ ನನ್ನ ಮನಸ್ಸಿನ ಭ್ರಮೆ, ಸಲ್ಲದ ಕಲ್ಪನೆ ಆಗಿದ್ದರೆ ವಿಚಾರದ ತೀಕ್ಷ್ಣತೆಯ ಎದುರಿನಲ್ಲಿ ಅದು ಕರಗಿಬಿಡುತ್ತಿತ್ತು. ಆದರೆ ನಾನು ಯೋಚಿಸಿದಷ್ಟೂ, ನನ್ನ ಮನಸ್ಸಿಗೆ ದೃಢಪಡುವ ವಿಷಯ ನನ್ನ ಜೀವಿತಾದರ್ಶನ ಅವಿವಾಹಿತ ಸ್ವಾವಲಂಬಿ ಮಹಿಳೆಯಾಗಿರುವುದು ಸ್ಪಷ್ಟವಾಗುವುದು. ಇದನ್ನು ನಾನೆಂತು ತುಚ್ಛೀಕರಿಸಲಿ?"

"ನಿನಗೆ ಬುದ್ಧಿ ಹೇಳುವಷ್ಟು ತಿಳಿದವನು ನಾನಲ್ಲ. ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಸ್ವಭಾವ ಸಂಸ್ಕಾರಕ್ಕೆ ಅನುಗುಣವಾದ ಆದರ್ಶವನ್ನು ರೂಪಿಸಿಕೊಳ್ಳುತ್ತಾನೆ. ನಿನ್ನ ಆದರ್ಶ—ನಿನ್ನ ಜೀವಿತೋದ್ಧಾರಕ್ಕೆ ಪೂರಕವಾಗುವುದಾದರೆ ಆ ದಾರಿಯಿಂದ ವಿಮುಖಳಾಗೆಂದು ನಾನು ಹೇಳುವುದಿಲ್ಲ. ಹತ್ತು ಜನಕ್ಕೆ ಒಪ್ಪಿದ ದಾರಿ ಹನ್ನೊಂದನೆಯವನಿಗೆ ಒಪ್ಪಿಗೆಯಾಗಲೇ ಬೇಕಿಲ್ಲ. ಅಂತಲೇ ತಪ್ಪು ಸರಿ ಎನ್ನುವುದನ್ನು ವ್ಯಕ್ತಿಯೇ ನಿರ್ಣಯಿಸ ಬೇಕೇ ಹೊರತು ಸಮಷ್ಟಿಯಲ್ಲ. ಆದುದರಿಂದ ನಿನಗೆ ಯಾವ ದಾರಿಯಲ್ಲಿ

ನಡೆದರೆ ಸುಖ ಸಿಗುವುದೆಂದು ನಿನ್ನ ಭಾವನೆಯೋ ಆ ದಾರಿಯಲ್ಲಿಯೇ ನಡೆ...."

ಈ ವೇಳೆಗೆ ಅಡಿಗೆ ಮನೆಯಿಂದ ಲೀಲಾವತಿಗೆ ಕರೆ ಬಂತು. ಅಡಿಗೆ ಎಲ್ಲ ಮುಗಿದು ಎಲೆ ಹಾಕುವ ಸಿದ್ಧತೆ ನಡೆದಿತ್ತು. ಎಲೆ ಹಾಕುವ ಮುನ್ನ ಲೀಲಾವತಿಯ ಸಲಹೆ ಕೇಳಲು ಅಡಿಗೆಯವಳು ಲೀಲಾವತಿಯನ್ನು ಕರೆದಿದ್ದಳು. ಲೀಲಾವತಿ ಮಾತನ್ನು ಮುಗಿಸಿ, ಅತ್ತ ಹೊರಟಳು. ದಿವಾಕರ ಲೀಲಾವತಿಯೊಂದಿಗೆ ನಡೆದ ಎಲ್ಲ ಮಾತುಗಳನ್ನು ಮತ್ತೊಮ್ಮೆ ಮೆಲುಕು ಹಾಕುತ್ತ ಅನ್ಯಮನಸ್ಕನಾಗಿ ಕುಳಿತಿದ್ದ. ಅವನು ತನ್ನ ಭಾವ ಸಮಾಧಿಯಿಂದ ಎಚ್ಚರಗೊಂಡದ್ದು ಲೀಲಾವತಿ ಬಂದು ಎಚ್ಚರಿಸಿದಾಗಲೇ. ಲೀಲಾವತಿ ಅವನಿಗೆ ಟವಲನ್ನು ಕೊಡುತ್ತಾ, ಕೈಕಾಲು ತೊಳೆದುಕೊಳ್ಳಲು ಹೇಳಿದಳು. ದಿವಾಕರ ವಿಧೇಯ ವಿದ್ಯಾರ್ಥಿಯಂತೆ ಬಚ್ಚಲ ಕಡೆ ಹೊರಟ.

ಅಂದಿನ ಊಟ, ಲೀಲಾವತಿಯೇ ಪ್ರತಿಯೊಂದು ಏರ್ಪಾಡಿನಲ್ಲಿ ತುಂಬ ಶ್ರದ್ಧಾಸಕ್ತಿ ವಹಿಸಿದ್ದರಿಂದ ಎಲ್ಲ ರೀತಿಯಲ್ಲಿ 'ಭರ್ಜರಿ'ಯಾಗಿತ್ತು. ಲೀಲಾವತಿಯ ಜತೆಯಲ್ಲಿ ಊಟಕ್ಕೆ ಕುಳಿತ ದಿವಾಕರ, ಸದಾಶಿವ ದಂಪತಿಗಳಿಗೆ ತಾವು ಲೀಲಾವತಿಯ ಕೈಯಿಂದ ಪಾರಾದರೆ ಸಾಕೆಂದು ಅನಿಸಿಬಿಟ್ಟಿತ್ತು. ಊಟಮಾಡಿ ಕೈತೊಳೆದುಕೊಂಡು ಎಲೆ ಅಡಿಕೆಯನ್ನು ಮೆಲ್ಲುತ್ತಾ ವಿಶ್ವನಾಥರಾಯರೊಂದಿಗೆ ಅದೂ ಇದೂ ಮಾತು ವಿನೋದವಾಗಿ ಹರಟುತ್ತಿದ್ದ ಸದಾಶಿವ ಲೋಕಾಭಿರಾಮವಾಗಿ ಹೇಳಿದ.

"ರಾಯರೆ ನಿಮ್ಮ ಮಗಳ ಮದುವೆ ಔತಣ ಎಂದು ಹಾಕಿಸುತ್ತೀರಿ, ಹೇಳಲೇ ಇಲ್ಲವಲ್ಲ?" ಎಂದ. ಈ ಮಾತು ಕೇಳಿ ಲೀಲಾವತಿಯ ಮುಖದಲ್ಲಿ ಮೊಟ್ಟಮೊದಸೆಯ ಬಾರಿ ನಾಚಿಕೆ ತಲೆದೋರಿ, ಮುಖ ಕೆಂಪಾಯಿತು. —ಏಕೆ? ಅದನ್ನು ಲೀಲಾವತಿಯೇ ಹೇಳಬೇಕು.

೧೨

ದಿವಾಕರ ಮೈಸೂರಿಗೆ ಬಂದು ಹೋದಲಾಗಾಯಿತು ಲೀಲಾವತಿಯ ಸ್ವಭಾವದಲ್ಲಿ ಏನೋ ಒಂದು ಬಗೆಯ ಮಾರ್ಪಾಡು ತಲೆ ಹಾಕಿತ್ತು. ತಾನು ನಿರ್ಮಲೆ ಸುಮಿತ್ರೆಯರಿಗಿಂತ ಅದೃಷ್ಟಶಾಲಿನಿಯೇ ಸರಿ. ಅವರಿಗೆ ತನ್ನಂತೆ ಸ್ವಂತ ಮನೆಯಿಲ್ಲ. ತಾನು ಇಷ್ಟಬಂದ ರೀತಿಯಲ್ಲಿ ಉಂಡು ಉಟ್ಟು ಸುಖಪಡಬಹುದು. ಇದಕ್ಕೆ ಇನ್ನೊಬ್ಬರ ನೆರವು ಬೇಕಿಲ್ಲ. ಮನೆಯಲ್ಲಿ ತನಗಾಗಿ ಹಾತೊರೆಯುವ ತಂಪೆ ಇದ್ದಾರೆ. ತಾನು ದುಡಿಯದೆ ಇದ್ದರೂ ಕೂತುತಿನ್ನುವ ಸೌಲಭ್ಯ ತನಗೆ ಇದೆ. ವಿದ್ಯೆಯಲ್ಲಿ ತಾನು ಇತರರಿಗಿತ ಕಡಿಮೆ ಇಲ್ಲ. ಕಾಲೇಜಿನಲ್ಲಿ ಎಲ್ಲಾ ವಿದ್ಯಾರ್ಥಿನಿಯರ ಅಚ್ಚುಮೆಚ್ಚಿನ ಪ್ರಾಧ್ಯಾಪಕಿ. ತಾನು ಬಯಸುತ್ತಿದ್ದ ಯೋಗ್ಯವೃತ್ತಿ ತನಗೆ ದೊರೆತಿದೆ. ಸಾಕಷ್ಟು ವಿರಾಮ. ಸಾಂಸ್ಕೃತಿಕ ಚಟುವಟಿಕೆಗಳ ನಿಕಟ ಸಂಪರ್ಕ ಎಲ್ಲವೂ ಇವೆ. ಇನ್ನು ರೂಪ? ತನ್ನ ಸೌಂದರ್ಯ ಯೌವನಗಳು ಇತರರು ಅಸೂಯೆ ಪಡುವಂತಹದು. ಉಳಿದವರ ಸೌಂದರ್ಯ ಯೌವನಗಳು ಗಂಡಂದಿರ ಕೈಗೆ ಸಿಕ್ಕಿ ನಲುಗಿದ್ದರೆ ತನ್ನದು ಅಸ್ಖಲಿತ ಸೌಂದರ್ಯ, ಯೌವನ. ಸಂಸಾರಕ್ಕೆ ಹೆಗಲುಕೊಟ್ಟು ತಾಯಿಯ ಪಟ್ಟ ಕಟ್ಟಿಕೊಂಡ ಹದಿನೆಂಟು ವರ್ಷದ ನಿರ್ಮಲೆ ಈಗಾಗಲೇ ಮೂವತ್ತು ವರ್ಷದ ಮುದುಕಿಯಂತೆ ಇದ್ದಾಳೆ. ತನಗಿಂತ ಕಿರಿಯವಳಾದ ಸುಮಿತ್ರೆ ತನ್ನ ದುಡಿತದಿಂದಾಗಿ ತುಂಬಾ ವಯಸ್ಸಾದವಳಂತೆ ಕಾಣುತ್ತಾಳೆ. ಅವಳು ವಿದ್ಯಾವತಿಯಾದರೂ ತನ್ನ ಸೌಂದರ್ಯವನ್ನು ವ್ಯರ್ಥವಲ್ಲದ ರೀತಿಯಲ್ಲಿ ಕಾಪಾಡಿಕೊಳ್ಳುವ ಕಲೆ ಗೊತ್ತಿಲ್ಲ. ತಾಯಿಯ ಹಾಲು ಮಕ್ಕಳಿಗೆ ಶ್ರೇಷ್ಠ ವೆನ್ನುವ ತತ್ವಕ್ಕಾಗಿ ತನ್ನ ಸೌಂದರ್ಯದ ಸೂರೆಗೊಳ್ಳುತ್ತಿದ್ದಾಳೆ. ತಿಳಿವಳಿಕೆ ಇಲ್ಲದ ಹೆಣ್ಣು ಅವಳು ಎಂದು ತನ್ನ ರೂಪವನ್ನು ಸುಮಿತ್ರೆಯೊಂದಿಗೆ ಹೋಲಿಸಿಕೊಂಡು, ತನ್ನನ್ನೇ ಕನ್ನಡಿಯಲ್ಲಿ ನೋಡಿಕೊಳ್ಳುತ್ತಾ ಕುಳಿತು ಕೊಳ್ಳುತ್ತಿದ್ದಳು. ಅವಳಿಗೆ ತನ್ನ ರೂಪವನ್ನು ಕಂಡು ಹೆಮ್ಮೆಯಾಗದೆ ಇರುತ್ತಿರಲಿಲ್ಲ. ದಂತದಲ್ಲಿ ಕೆತ್ತಿದಂತೆ ಮಾಟವಾದ ಮುಖ, ನರ್ತಕಿ

ಯರಿಗೆ ಒಪ್ಪುವ ಎದೆ, ಕಟಿ, ಕೈಕಾಲುಗಳು ಸರಳವಾದ ಉಡಗೆಯಲ್ಲೇ ಅವಳ ಸೌಂದರ್ಯ ಅಸಾಧಾರಣವಾಗಿತ್ತು. ಇನ್ನು ಅವಳು ಸಿಂಗರಿಸಿಕೊಂಡಾಗ ನೂರಾರು ದೃಷ್ಟಿಭ್ರಮರಗಳನ್ನು ತನ್ನೆಡೆಗೆ ಸೆಳೆಯುವ ಆಗ ತಾನೇ ಅರಳಿದ ಕೆಂದಾವರೆ ಪುಷ್ಪ. ಅವಳ ಸೌಂದರ್ಯ, ಮುಖದ ಕಾಂತಿ ಅಂತಹುದು. ನೋಡಿದವರನ್ನು ಮತ್ತೊಮ್ಮೆ ನೋಡಬೇಕೆನಿಸುವ ಚಪಲ, ಚಿತ್ತ ಚಾಂಚಲ್ಯ ಉಂಟುಮಾಡುವಂತಹುದು. ಹೀಗಿರುವ ತನಗೆ ಎಲ್ಲ ಬಗೆಯ ಐಹಿಕ ಭೋಗಭಾಗ್ಯಗಳಲ್ಲಿ ಓಲಾಡುವಂತಿದ್ದರೂ, ತನಗೆ ಇಲ್ಲದ ಯಾವುದೋ ಸುಖವನ್ನು ಸುಮಿತ್ರೆ ನಿರ್ಮಲೆಯರು ಅನುಭವಿಸುತ್ತಿರುವರೆಂಬ ವಿಷಯ ಅನೇಕ ಬಾರಿ ಲೀಲಾವತಿ ದಿಙ್ಮೂಢಗೊಳಿಸುತ್ತಿತ್ತು. ಅದು ಎಂಥದೆಂದು ಅವಳು ವಿಚಾರಿಸುತ್ತಾ ಕುಳಿತುಕೊಳ್ಳುತ್ತಿದ್ದಳು. ತನಗೆ ಇಲ್ಲದ—ಅವರಿಬ್ಬರಿಗೆ ಇರುವ ಆ ಸುಖವೆಂಥದು? ಬಹುಶಃ ದಾಂಪತ್ಯಸುಖದಿಂದ ಅವರು ಆ ರೀತಿ ಇರಲು ಸಾಧ್ಯವಾಗಿರಬಹುದು. ಹಾಗಾದರೆ ಅವರ ಈ ದಾಂಪತ್ಯಸುಖ ತನ್ನ ಎಲ್ಲ ಸುಖಗಳಿಗಿಂತ ಮಿಗಿಲಾದ್ದೆ? ಈ ಪ್ರಶ್ನೆ ಬಗೆ ಹರಿಯದಾಯಿತು. ಒಂದು ದಿನ ಇದೇ ವಿಷಯವನ್ನು ಚಿಂತಿಸುತ್ತ ಕುಳಿತಿರುವಾಗ ಅಂಚೆಯಾಳು ಒಂದು ಲಗ್ನಪತ್ರಿಕೆ ತಂದುಕೊಟ್ಟು ಹೋದ. ಇದನ್ನು ಕಂಡು ಅವಳ ಹೃದಯದ ಅಶಾಂತಿಯ ಬೆಂಕಿಗೆ ಇನ್ನಷ್ಟು ತುಪ್ಪ ಸುರಿದಂತೆ ಆಯಿತು. ಹಂಸಳೂ ಇದುತನಕ ತನ್ನಂತೆಯೇ ಕುಮಾರಿಯಾಗಿಯೇ ಇದ್ದಳು. ಈಗ ಅವಳಿಗೆ ಮದುವೆ! ಅನ್ಯಾಯವಾಗಿ ಹಂಸ ಮದುವೆಯಾಗಿ ಕೆಡುತ್ತಿರುವಳಲ್ಲ ಎಂದು ಅವಳ ಬಗ್ಗೆ ಅನುಕಂಪಮೂಡಿತು. ಅವಳು ಲಗ್ನಪತ್ರಿಕೆಯನ್ನು ಪೂರ್ಣವಾಗಿ ಓದಿಕೊಳ್ಳುವ ಗೋಜಿಗೆ ಹೋಗದೆ ಅದನ್ನು ಟೇಬಲ್ಲಿನ ಮೇಲೆ ಎಸೆದಳು. ಅವಳ ಭಾವನೆಯಲ್ಲಿ ಮದುವೆ ಎನ್ನುವುದು ಒಂದು ಅಗ್ನಿಕುಂಡ. ಇದರಲ್ಲಿ ಮೈಸುಟ್ಟುಕೊಳ್ಳುವ ಪತಂಗಗಳೆಂದರೆ ಮದುವೆಯ ಒಣವ್ಯಾಮೋಹಕ್ಕೆ ಬಲಿಯಾಗುವ ಹೆಣ್ಣುಗಳು. ಅವರು ಎಂದು ಎಚ್ಚರಗೊಳ್ಳುತ್ತಾರೋ ಎಂದು ಲೀಲಾವತಿ ಹಲುಬಿದಳು. ಕೆಲವು ಕಾಲ ಕಳೆದ ಮೇಲೆ ಅವಳ ಪ್ರಿಯ ಗೆಳತಿ ಹಂಸಳನ್ನು ಹಾಳುಮಾಡಲು ಬಂದಿರುವ

ಗಂಡು ಯಾರೆಂದು ತಿಳಿಯುವ ಕುತೂಹಲವಾಗಿ ಅವಳು ಲಗ್ನಪತ್ರಿಯನ್ನು ಮತ್ತೊಮ್ಮೆ ಓದಿಕೊಂಡಳು. ಹಂಸಳ ತಂದೆ ಕ್ರಿಸ್ತನಾದರೂ ತನ್ನ ರಕ್ತದಲ್ಲಿ ಹರಿಯುತ್ತಿದ್ದ ಹಿಂದೂ ಸಂಸ್ಕಾರ ಪೂರ್ಣವಾಗಿ ಅಳಿಸಿ ಹೋಗಿರದೆ, ತನ್ನ ಮಗಳ ಮದುವೆಯ ಓಲೆಯನ್ನು ಹಿಂದೂ ಗೃಹಸ್ಥರಂತೆಯೇ ಮಾಡಿಸಿದ್ದರು. ಕ್ರಿಸ್ತ ಗುರುಪ್ರಸನ್ನದಿಂದ ಆರಂಭವಾಗಿ ಆ ಲಗ್ನಪತ್ರಿಕೆ ಗ್ರೇಸ್ ಹಂಸಾಬಾಯಿಯನ್ನು ಚಾರ್ಲ್ಸ್ ಮೋಹನನಿಗೆ ಕೊಟ್ಟು ವಿವಾಹ ನಡೆಸಲು ಗುರುಹಿರಿಯರು ನಿಶ್ಚಯಿಸಿರುವ ವರೆಗೆ, ಎಲ್ಲ ಸಂಗತಿಯನ್ನು ಓದಿಕೊಂಡು—ಹಿರಿಯರಿಗೆ ಇದುಬಿಟ್ಟು ಬೇರೆ ಕೆಲಸವಿದ್ದರಲ್ಲವೆ? ಎಂದು ತನ್ನಲ್ಲೇ ಒಣನಗೆ ನಕ್ಕಳು. ಅವಳಿಗೆ ಆ ಕ್ಷಣಕ್ಕೆ ಆ ದಿನ ಬೃಂದಾವನದಲ್ಲಿ ನಡೆದ ಎಲ್ಲ ಮಾತುಕತೆ ನೆನಪಾಯಿತು. ಅದನ್ನು ನೆನೆದಂತೆ ಅವಳ ಹೃದಯ ಏಕೋ ಜಡವಾಯಿತು. ಅವಳಿಗೆ ಗೆಳತಿಯರ ಸಂಪರ್ಕ ಬೇಕೆನಿಸಿ, ಸುಮಿತ್ರೆಯನ್ನು ಹುಡುಕಿಕೊಂಡು ಅವಳ ಮನೆಗೆ ಬಂದಳು.

"ಸುಮಿತ್ರೆ ನಮ್ಮ ಹಂಸಳಿಗೆ ಮದುವೆಯಂತೆ-ಇನ್‌ವಿಟೇಷನ್ ಕಳುಹಿಸಿದ್ದಾಳೆ" ಎಂದೆನ್ನುತ್ತಾ ಸುಮಿತ್ರೆ ಮನೆಯನ್ನು ಪ್ರವೇಶಿಸಿದಳು.

ಸುಮಿತ್ರೆ ಆಗತಾನೇ ಫಾರ್ಮಸಿ ಮುಚ್ಚಿ ಮನೆಗೆ ಬಂದು ಬಟ್ಟೆ ಬದಲಾಯಿಸುತ್ತಿದ್ದಳು. ಅವಳು "ನಂಗೂ ಇನ್‌ವಿಟೇಷನ್ ಬಂದಿದೆ. ಬಹುಶಃ ಇಬ್ಬರಿಗೂ ಒಟ್ಟಿಗೆ ಪೋಸ್ಟ್ ಮಾಡಿರಬೇಕು." ಎಂದಳು.

"ನಾವು ಮೂವರಲ್ಲಿ ನಾನು ಮತ್ತು ಹಂಸ ಗೃಹಸ್ಥಾಶ್ರಮ ಸ್ವೀಕರಿಸಿದ ಹಾಗೆ ಆಯಿತು. ಇನ್ನೂ ಕನ್ಯಾಶ್ರಮದಲ್ಲೇ ಇರುವವಳೆಂದರೆ ನೀನು ಒಬ್ಬಳೇ........ನೀನೆಂದು ನಮ್ಮೆಲ್ಲರಂತೆ ಗೃಹಸ್ಥಾಶ್ರಮ ಸ್ವೀಕರಿಸುವೆಯೋ ಆ ದೇವರಿಗೇ ಗೊತ್ತು!"

"ನೀವೆಲ್ಲ ಗೃಹಸ್ಥಾಶ್ರಮ ಸ್ವೀಕರಿಸಿ ಪಡುವ ಎಲ್ಲ ಸುಖವನ್ನು ನಾನು ಬ್ರಹ್ಮಚಾರಿಣಿಯಾಗಿದ್ದೇ ಪಡುತ್ತೇನೆ. ನನಗೆ ಈ ಸುಖವೇ ಸಾಕು."

"ನಿಜವಾಗಿ ನೀನು ಸುಖವಾಗಿದ್ದೀಯಾ ಲೀಲಾ?"

"ಏಕೆ?"

"ನೀನು ಸುಖವಾಗಿರುವ ವಿಷಯ ನನಗೇಕೋ ಅನುಮಾನ. ನಿನ್ನ

ಮುಖದಲ್ಲಿ ಏನೋ ಒಂದು ಬಗೆಯ ವ್ಯಥೆ ಕಾಣುತ್ತಿದೆ. ”

“ ನನಗೇನಾಗಿದೆ ನಾನು ಸುಖವಾಗಿಯೇ ಇದ್ದೇನೆ. ”

“ ನಾನು ನಿನ್ನ ಮಾತನ್ನು ಒಪ್ಪಲಾರೆ. ”

“ ನಾನು ಯಾವುದರಲ್ಲಿ ಅಸುಖಿಯಾಗಿದ್ದೇನೆಂದು ನಿನ್ನ ಭಾವನೆ ? ”

“ ನಾನು ಮನಸ್ಸು ಬಿಚ್ಚಿ ಮಾತನಾಡಿದರೆ ನಿನಗೆ ಕೋಪವಿಲ್ಲ ತಾನೇ........ಲೀಲಾ, ನೀನು ನಿಜವಾಗಿ ಹೇಳು. ನೀನು ಸುಖವಾಗಿದ್ದೀಯಾ? ನಮ್ಮೆಲ್ಲರಿಗೆ ಇರುವ ಸುಖ–ಮನಸ್ಸಿನ ನೆಮ್ಮದಿ ನಿನಗಿದೆಯೇ?”

“ ಇದೆ ಎಂದುಕೊಂಡಿದ್ದೇನೆ. ”

“ ಅಂದುಕೊಂಡಿರುವ ಮಾತು ಬೇಡ. ಇರುವ ವಾಸ್ತವಾಂಶ ಹೇಳು. ನೀನು ಎಷ್ಟೆಂದರೂ ನಮ್ಮಂತೆ ಹೆಂಗಸು. ನಮ್ಮ ದೇವರ ಸತ್ಯ ನಮಗೆ ತಿಳಿಯುವುದಿಲ್ಲವೆ? ವೃತ್ತಿಯಿಂದ, ಉಡುಪಿನಿಂದ, ನಡೆನುಡಿಯಿಂದ ನೀನು ಗಂಡಿನಂತೆ ಇರಬಹುದು. ಆದರೆ ಮೂಲತಃ ನೀನು ಹೆಣ್ಣೆಂಬುದನ್ನು ಮರೆಯಬೇಡ. ನಿನ್ನ ಜೀವನ ಎಷ್ಟು ಪೌರುಷಯುಕ್ತವಾಗಿದ್ದರೂ ಅದು ಹೆಣ್ಣುತನದ ಸಾಮಾನ್ಯ ನಿಯಮಗಳಿಗೆ ಅಡಿಯಾಳಾಗಿಯೇ ಇದೆ. ನೀನು ಎಷ್ಟೇ ಕುಶಲಿಯಾಗಿದ್ದರೂ ಹೆಣ್ಣುತನದ ಸಾಮಾನ್ಯ ಬಯಕೆಗಳನ್ನು ಮರೆಸಲಾರೆ. ನೀನು ಎಷ್ಟು ಬಾರಿ ಗಂಡೆಂದು ಅಂದುಕೊಂಡರೂ ತಿಂಗಳಿಗೊಮ್ಮೆಯಾದರೂ ನೀನು ಹೆಣ್ಣೆಂಬುದನ್ನು ತಿಳಿಯಲೇ ಬೇಕು.”

“ ನಿನ್ನ ಮಾತು ನನಗೆ ಅರ್ಥವಾಗುತ್ತಿಲ್ಲ. ಸ್ಪಷ್ಟಪಡಿಸಿ ಹೇಳು.”

“ ನನ್ನ ಮಾತಿನ ಸಾರಾಂಶವಿಷ್ಟು. ಹೆಣ್ಣು ಎಷ್ಟೇ ವಿದ್ಯಾವತಿ ಇರಲಿ, ಆಧುನಿಕಳಿರಲಿ, ಅವಳು ಹೆಣ್ಣಾಗಿ ಹುಟ್ಟಿದ ಮೇಲೆ ಹೆಣ್ಣಿನಂತೆ ಬಾಳಬೇಕಾದ್ದು ಅವಳ ಧರ್ಮ. ಹೆಣ್ಣುತನದ ನಿಜವಾದ ಸಾರ್ಥಕ್ಯವೆಂದರೆ ಕಾಮದ ಬೊಂಬೆಯಾದ ಹೆಣ್ಣು ತಾಯಿತನದ ಪುಣ್ಯತೀರ್ಥದಲ್ಲಿ ಮಿಂದು ತಾಯಿಯಾಗುವುದು. ತನ್ನ ಮಗುವಿಗೆ ಮಾತ್ರವಲ್ಲ. ನನ್ನನ್ನು ನಂಬಿದ ಜನಕ್ಕೆಲ್ಲ ತಾಯಿಯಾಗುವುದು. ಈ ಒಂದು ಸ್ಥಿತಿಯಲ್ಲಿಯೇ ಗಂಡಿಗೂ ಹೆಣ್ಣಿಗೂ ಇರುವ ನಿಜವಾದ ಭೇದ. ಈ ಭೇದವಿಲ್ಲದ ಮೇಲೆ ಹೆಣ್ಣೇನು? ಗಂಡೇನು? ಇಬ್ಬರೂ ಒಂದೆ. ಹೆಣ್ಣು ಎಷ್ಟೇ ಸಂಸಾರ ಹೊಂದಿದ್ದರೂ

ಕಡೆಯ ತನಕ ಅವಳು ಹೆಣ್ಣಾಗಿಯೇ ಉಳಿಯುವುದು ಅವಳಿಗೆ ಕ್ಷೇಮ ಮಾತ್ರವಲ್ಲ ಜಗತ್ತಿಗೇ ಕ್ಷೇಮ. ಅಂತೆಯೇ ಗಂಡು ಗಂಡಾಗಿಯೇ ಉಳಿಯ ಬೇಕು. ಒಬ್ಬರು ಇನ್ನೊಬ್ಬರ ಸ್ಥಾನವನ್ನು ಆಕ್ರಮಿಸಿಕೊಳ್ಳಲಾರರು—ಆಕ್ರಮಿಸಿಕೊಳ್ಳಬಾರದೆಂದೇ ಪ್ರಕೃತಿನಿಯಮ. ಪ್ರಕೃತಿನಿಯಮಕ್ಕೆ ವಿರೋಧವಾಗಿ ನಡೆಯುವರನ್ನು ಪ್ರಕೃತಿ ಶಿಕ್ಷಿಸದೆ ಬಿಡಳು."

"ನಾನು ಮದುವೆಯಾಗದೆ ಉಳಿದಿರುವುದು ಪ್ರಕೃತಿ ನಿಯಮಕ್ಕೆ ವಿರೋಧವೆ?"

"ನೀನು ಮದುವೆಯಾಗದೆ ಇರುವುದು ಪ್ರಕೃತಿನಿಯಮಕ್ಕೆ ವಿರೋಧ ವೆಂದು ನಾನು ಹೇಳುತ್ತಿಲ್ಲ. ಆದರೆ ನೀನು ಹೆಣ್ಣಾಗಿ ಹುಟ್ಟಿಯೂ ಬಂಜೆ ಯಂತೆ ಇರುವುದು ಪ್ರಕೃತಿ ನಿಯಮಕ್ಕೆ ವಿರೋಧ. ಆ ಬಗೆಯ ಸ್ಥಿತಿ ಬಂಜೆತನ—ನಿನಗೆ ಪ್ರಕೃತಿದತ್ತವಾದ ಶಾಪವಾಗಿದ್ದರೆ ಆ ಮಾತು ಬೇರೆ. ಆದರೆ ನೀನು ಎಲ್ಲರಂತೆ ಹೆಣ್ಣೇ ಆಗಿದ್ದು ಹೀಗೆ ಇರುವುದು ಪ್ರಕೃತಿ ನಿಯಮವನ್ನು ಧಿಕ್ಕರಿಸಿ ನಡೆದಂತೆ—ಇದರ ಪರಿಣಾಮ ಅನೇಕ ಬಗೆಯ ಮಾನಸಿಕ, ದೈಹಿಕ ಖಾಹಿಲೆಗಳಿಗೆ ಅಸ್ಪಷ್ಟಕೊಟ್ಟು ಬರಮಾಡಿಕೊಂಡಂತೆ-ಇದಕ್ಕೆ ನೀನೇ ಸಾಕ್ಷಿ."

"ನನಗೇನಾಗಿದೆ? ನಾನು ಮಾನಸಿಕವಾಗಿ ದೈಹಿಕವಾಗಿ ಆರೋಗ್ಯ ದಿಂದಲೇ ಇದ್ದೇನೆ."

"ನೀನು ಹಾಗೆ ತಿಳಿದುಕೊಂಡೇ ಆತ್ಮವಂಚನೆ ಮಾಡಿಕೊಳ್ಳುತ್ತಿರು ವುದು. ನಿನ್ನ ಮುಖ ನೋಡಿದರೆ ಗೊತ್ತಾಗದೇ ನೀನು ಆರೋಗ್ಯದಿಂದ ಇರುವುದು ಬಿಡುವುದು?"

"ನನ್ನ ಮುಖದಿಂದ ನಿನಗೇನು ಗೊತ್ತಾಗಿದೆ?"

"ನೀನು ತೋರಿಕೆಗಾಗಿ ಎಲ್ಲರಂತೆ ಸುಖದಿಂದ ಇರುವಂತೆ ನಟಿಸು ತ್ತಿದ್ದರೂ ಆಂತರಂಗಿಕವಾಗಿ ನೀನು ತುಂಬಾ ಅಸುಖಿಯಾಗಿರುವೆ ಎಂದು ನನ್ನ ಭಾವನೆ. ಏಕೆಂದರೆ ನೀನು ಕೆಲವು ದಿನಗಳಿಂದ ಈಚೆಗೆ ಯಾಕೋ ಒಂದು ತರಹ ಇದ್ದೀಯೆ. ಯಾಕೋ ಏನೋ ಬಡವಾಗುತ್ತಿದ್ದೀಯೆ. ನೀನು ಒಂದೆರಡು ತಿಂಗಳ ಹಿಂದೆ ಎಷ್ಟು ಜೀವ ಪೂರ್ಣವಾಗಿ ಇದ್ದೆ ಗೊತ್ತೆ?

ಕೋಮಲ ಲತೆಯಂತೆ ಇದ್ದ ನೀನು ಏನೋ ಕಾರಣದಿಂದಲೇ ಬಿಸಿಲಿನ ಜೀಗೆಯಲ್ಲಿ ಕಮರಿದ ಲತೆಯಂತೆ ಆಗಿರುವೆ. ನಿನ್ನ ಲವಲವಿಕೆ, ಉತ್ಸಾಹ ದಿನದಿನಕ್ಕೆ ಇಳಿಮುಖವಾಗುತ್ತಿದೆ. ಮುಖದ ಮೊದಲಿನ ಉಲ್ಲಾಸ ಮಾಯ ವಾಗಿ ಮ್ಲಾನತೆಗೆ ಎಡೆಗೊಟ್ಟಿದೆ. ಬಹುಶಃ ಇವುಗಳೆಲ್ಲ ನಿನಗೆ ತಿಳಿದಿರಲಾ ರವ್ವ. ನೀನು ಫಾರ್ಮಸಿಗೆ ಬಂದು ನಿನ್ನ ತೂಕ ನೋಡಿಕೋ. ಮೂರು ತಿಂಗಳ ಹಿಂದಿದ್ದ ತೂಕಕ್ಕೂ ಈಗ್ಗೂ ಎಷ್ಟು ಬದಲಾವಣೆ ಇದೆ ಎಂಬುದು ಗೊತ್ತಾಗುತ್ತೆ " ಎಂದಳು ಸುಮಿತ್ರೆ. ಸುಮಿತ್ರೆ ಹೇಳಿದ ಎಲ್ಲ ಮಾತಿನಲ್ಲಿ ಸತ್ಯಾಂಶ ಅಡಗಿರುವಂತೆ ಲೀಲಾವತಿಗೆ ಕಂಡಿತು. ಅವಳು ಸುಮಿತ್ರೆಯ ಮಾತಿನ ಬೆಳಕಿನಲ್ಲಿ ತನ್ನಲ್ಲಾಗಿದ್ದ ಮಾರ್ಪಾಡನ್ನು ಅವಲೋಕಿಸಿ, ಸುಮಿತ್ರೆ ಕೇವಲ ಸೂಕ್ಷ್ಮಗ್ರಾಹಿಯಾಗಿ ಇಷ್ಟೆಲ್ಲ ಸಂಗತಿಗಳನ್ನು ತಿಳಿದುಕೊಂಡಿ ದ್ದಾಳೆ, ಎಂದುಕೊಳ್ಳದೆ ಇರಲಿಲ್ಲ.

" ಲೀಲಾವತಿ ನಾನು ಖಂಡಿತವಾಗಿ ಹೇಳುವೆನೆಂದು ನೀನು ಮನಸ್ಸ ಸಣ್ಣದು ಮಾಡಿಕೊಳ್ಳಬೇಡ. ನಾನೊಂದು ಮಾತು ಹೇಳ ಬಯಸುತ್ತೇನೆ. ಮಾನಸಿಕ ದೌರ್ಬಲ್ಯ ಯಾರಿಗೂ ತಪ್ಪಿಲ್ಲ. ನಿನ್ನ ಮನಸ್ಸಿನಲ್ಲಿ ನಡೆಯು ತ್ತಿರುವ ಆಂದೋಳನ ಏನೆಂಬುದನ್ನು ನಾನು ನಿನ್ನಂತೆ ಹೆಣ್ಣಾಗಿರುವುದ ರಿಂದ ಊಹಿಸಿ ತಿಳಿಯಬಲ್ಲೆ. ಹೆಣ್ಣಿನ ಜೀವನ ಎಷ್ಟೇ ಸೊಂಪಾಗಿ ಬೆಳೆದರೂ ಅದೊಂದು ಲತೆ. ಲತೆಯ ಪರಿಪೂರ್ಣತೆಗೆ ಅವಲಂಬ ಪ್ರದವಾದ ಹೆಮ್ಮರದ ಅಗತ್ಯ. ನಿನಗೂ ನಮ್ಮೆಲ್ಲರಂತೆ ಬದುಕಿನಲ್ಲಿ ಅನೇಕ ಹಿರಿಯಾಸೆಗಳಿವೆ. ಅವನ್ನು ಈಡೇರಿಸಿಕೊಳ್ಳಲು ಗೃಹಸ್ಥ ಜೀವನವೇ ಸಹಜವಾದ ಸರಳವಾದ ದಾರಿ. ನಿನ್ನಲ್ಲಿ ವಯೋಗುಣಕ್ಕನುಗುಣವಾಗಿ ಉದಯಿಸುವ ಲಲಾಸೆಗಳು ಅಡ್ಡದಾರಿಯನ್ನು ಹಿಡಿಯುವ ಮುನ್ನ ಅವುಗಳಿಗೊಂದು ಉಚಿತವೂ ಯೋಗ್ಯವೂ ಸರ್ವಜನ ಸಮ್ಮತವೂ ಆದ ರೀತಿಯಲ್ಲಿ ರೂಪಕೊಟ್ಟು, ಈಗ ಹಂಸಳು ಮಾಡುತ್ತಿರುವಂತೆ ಯೋಗ್ಯ ಪತಿಯನ್ನು ಸೇರಿ ಸತ್ತು ಜನರಂತೆ ನೀನೂ ಸುಖವಾಗಿ ಬಾಳುವೆಮಾಡಿಕೊಂಡಿರಬೇಕೆಂಬುದೇ ನನ್ನ ಸಲಹೆ—"

ಈ ಸಲಹೆ ಲೀಲಾವತಿಗೆ ಸೇರಿತೋ ಇಲ್ಲವೋ ಇದನ್ನು ತಿಳಿದುಕೊ ಳ್ಳುವ ಮುನ್ನ ಸದಾಶಿವನ ಬೂಟ್ಸಿನ ಶಬ್ದ ಕೇಳಿ ಸುಮಿತ್ರೆ ಹೊರಗೆ ಬಂದಳು.

ಸುಮಿತ್ರೆಯನ್ನು ನೋಡಿದೊಡನೆ ಬಿಸಿಲಿನಲ್ಲಿ ಬಳಲಿದ್ದ ಅವನ ಮುಖದಲ್ಲಿ ಮಂದಹಾಸದ ಕಿರುನಗೆ ಮೂಡಿತು. ಅವನು ಹ್ಯಾಟನ್ನು ತೆಗೆದು ಸುಮಿತ್ರೆಯ ಕೈಗೆ ಕೊಟ್ಟು, ಕೋಟನ್ನು ಕಳಚಿ ಗೂಟಕ್ಕೆ ಹಾಕಿ, ಬೂಡ್ಸು ಬಿಚ್ಚುತ್ತಾ ಪ್ರಶ್ನಿಸಿದ.

“ ಮಗು ಬಾಲಚಂದ್ರ ಎಲ್ಲಿ ? ”

“ ಮಲಗಿಕೊಂಡಿದ್ದಾನೆ........”

“ ಇವತ್ತು ಮನೆಗೆ ಬರೋದು ಕೊಂಚ ‘ ಲೇಟ್ ’ ಆಯಿತು. ಕ್ಷಮಿಸು ಡಿಯರ್ ” ಎಂದ ಸದಾಶಿವ ಮುಖವನ್ನು ಟವಲಿನಲ್ಲಿ ವರೆಸಿಕೊಳ್ಳುತ್ತ. ಸಾಮಾನ್ಯವಾಗಿ ಹನ್ನೆರಡಕ್ಕೆ ಮನೆಗೆ ಬರಬೇಕಾಗಿದ್ದ ಅವನು ಈ ದಿನ ಅಂಗಡಿಯಲ್ಲಿ ಯಾರೋ ಗಿರಾಕಿಗಳು ಇದ್ದುದರಿಂದ ಹೊತ್ತು ಮೀರಿ ಮನೆಗೆ ಬಂದಿದ್ದ. ಅವನು ಸುಮಿತ್ರೆಯ ಮುಖ ನೋಡಿ

“ ನೀನು ಇನ್ನೂ ಊಟ ಮಾಡಿಲ್ಲವೆ ? ” ಎಂದ.

“ ನೀವು ಬರಲಿ ಎಂದು ಕಾದಿದ್ದೆ. ”

“ ನಾನು ಬರದೆ ಇದ್ದರೆ ಏನಂತೆ ? ನೀನು ಊಟಕ್ಕೆ ಕುಳಿತುಕೊಳ್ಳಬೇಕಿತ್ತು ” ಎಂದ.

ಈ ಮಾತುಗಳೆಲ್ಲ ರೂಮಿನಲ್ಲಿ ಕುಳಿತಿದ್ದ ಲೀಲಾವತಿಯ ಕಿವಿಗೂ ಬಿತ್ತು. ಅವಳು ಕುಳಿತಲ್ಲಿಂದಲೇ ಅವರಿಬ್ಬರ ಮಾತುಕತೆಗಳನ್ನು ಆಲಿಸಿದ್ದಳು. ಸುಮಿತ್ರೆ ತನ್ನ ಗಂಡನಿಗಾಗಿ ಇಷ್ಟು ಹೊತ್ತಿನ ತನಕ ಊಟ ಮಾಡದೆ ಕುಳಿತಿದ್ದಳಲ್ಲ—ಎಂಬ ವಿಷಯ ಆಶ್ಚರ್ಯವನ್ನು ಉಂಟು ಮಾಡಿದ್ದಂತೆ ಮನೆಗೆ ಬರುತ್ತಿದ್ದಂತೆ ಸದಾಶಿವ ಬೇರೆ ಯಾವ ಮಾತು ಆಡದೆ “ ಮಗುವೆಲ್ಲಿ ? ” ಎಂದು ಮಗುವನ್ನು ವಿಚಾರಿಸಿಕೊಂಡದ್ದು ತುಂಬಾ ಅಚ್ಚರಿಯನ್ನು ಉಂಟುಮಾಡಿತ್ತು. ಸಂಸಾರವೆಂದರೆ ಹೀಗೆ ಒಬ್ಬರಿಗಾಗಿ ಒಬ್ಬರು ಸ್ವಾರ್ಥ ಬಿಡುತ್ತಾರೆ. ಎಂಬ ವಿಷಯ ಮನಸ್ಸಿನಲ್ಲಿ ವಿಚಾರ ಪ್ರವಾಹವನ್ನೇ ಕೆರಳಿಸಿತು. ಅವಳಿಗೆ ಆ ಕ್ಷಣದಲ್ಲಿ ತನ್ನನ್ನು ಯಾರಾದರೂ ಪ್ರೀತಿಯಿಂದ ಕರೆಯಬಾರದೇ ಎಂದೆನಿಸಿತು. ತನಗೂ ಒಂದು ಮಗುವಿದ್ದು ತನ್ನನ್ನು ಯಾರಾದರೂ ಹೀಗೆಯೇ ವಿಚಾರಿಸಿಕೊಂಡಿ

ದ್ದರೆ.......ಎಂದು ಲೀಲಾವತಿ ಕುಳಿತಲ್ಲಿ ಕನಸು ಕಟ್ಟಿದಳು. ಇದೇ ವೇಳೆಗೆ ರೂಮಿನ ಕಡೆ ಬಂದ ಸದಾಶಿವ ಲೀಲಾವತಿಯನ್ನು ನೋಡಿ,

"ಓ ಯಾರು ಲೀಲಾವತಿ? ಏನ್ರಿ ಲೀಲಾವತಿ ಊಟ ಆಯಿತೆ?" ಎಂದು ವಿಚಾರಿಸಿಕೊಂಡ.

"ಅವಳ ಊಟವನ್ನು ಈಗ ವಿಚಾರಿಸಿಕೊಳ್ಳುತ್ತೀರಾ? ಅವಳು ಹತ್ತಕ್ಕೆ ಊಟಮಾಡಿಬಿಡ್ತಾಳೆ. ಈಗ ಅವಳಿಗೆ ನಿದ್ರೆಯ ಹೊತ್ತು." ಎಂದಳು ಸುಮಿತ್ರೆ.

"ಹೌದು ನಾನು ಮರೆತಿದ್ದೆ, ಹೋಗಲಿ, ಬೆಳಿಗ್ಗೆ ಉಂಡ ಊಟ ಇಷ್ಟು ಹೊತ್ತಿಗೆ ರಕ್ತಗತವಾಗದೆ ಉಳಿದಿದೆಯ? ಎಲ್ಲಿ ಏಳಿ. ನಮ್ಮ ಜತೆಯಲ್ಲಿ ಒಂದು ತುತ್ತು ಊಟ ಮಾಡುವಿರಂತೆ" ಎಂದ ಸದಾಶಿವ.

"ನನ್ನ ಊಟ ಎಂದೋ ಆಯಿತು."

"ಅದು ನನಗೂ ಗೊತ್ತು."

"ಆದರೂ ಊಟಕ್ಕೆ ಎಬ್ಬಿಸುತ್ತಿದ್ದೀರಲ್ಲ."

"ಇದು ನಿಮ್ಮ ಫಲಾಹಾರದ ಹೊತ್ತು ಇರಬೇಕು. ನಮ್ಮ ಜತೆಯಲ್ಲಿ ಕೊಂಚ ಊಟಮಾಡಿಬಿಡಿ—ನಿಮ್ಮ ಫಲಾಹಾರವೂ ಆಯಿತು. ನನಗೆ ಕಂಪೆನಿಕೊಟ್ಟಂತೆಯೂ ಆಯಿತು."

ಲೀಲಾವತಿಗೆ ಒಳ್ಳೆ ಪೀಕಲಾಟಕ್ಕೆ ಇಟ್ಟುಕೊಂಡಿತು. ಅವಳು ಊಟಬೇಡವೆಂದರೆ ತಾನು ಕರೆದಾಗಲೆಲ್ಲ ತಮ್ಮ ಮನೆಗೆ ಊಟಕ್ಕೆ ಬರುತ್ತಿದ್ದ ಸುಮಿತ್ರೆ ಸದಾಶಿವ ಇವರ ಮುಂದೆ ದಾಕ್ಷಿಣ್ಯ ಪಟ್ಟುಕೊಂಡರೆ ಅವರು ಮನಸ್ಸು ಚಿಕ್ಕದು ಮಾಡಿಕೊಳ್ಳುತ್ತಾರಲ್ಲ ಎಂದು—ಹಸಿವಿಲ್ಲದೆ ಇದ್ದರೂ ಕೇವಲ ಕಂಪೆನಿಗಾಗಿ ಅವರೊಂದಿಗೆ ಊಟಕ್ಕೆ ಕೂತಿದ್ದು ಬರುವ ಶಾಸ್ತ್ರ ಮಾಡಬೇಕೆಂದು ನಿರ್ಧರಿಸಿದಳು. ಲೀಲಾವತಿಗೆ ಸದಾಶಿವನ ಮಾತೆಂದರೆ ಅಷ್ಟು ದಾಕ್ಷಿಣ್ಯವಿತ್ತು.

"ನಾರಾಯಣ, ಇವತ್ತು ಏನು ವಿಶೇಷ ಮಾಡಿದ್ದಿ?"

"ಆಲೂಗಡ್ಡೆ ಪಲ್ಯ, ಹಾಗಲಕಾಯಿ ಗೊಜ್ಜು, ಈರುಳ್ಳಿ ಹುಳಿ, ಸಾರ್."

"ಭೇಷ್! ನೋಡ್ರಿ ಲೀಲಾವತಿ ನಿಮ್ಮ 'ಪೆಟ್' ಹಾಗಲಕಾಯಿ ಗೊಜ್ಜು ಮಾಡಿದಾನಂತೆ, ನಾರಾಯಣನ ಕೈಗೊಜ್ಜು ತಿಂದಗೆ ನೀವು ಸಾವಿರ ವರ್ಷ ಮರೆಯುವುದಿಲ್ಲ" ಎಂದು ಕೈಕಾಲು ತೊಳೆಯಲು ಹಿತ್ತಲಿಗೆ ಹೊರಟ. ಅವನು ಬರುವ ವೇಳೆಗೆ ಸುಮಿತ್ರೆ ಎಲೆಹಾಕಿ, ಊಟದ ವ್ಯವಸ್ಥೆ ಮಾಡಿದ್ದಳು.

ಮೂವರೂ ಊಟಕ್ಕೆ ಕುಳಿತರು. ಶಾಸ್ತ್ರಕ್ಕೆ ಒಂದು ತುತ್ತು ಅನ್ನ ತಿನ್ನಲು ಬಂದ ಲೀಲಾವತಿಯ ಕೈಯಲ್ಲಿ ಸರಿಯಾದ ಊಟವನ್ನೇ ಮಾಡಿಸಿ, ಅವಳು ಆ ದಿನ ತಮ್ಮನ್ನು ಗೋಳು ಹೊಯ್ದುಕೊಂಡುದರ ಮುಯ್ಯಿಗೆ ಮುಯ್ಯಿ ತೀರಿಸಿಕೊಂಡರೆನ್ನಬೇಕು. ಊಟವಾದ ಮೇಲೆ ಎಲೆ ಅಡಿಕೆಯ ತಟ್ಟೆ ತಂದಳು ಸುಮಿತ್ರೆ. ಸದಾಶಿವ ಅಂಗಡಿಯಿಂದ ಬರುವಾಗ ದಾರಿಯಲ್ಲಿ ದೇವರಾಜಾ ಮಾರ್ಕೆಟ್ಟಿನಿಂದ ಸೊಗಸಾದ ವೀಳೆಯದೆಲೆ ತಂದಿದ್ದ. ಸುಮಿತ್ರೆ ತನ್ನ ವಿರಾಮದಲ್ಲಿ ಬಣ್ಣಕಟ್ಟಿ ಮಾಡಿದ್ದ ಗಮಗಮಿಸುವ ಅಡಿಕೆ ಪುಡಿ ಸೇರಿತ್ತು. ಸುಮಿತ್ರೆ ಬೀಡಾ ಕಟ್ಟುವುದರಲ್ಲಿ ಅಪೂರ್ವವಾದ ಕೌಶಲ್ಯ ಸಂಪಾದಿಸಿದ್ದಳು. ಒಂದೆರಡು ಬಾರಿ ಸುಮಿತ್ರೆ ಕೈಯಿಂದ ಬಂದ ಬೀಡದ ರುಚಿಯನ್ನು ಲೀಲಾವತಿಯು ಅನುಭವಿಸಿದ್ದಳು. ಇಂದು ಲೀಲಾವತಿ ವಿರಾಮವಾಗಿ ಕುಳಿತು ತಾನೇ ಕೈಯಾರ ಆರು ಬೀಡಗಳನ್ನು ತಯಾರಿಸಿ, ಮೂವರಿಗೂ ಎರಡು ಎರಡು ಬೀಡಗಳನ್ನು ಕೊಟ್ಟಳು. ಅವಳ ಕೈಯಿಂದ ಬೀಡಾಗಳನ್ನು ತೆಗೆದುಕೊಳ್ಳುತ್ತಿರುವಂತೆ ಕೆಲವು ದಿನಗಳ ಹಿಂದೆ ಸುಮಿತ್ರೆಯ ಮನೆಯಲ್ಲಿ ನಡೆದ ಪ್ರಣಯ ಪ್ರಸಂಗವೊಂದು ನೆನಪಾಯಿತು.

ಆ ದಿನ ಲೀಲಾವತಿ ಸುಮಿತ್ರೆಯನ್ನು ಅರಸಿಕೊಂಡು ಅವಳ ಮನೆಗೆ ಬಂದಿದ್ದಳು. ಲೀಲಾವತಿಯ ಮನೆಗೆ ಸುಮಿತ್ರೆಯ ವಿಳಾಸಕ್ಕೆ ಬಂದಿದ್ದ ಕಾಗದವೊಂದನ್ನು ತಲುಪಿಸಬೇಕಾಗಿತ್ತು. ಆಗತಾನೇ ಸದಾಶಿವ ಸುಮಿತ್ರೆಯರು ಊಟ ಮುಗಿಸಿ, ವಿಶ್ರಾಂತಿಗಾಗಿ ತಮ್ಮ ಕೋಣೆ ಸೇರಿದ್ದರು. ಲೀಲಾವತಿ ಸುಮಿತ್ರೆ ಎಲ್ಲೆಂದು ನಾರಾಯಣನನ್ನು ವಿಚಾರಿಸಿದಳು. ನಾರಾಯಣ ಊಟಮಾಡುತ್ತಿದ್ದವನು ರೂಮಿನ ಕಡೆ ತೋರಿಸಿದ. ಲೀಲಾವತಿ ಸುಮಿತ್ರೆಯನ್ನು ಹುಡುಕುತ್ತಾ ಅಲ್ಲಿಗೆ ಬಂದಾಗ ಆಕಸ್ಮಿಕವಾಗಿ

ಕೊಂಚವೇ ತೆರೆದಿದ್ದ ರೂಮಿನ ಬಾಗಿಲಿನ ಮೂಲಕ ಒಳಗೆ ನಡೆಯುತ್ತಿದ್ದ ದೃಶ್ಯ ಕಣ್ಣಿಗೆ ಬಿತ್ತು.

ಸದಾಶಿವ ತನ್ನ ನಿತ್ಯದ ಉಡಿಗೆಯಲ್ಲಿ ಅಂದರೆ ನೆಟ್ ಬನೀನು ಹಾಕಿಕೊಂಡು ಮಂಚ ಒರಗಿ ಮಲಗಿದ್ದ. ಸುಮಿತ್ರೆ ಮಂಚ ಒರಗಿ ಮಲಗಿದ್ದ. ಸುಮಿತ್ರೆ ಮಂಚದ ಕೊನೆಯಲ್ಲಿ ಕುಳಿತು ಗಂಡನನ್ನು ಒರಗಿಕೊಂಡು ಬೀಡ ಕಟ್ಟುವುದರಲ್ಲಿ ಮಗ್ನಳಾಗಿದ್ದಳು. ಒಂದೆರಡು ಬೀಡ ತಯಾರಿಸಿದ ಮೇಲೆ ಒಂದು ಬೀಡವನ್ನು ಗಂಡನ ಬಾಯಿಗೆ ಇಡಲು ಹೋದಳು. ಏಕೋ ಏನೋ ಸದಾಶಿವ ಬೇಡವೆಂದು ತಲೆಯಲ್ಲಾಡಿಸಿ, ಮತ್ತೆ ಏನೋ ಸಂಜ್ಞೆ ಮಾಡಿ ತೋರಿಸಿದ. ಅದರಂತೆ ಸುಮಿತ್ರೆ ಬೀಡ ಒಂದನ್ನು ತನ್ನ ಬಾಯಲ್ಲಿ ಕಚ್ಚಿಕೊಂಡು ಅದನ್ನು ಸದಾಶಿವನ ಮುಖದ ಬಳಿಗೆ ತಂದಳು. ಸದಾಶಿವ ಸುಮಿತ್ರೆಯ ಬಾಯಿಯಲ್ಲಿದ್ದ ಬೀಡಾವನ್ನು ಅರ್ಧ ಕಚ್ಚಿ ಉಳಿದ ಅರ್ಧವನ್ನು ಸುಮಿತ್ರೆಗೇ ಉಳಿಸಿದ. ಈಗ ಸದಾಶಿವನ ಸರದಿ. ಅವನು ಬೀಡವನ್ನು ತನ್ನ ಬಾಯಲ್ಲಿ ಕಚ್ಚಿಕೊಂಡು ಸುಮಿತ್ರೆಯನ್ನು ಆಹ್ವಾನಿಸಿದ. ಸುಮಿತ್ರೆ ಗಂಡನ ಬಾಯಿಯಲ್ಲಿದ್ದ ಬೀಡವನ್ನು ಆತುರದಲ್ಲಿ ಕಚ್ಚಲು ನೋಡಿದಳು. ಆಗ ಸದಾಶಿವ ಬೇಕೆಂದೇ ಬೀಡವನ್ನು ಬಾಯಿಯಲ್ಲಿ ಅಡಗಿಸಿಬಿಟ್ಟ ಕಾರಣದಿಂದ ಸುಮಿತ್ರೆಯಿಂದ ಅವನಿಗೆ ಅನಿರೀಕ್ಷಿತ ಚುಂಬನವೊಂದು ದೊರೆತಂತಾಯಿತು.

ಇದನ್ನು ಸೂಕ್ಷ್ಮವಾಗಿ ಕಣ್ಣಾರಕಂಡಿದ್ದ ಲೀಲಾವತಿಗೆ, ಬೆಳೆದ ಗಂಡುಹೆಣ್ಣುಗಳು ಅಂತರಂಗದಲ್ಲಿ ಸೇರಿದಾಗ ಎಷ್ಟು ಹುಚ್ಚಾಟವಾಡುತ್ತಾರೆ ಎಂದು ಒಂದು ಬಗೆಯ ಅಸೂಯೆ ಉಂಟಾಗಿತ್ತು. ಇಂದು ಆ ಎಲ್ಲ ನೆನಪು ಮತ್ತೆ ಮುತ್ತಿ ಬಂತು. ಲೀಲಾವತಿಗೆ ಅದನ್ನು ನೆನೆದಂತೆ ತುಂಬಾ ಲಜ್ಜೆಯುಂಟಾಗಿ ಅವಳು ತಲೆತಗ್ಗಿಸಿದಳು.

“ ಯಾಕೆ ಲೀಲಾ ಸುಮ್ಮನೆ ಕುಳಿತೆ. ಲಿಪ್‌ಸ್ಟಿಕ್ ಹಾಕಿಕೊಳ್ಳುವುದಿಲ್ಲವೆ? ” ಎಂದಳು ಸುಮಿತ್ರೆ.

“ ಏನು, ಲಿಪ್‌ಸ್ಟಿಕ್ಕೇ! ”—ರಾಗ ತೆಗೆದಳು ಅಚ್ಚರಿಯಿಂದ.

“ ಇದೇ ಲಿಪ್‌ಸ್ಟಿಕ್ ನಮ್ಮ ಪೂರ್ವಿಕರಿಗೆ ” ಎಂದು ಸುಮಿತ್ರೆ

ಬೀಡಾ ತೋರಿಸಿದಳು.

ಲೀಲಾವತಿ ಮಾತನಾಡದೆ ಸುಮ್ಮನೆ ನಕ್ಕುಬಿಟ್ಟಳು. ಸದಾಶಿವ ಕೊಂಚ ಕಾಲ ವಿಶ್ರಾಂತಿ ತೆಗೆದುಕೊಳ್ಳಲು ಅಲ್ಲಿಂದ ಎದ್ದು ಹೊರಟಾಗ ಲೀಲಾವತಿಯೂ ಎದ್ದು ಮನೆಗೆ ಹೊರಟಳು. ಸುಮಿತ್ರೆ ಸದಾಶಿವರ ಸರಸವಾದ ದಾಂಪತ್ಯ ಅವಳ ಹೃದಯಾಂತರಾಳದ ಬಯಕೆಯೊಂದನ್ನು ಕೆರಳಿಸದೆ ಇರಲಿಲ್ಲ. ಸುಮಿತ್ರೆ ಹೇಳಿದ್ದ ಮಾತುಗಳು ಅದರಲ್ಲೂ ಸಶಿಕ್ಷಿತ ಅವಿವಾಹಿತ ಯುವತಿಯರ ಬಗ್ಗೆ ಹೇಳಿದ್ದ ಮಾತುಗಳು ಅವಳ ಮನಸ್ಸಿನ ಮೇಲೆ ತನ್ನದೇ ಆದ ಅಚ್ಚು ಒತ್ತಿದ್ದುವು. ತಾನು ವಿದ್ಯಾವತಿಯಾದರೂ ಸಂಸಾರಿಯಾಗಿ ಆದರ್ಶ ಗೃಹಿಣಿ ಮಾತ್ರವಲ್ಲದೆ ಜಗತ್ತಿಗೆ ತನ್ನ ಕೈಲಾದಷ್ಟು ಸೇವೆ ಸಲ್ಲಿಸುತ್ತಾ ಬಂದಿರುವ ಸುಮಿತ್ರೆಯ ಜೀವನ ಅವಳಿಗೆ ಅನುಕರಣೀಯವೆನಿಸದೆ ಇರಲಿಲ್ಲ. ಅವಳಿಗೆ ಮೊದಲನೆಯ ಬಾರಿ ತಾನು ಒಂಟಿಯಾಗಿದ್ದೂ ಸುಖಿಯಾಗಿರುವೆನೆಂಬ ಮಾತು ಎಷ್ಟು ಸುಳ್ಳು—ಎಂತಹ ಆತ್ಮವಂಚನೆಯ ಮಾತು ಎಂಬುದು ಅರಿವಾಯಿತು. ತನಗೆ ಹೆಣ್ಣಿಗೆ ಇರಬೇಕಾದ ಎಲ್ಲ ಸೌಭಾಗ್ಯಗಳಿದ್ದೂ ತನ್ನ ಸುಖದ ಪಾತ್ರೆ ತುಂಬಿ ಬರದೆ ಇದ್ದುದು ಏಕೆಂದು ಅವಳಿಗೆ ಸುಮಿತ್ರೆಯ ಮಾತುಗಳು ತೋರಿಸಿಕೊಟ್ಟಿದ್ದುವು. ದಾಂಪತ್ಯ ಜೀವನ ಗಂಡುಹೆಣ್ಣಿನ ಬಾಳ್ವೆಯಲ್ಲಿ ನೈಸರ್ಗಿಕವಾದ ವಸಂತ ಋತು. ಬಾಲ್ಯ ಯೌವನ ವೃದ್ಧಾಪ್ಯಗಳು— ಜೀವನದ ಪ್ರಾತಃಕಾಲ ಮಧ್ಯಾಹ್ನ ಸಂಜೆಗಳಿದ್ದಂತೆ: ತಾನು ಜೀವನದ ಉಷಃಕಾಲದಲ್ಲಿ ಉತ್ಸಾಹದ ತುಂಬು ಹೊಳೆಯಾಗಿ ಹರಿದಿದ್ದವಳು-ಜೀವನದ ಮಧ್ಯಾಹ್ನದಲ್ಲಿ ಬತ್ತಿಹೋದ ಕಮರಿಯಂತಾಗಿ, ಮುಂದೆ ಜೀವನದ ಸಂಧ್ಯಾರಾಗ ಹಾಡುವಂದು ತಾನು ಬದುಕಿ ಬಾಳಿದ ಜಗತ್ತಿನಲ್ಲಿ ತಿಲಾಂಶವಾದರೂ ಉಪಯೋಗಕ್ಕೆ ಬರದೆ, ಯಾರಿಂದಲೂ ಹೊಗಳಿಸಿಕೊಳ್ಳದೆ, ಯಾರಿಂದಲೂ ಗೌರವಿಸಲ್ಪಡದೆ, ಯಾರಿಂದಲೂ 'ಅಯ್ಯೋ, ಒಳ್ಳೆಯ ಜೀವ' ಎಂದು ಅನ್ನಿಸಿಕೊಳ್ಳದೆ, ಹೇಳಹೆಸರಿಲ್ಲದಂತೆ ಬದುಕಿ ಒಂದು ದಿನ ನೀರ್ಗುಳ್ಳೆಯಂತೆ ಇಲ್ಲವಾಗುವ ವ್ಯರ್ಥಜೀವನವನ್ನು ನೆನೆದು ಅವಳಿಗೆ ತುಂಬಾ ಪಶ್ಚಾತ್ತಾಪವಾಯಿತು. ತಾನು ಹೆಣ್ಣಾಗಿ ಹುಟ್ಟಿ—ಹೆಣ್ಣುತನದ ಪರ

ಮೋತ್ಕೃಷ್ಟ ಪದವಿ—ಮಾತೃತ್ವದ ಹಿರಿಮೆಯನ್ನು ಅರಿಯದಿದ್ದ ಮೇಲೆ ಬದುಕೇ ತಾನೇ ಏನು ಸಾರ್ಥಕ? ಜೀವನದಲ್ಲಿ ಎಲ್ಲ ಬಗೆಯ ಸುಖಗಳಿಗೆ ಅವಕಾಶವಿದ್ದೂ ತಾನು ದಾಂಪತ್ಯ ಸುಖದಿಂದ ವಂಚಿತಳಾಗಿದ್ದಾಗ ತನ್ನ ಸುಖದ ಕೊಡ ತುಂಬಿರುವುದೆಂದು ಹೇಳಿಕೊಳ್ಳುವುದೆಂತು? ತಾನೆಷ್ಟು ಬಾರಿ ತನ್ನ ಸುಖದ ಕಲ್ಪನೆಯಲ್ಲಿ ಇಂದ್ರಿಯ ಸುಖವನ್ನು ನೆನೆದು ಅದಕ್ಕಾಗಿ ಹಾತೊರೆಯದಿರಲಿಲ್ಲ. ಎಷ್ಟೋ ಬಾರಿ ನಿಸರ್ಗದಲ್ಲಿ ಸಹಜವಾಗಿ ಕಾಣುವ ಮೃಗಪಕ್ಷಿಗಳ ಶೃಂಗಾರ ಒಲುಮೆಕೂಟಗಳನ್ನು ನೋಡಿ ಅವಳ ಹಸಿವು ಜಾಗ್ರತಗೊಂಡಿರಲಿಲ್ಲ! ನಾಟಕ, ಸಿನೀಮಾ, ರೋಮಾಂಚಕಾರಿ ಪ್ರಣಯ ಕಥೆ ಕಾದಂಬರಿಗಳು ಅವಳ ಒಡಲಿನ ದಾಹವನ್ನು ಎಷ್ಟು ಬಾರಿ ಕೆರಳಿಸಿರಲಿಲ್ಲ! ಇಷ್ಟಾಗಿದ್ದರೂ ಅವಳ ಕಾಲೇಜಿನ ಜೀವನದಲ್ಲಿ ಭಾವಾತಿರೇಕದಲ್ಲಿ ಜಾರಬಹುದಾಗಿದ್ದ ಎಂತೆಂತಹ ಪರಿಸ್ಥಿತಿಯಲ್ಲೂ ಅವಳು ಸಂಯಮವನ್ನು ಕಾಪಾಡಿಕೊಂಡಿದ್ದಳು. ಅವಳ ವಿವೇಕ ಅವಳನ್ನೆಂದಿಗೂ ಪ್ರಜ್ಞಾಶೂನ್ಯವಾಗಲು ಅವಕಾಶ ಕೊಟ್ಟಿರಲಿಲ್ಲ. ಇದಕ್ಕೆ ನಿದರ್ಶನ ದಿವಾಕರನೊಂದಿಗೆ ಅವಳಿಗೆ ಇದ್ದ ಸಲಿಗೆ. ಅವಳು ತನ್ನ ಸಲಿಗೆಗೆ ಒಂದು ಆವರಣವನ್ನು ಕಲ್ಪಿಸಿ ಅದರ ಎಲ್ಲೆಯನ್ನು ಮೀರದಂತೆ ಎಚ್ಚರ ವಹಿಸಿದ್ದಳು. ಆಗ ಅವಳನ್ನು ಯಾವ ಬಗೆಯ ಇಂದ್ರಿಯಾಕರ್ಷಣೆ ಬಾಧಿಸಿರಲಿಲ್ಲ. ಕಾಮದ ಬಗ್ಗೆ ಅವಳು ಅಂಧಳಾಗಿದ್ದಳು. ದಿವಾಕರ ಅವಳಿಗೆ ಆದರ್ಶ ಪ್ರೇಮಿಯಾಗಿ ತೋರಿದರೂ ಅವಳಲ್ಲಿ ಒಡಲಿನ ಹಸಿವನ್ನು ಹುಟ್ಟಿಸಿರಲಿಲ್ಲ. ಅವನೆಂದೂ ಅವಳಿಗೆ ಲೈಂಗಿಕ ಆಕರ್ಷಣೆ ಕೊಟ್ಟಿರಲಿಲ್ಲ. ದಿವಾಕರನ ವ್ಯಕ್ತಿತ್ವ ಅಂತಹದು. ಅವನ ಉದಾತ್ತ ವಿಚಾರಗಳು, ನಯವಾದ ಸಂಸ್ಕಾರ ಪೂರ್ಣ ನಡವಳಿಕೆ ಯಾರಲ್ಲೂ ಪ್ರೀತಿಗೌರವಗಳನ್ನು ಹುಟ್ಟಿಸದೆ ಇರುತ್ತಿರಲಿಲ್ಲ. ಆದರೂ ಅವನನ್ನು ಕೂಡಿ ಸುಖಿಸಬೇಕೆಂಬ ಕಾಮತೃಷೆ ಅವಳಿಗೆ ಒಮ್ಮೆಯಾದರೂ ಆಗಿರಲಿಲ್ಲ. ಹೀಗಿದ್ದುದರಿಂದಲೇ ದಿವಾಕರನನ್ನು ಅವಳು ಪ್ರೇಮಿಸಿದ್ದರೂ ಅವನನ್ನು ಮದುವೆಯಾಗಲು ಸಮ್ಮತಿಸಿರಲಿಲ್ಲ. ಕಾಮವೆನ್ನುವುದು ದೈಹಿಕ ವ್ಯಾಪಾರವೆಂದೂ, ಪ್ರೇಮವೆನ್ನುವುದು ಹೃದಯ ವ್ಯಾಪಾರವೆಂದೂ ತಿಳಿದಿದ್ದ ಅವಳಿಗೆ ಪ್ರೇಮಿಸಿದ

ವ್ಯಕ್ತಿಯನ್ನೇ ಕಾಮಿಸಲೂ ಬೇಕೆನ್ನುವ ವಿಷಯ ಕಡ್ಡಾಯವೆನಿಸಿರಲಿಲ್ಲ. ದಿವಾಕರ ಅವಳಲ್ಲಿ ಪ್ರೇಮ ಪ್ರಚೋದನೆ ಮಾಡಿದ್ದನೇ ಹೊರತು ಕಾಮ ಪ್ರಚೋದನೆಯನ್ನು ಮಾಡಿರಲಿಲ್ಲ. ಹೀಗಾಗಿ ದಿವಾಕರನನ್ನು ಪ್ರೇಮಿಸಿದ್ದರೂ ಅವನನ್ನು ಒಮ್ಮೆಯಾದರೂ ಕಾಮಿಸಿರಲಿಲ್ಲ. ತನ್ನಲ್ಲಿ ಇಂದ್ರಿಯ ತೃಷೆಯನ್ನು ಕೆರಳಿಸುವ ಗಂಡು ಈ ಜಗತ್ತಿನಲ್ಲಿ ಇಲ್ಲವೇನೋ ಎಂದು ತಿಳಿದಿದ್ದ ಅವಳಿಗೆ ಅಕಸ್ಮಿಕವಾಗಿ ಪುರುಷ ಸಿಂಹನೊಬ್ಬನ ದರ್ಶನವಾಗಿತ್ತು. ಆದರೆ ಆ ಪುರುಷಸಿಂಹನು ಬೇರಾರೂ ಆಗಿರದೆ ಸುಮಿತ್ರೆಯ ಮನೋವಲ್ಲಭನಾಗಿದ್ದುದು ಲೀಲಾವತಿಯ ದೌರ್ಭಾಗ್ಯವೇ ಸರಿ.

ಲೀಲಾವತಿ ಸದಾಶಿವನನ್ನು ನೋಡಿದ ಲಾಗಾಯಿತು ಮೊದಲ ನೋಟದಲ್ಲಿಯೇ ಅವನ ಮನಮೋಹನಾಕಾರ ಅವಳ ಮನಸಿನ ಮೇಲೆ ವಿಲಕ್ಷಣವಾದ ರೀತಿಯಲ್ಲಿ ಅಚ್ಚು ಒತ್ತಿತ್ತು. ಅದರಿಂದ ತನ್ನ ಮೇಲಾಗುವ ಪರಿಣಾಮವೆಂತಹದೆಂದು ಅವಳು ಆಗ ತಿಳಿಯದೆ ಹೋಗಿದ್ದಳು. ದಿವಾಕರನ ಸುಂದರಹೃದಯವನ್ನು ಅವಳು ಮೆಚ್ಚಿಕೊಂಡಿದ್ದಂತೆ ಸದಾಶಿವನ ಸುಂದರ ಕಾಯವನ್ನು ತಾನು ಮೆಚ್ಚಿಕೊಂಡಿರುವುದಾಗಿ ಅವಳು ತಿಳಿದಿದ್ದಳು. ರೂಪಾರಾಧನೆಯಲ್ಲಿ ಯಾವ ಬಗೆಯ ತಪ್ಪು ಕಾಣದಿದ್ದ ಅವಳಿಗೆ ಸದಾಶಿವ ಸುಮಿತ್ರೆಯ ಪತಿಯಾಗಿರುವ ಸಂಗತಿ—ಯಾವ ಬಗೆಯ ಸಂದೇಹಕ್ಕೂ ಎಡೆಕೊಟ್ಟಿರಲಿಲ್ಲ. ಅವನು ತನ್ನವನಾಗಬೇಕೆಂಬ ಆಸೆಯೂ ಅವಳಿಗೆ ಇರಲಿಲ್ಲ. ಸದಾಶಿವನ ಸೌಮ್ಯವಾದ ಮುಖಮುದ್ರೆ, ತೇಜಃಪುಂಜವಾದ ಕಣ್ಣುಗಳು, ತುಂಬಿದ ಸ್ನಾಯುಗಳು-ತನ್ನದೇ ಆದ ಮೋಹಕತೆಯಿಂದ ಕೂಡಿದ್ದ ದಷ್ಟಪುಷ್ಟವಾಗಿದ್ದ ಅವನ ಎದೆ, ತೋಳು ತೊಡೆಗಳು ಮೈಕೇಲ್ ಎಂಜೆಲೊ ಕಡೆದಿಟ್ಟ ಮಲಗಿರುವ ಮನ್ಮಥನ ಚಿತ್ರದ ನೆನಪು ತಂದುಕೊಡುತ್ತಿತ್ತು. ಎಲ್ಲಕ್ಕಿಂತಲೂ ಲೀಲಾವತಿಯ ಚಿತ್ತಾಪಹಾರ ಮಾಡಿದುದೆಂದರೆ ಸದಾಶಿವನ ಗಂಡುಮೋರೆ. ಪೌರುಷಯುಕ್ತವಾದ ಕಣ್ಣುಗಳು. ಆ ಕಣ್ಣುಗಳ ತೀಕ್ಷ್ಣತೆಗೆ, ಹೊಳಪಿಗೆ ಅವಳು ಮಾರು ಹೋಗಿದ್ದಳು. ಆ ಕಣ್ಣಿನ ನೋಟ ಅವಳಿಂದ ಎದುರಿಸಲು ಆಗುತ್ತಿರಲಿಲ್ಲ. ಅದರಲ್ಲಿ ಅವಳ ಹೃದಯದಲ್ಲಿ ಮುದುಡಿದ್ದ ಸ್ತ್ರೀತ್ವವನ್ನು ಪ್ರಚೋ

ರಿಸುವ ಶಕ್ತಿಯಿತ್ತು. ಅವನ ದೃಷ್ಟಿಯನ್ನು ನೋಡಿದಾಗಲೆಲ್ಲ ಲೀಲಾವತಿಗೆ ತಾನು ಹೆಣ್ಣೆಂಬ ಭಾವ ಬಂದು ಹೋಗಿ, ಸೆರಗಿನಮೇಲೆ ಗಮನ ಹೋಗುತ್ತಿತ್ತು. ಸದಾಶಿವನೊಡನೆ ಇರುವಾಗಲೆಲ್ಲ ಹೀಗೇಕೆ ಆಗುವುದೆಂದು ಅವಳು ಎಷ್ಟೋ ಬಾರಿ ಆಶ್ಚರಿಪಟ್ಟಿದ್ದಳು. ದಿವಾಕರ ಅವಳ ಹೃದಯವನ್ನು ಅರಳಿಸಿ, ಮುದ್ದುಗೊಳಿಸುತ್ತಿದ್ದರೆ ಸದಾಶಿವ ಅವಳ ಸ್ತ್ರೀತ್ವನನ್ನೂ ವಿಷಯಾಸಕ್ತಿಯನ್ನು ಕೆರಳಿಸಿ, ಅವಳಿಗೆ ಭಾವೋದ್ರೇಕವನ್ನು ಉಂಟುಮಾಡುತ್ತಿದ್ದ. ಒಂದು ಶೀತಲವಾದ ಬೆಂಕಿಯಂತೆ ಹಿತವಾಗಿದ್ದರೆ ಮತ್ತೊಂದು ಜಾಜ್ವಲಿಸುವ, ಸುಟ್ಟರೂ ಹಿತವೆನಿಸುವ ಬೆಂಕಿ. ಒಂದರ ಕಾವಿಗೆ ದೇಹ ಶೀತಲವಾಗಿ ಮುದುಡುತ್ತಿತ್ತು....ಆದರೆ ಹೃದಯ ಹೂವಿನಂತೆ ಬಿರಿಯುತ್ತಿತ್ತು. ಇನ್ನೊಂದರ ಕಾವಿಗೆ ಹೃದಯ ಕುಗ್ಗಿದರೂ ದೇಹದ ಎಲ್ಲ ಭಾಗವಲ್ಲಿ ವಿಷಯಾಸಕ್ತತೆ ಸೆಟೆದು ನಿಲ್ಲುತ್ತಿತ್ತು. ಹೀಗೇಕೆ ಆಗುವುದೆಂದು ಅವಳಿಂದ ನಿರ್ಧರಿಸಲು ಆಗದೆ ಹೋಯಿತು. ತಾನು ಸದಾಶಿವನನ್ನು ನೋಡುತ್ತಿರುವ ದೃಷ್ಟಿಯೇ ಬೇರೆ ಬಗೆಯದೆಂದು ಅವಳಿಗೆ ಆಗ ತಿಳಿದಿದ್ದರಲ್ಲವೆ?

ಎಷ್ಟೋ ಬಾರಿ ಲೀಲಾವತಿ ಸದಾಶಿವನನ್ನು ಹಸಿದ ಕಣ್ಣಿಂದ ನೋಡುತ್ತಾ ನಿಂತು ಬಿಡುತ್ತಿದ್ದಳು. ಅವನ ರೂಪಾರಾಧನೆ ಮಾಡಿದಷ್ಟು ಇನ್ನೂ ನೋಡುವ ಲವಲವಿಕೆ ಅವಳಲ್ಲಿ ಉಂಟಾಗುತ್ತಿತ್ತು. ಅವನನ್ನು ನೋಡುತ್ತಿದ್ದಂತೆ ಅವನ ಬಾಹುಗಳಲ್ಲಿ ತನ್ನನ್ನು ಅರ್ಪಿಸಿಕೊಂಡು ಅವನ ವಕ್ಷಸ್ಥಳದಲ್ಲಿ ತಲೆ ಇರಿಸಿಕೊಂಡು ಅವನ ಮುಂಗುರುಳಲ್ಲಿ ಕೈಯಾಡಿಸುತ್ತಾ, ಇರುವ ಆಸೆಯಾಗುತ್ತಿತ್ತು. ಆದರೆ ಅವಳ ಈ ಬಗೆಯ ಆಸೆ, ಅವಳಂತಹ ಹೆಣ್ಣು ಮಾಡಬಾರದ ಆಸೆ. ಅದು ಲಜ್ಜಾಸ್ಪದ ಮಾತ್ರವೇ ಅಲ್ಲ, ನಿಂದಾಸ್ಪದವೂ ಹೌದು. ಸದಾಶಿವ ಧರ್ಮಾರ್ಥಕಾಮಗಳಲ್ಲಿ ಸುಮಿತ್ರೆಗೆ ಸೇರಿದವನು. ಅವನೊಡನೆ ಅನುಭವಿಸಬಹುದಾದ ಎಲ್ಲ ಸುಖ ಸುಮಿತ್ರೆಗೆ ಮೀಸಲು. ಇದನ್ನು ನೆನೆದಾಗ ಸುಮಿತ್ರೆ ಎಷ್ಟು ಪುಣ್ಯಶಾಲಿಯೆಂದು ಸುಮಿತ್ರೆಯ ಬಗ್ಗೆ ಲೀಲಾವತಿಗೆ ಅಸೂಯೆ ಉಂಟಾಗದೆ ಇರುತ್ತಿರಲಿಲ್ಲ. ಎಷ್ಟೋ ಬಾರಿ ಮುಚ್ಚುಟೆಯಾಗಿ ಸಂಸಾರ ಮಾಡಿಕೊಂಡಿರುವ ತನ್ನ

ಗೆಳತಿಯ ಸುಖವನ್ನು ಸೈರಿಸದೆ ಮಾಡುವ ಈರ್ಷೆ ತನ್ನಂಥ ಹೆಣ್ಣಿಗೆ ಉಚಿತ ವಲ್ಲದ ಕೆಲಸವೆಂದು ಅನಿಸಿ, ತನ್ನ ಅಸೂಯೆಗಾಗಿ ಅವಳಿಗೇ ಪಶ್ಚಾತ್ತಾಪ ವಾಗುತ್ತಿತ್ತು. ಆಗ ಅವಳು ತನ್ನನ್ನು ತಾನೇ ಹಳಿದುಕೊಳ್ಳುತ್ತಿದ್ದಳು. ಆದರೆ ಅದೆಲ್ಲ ಕೇವಲ ಕೆಲವು ಕಾಲ. ಮತ್ತೆ ಸದಾಶಿವನ ತೇಜಃಪುಂಜ ಮುಖ ಕಣ್ಣಿಗೆ ಬಿದ್ದಾಗ ಲೀಲಾವತಿಯ ದೇಹ ಉದ್ವೇಗವನ್ನು ತಡೆ ಹಿಡಿಯಲಾರದೆ ರೋಮಾಂಚನಗೊಂಡು, ಕಂಪಿಸುತ್ತಿತ್ತು. ಆಗ ಅವನ ಸಾನ್ನಿಧ್ಯ ಸುಖಕ್ಕಾಗಿ ಅವಳು ಹಾತೊರೆಯುತ್ತಿದ್ದಳು. ಅಂತಹ ಹೊತ್ತಿ ನಲ್ಲೆಲ್ಲಾ ಅವಳ ವಿವೇಕ ಅವಳನ್ನು ಎಚ್ಚರಿಸುತ್ತಲೇ ಬಂದಿತ್ತು. ಆದರೂ ಒಮ್ಮೊಮ್ಮೆ ಕಣ್ಣಿಗೆ ಬೀಳುತ್ತಿದ್ದ ಸದಾಶಿವನ ಸುಂದರ ವದನ, ಕಿವಿಗೆ ಬೀಳುತ್ತಿದ್ದ ಸರಸೋಕ್ತಿ, ರಸಿಕತೆ, ಹಾಗೂ ಶೃಂಗಾರಗಳು ಅವಳ ಸುಪ್ತ ಆಸೆಗಳನ್ನು ಉದ್ದೀಪನಗೊಳಿಸುತ್ತಿತ್ತು.

ಒಮ್ಮೆಯಂತೂ ಸದಾಶಿವನ ಶೃಂಗಾರವನ್ನು ಕದ್ದು ನೋಡಿದ್ದ ಲೀಲಾ ವತಿಗೆ ವಿಚಿತ್ರ ವೇದನೆಯುಂಟಾಗಿತ್ತು. ಅದು ಸದಾಶಿವನ ಬಗ್ಗೆ ಅವಳಿ ಗಿದ್ದ ಎಲ್ಲ ಭಾವನೆಯ ಸ್ಪಷ್ಟೀಕರಣವಾಗಿತ್ತು. ತಾನು ದಿವಾಕರನಿಗೆ ಪ್ರೇಮಾರ್ಪಣೆ ಮಾಡಿದ್ದಂತೆ ಸದಾಶಿವನಿಗೆ ಕಾಮಾರ್ಪಣೆ ಮಾಡಿರುವು ದಾಗಿ ಆ ದಿನವೇ ಅವಳಿಗೆ ಅರಿವುಂಟಾದ್ದು. ಇದರ ಪರಿಣಾಮ?

# ೧೩

ಶನಿವಾರಸಂತೆಯಿಂದ ತಂದೆ ವೆಂಕಪ್ಪಯ್ಯ ಸುಮಿತ್ರೆಗೆ ಕಾಗದ ಬರೆದಿದ್ದರು. ಸುಮಿತ್ರೆಯ ತಮ್ಮ ವೆಂಕಟೇಶನಿಗೆ ಉಪನಯನವನ್ನು ನೆರವೇರಿಸಲು ನಿಶ್ಚಯಿಸಿರುವುದಾಗಿಯೂ, ಆ ವೇಳೆಗೆ ಸುಮಿತ್ರೆ ತಪ್ಪದೆ ಬರಬೇಕೆಂದೂ, ತಾವೇ ಬಂದು ಊರಿಗೆ ಕರೆದುಕೊಂಡು ಹೋಗುವುದಾಗಿಯೂ ಬರೆದಿದ್ದರು. ಸುಮಿತ್ರೆಯ ತಂದೆತಾಯಿಗಳು ಮಗಳನ್ನು ನೋಡಿ ಬಹಳ ದಿವಸಗಳಾಗಿದ್ದುವು. ಅವರು ಮೊಮ್ಮಗನನ್ನು ನೋಡಿಯೇ ಇರಲಿಲ್ಲ. ಊರಿಗೆ ಬಾ ಎಂದು ಅನೇಕ ಪತ್ರ ಬರೆದಿದ್ದರೂ, ಮೈಸೂರಿನಲ್ಲಿ ಫಾರ್ಮಸಿ ಬಿಟ್ಟು ಹೊರಡಲು ಅವಕಾಶವಾಗಿರಲಿಲ್ಲ. ಈಗ ತಮ್ಮನ ಮುಂಜಿಯ ವೇಳೆಗಾದರೂ ಅವಳು ತವರುಮನೆಗೆ ಹೋಗಬೇಕಾಗಿತ್ತು. ಸುಮಿತ್ರೆ ಈ ವಿಷಯವನ್ನು ಸದಾಶಿವನೊಂದಿಗೆ ಪ್ರಸ್ತಾಪಿಸಿ, ಅವನ ಅನುಮತಿಯನ್ನು ತೆಗೆದುಕೊಂಡು, ಒಂದು ದಿನ ವೆಂಕಪ್ಪಯ್ಯನ ಜತೆಯಲ್ಲಿ ಊರಿಗೆ ಹೊರಟಳು. ಹೆಚ್ಚೆಂದರೆ ಒಂದು ವಾರವಾದರೂ ಇರಬೇಕಾಗಿ ಬರುವುದೆಂದು ತನ್ನ ಫಾರ್ಮಸಿ ನೋಡಿಕೊಳ್ಳಲು ತನ್ನ ಪರಿಚಿತ ಡಾಕ್ಟರಿಗೆ ತಿಳಿಸಿ, ಆದಷ್ಟು ಬೇಗ ಹಿಂದಿರುಗುವುದಾಗಿ ಭರವಸೆ ಕೊಟ್ಟು ಶನಿವಾರಸಂತೆಗೆ ನಡೆದಳು. ವೆಂಕಪ್ಪಯ್ಯನವರು ಮುಂಜಿಗೆ ಅಳಿಯನನ್ನು ಕರೆದರೂ — ಸದಾಶಿವ ಮನೆಯ ಕಡೆ, ಅಂಗಡಿಯ ಕಡೆ ನೋಡಿಕೊಳ್ಳಲು ಯಾರೂ ಇಲ್ಲವೆಂದೂ, ಸಾಧ್ಯವಾದರೆ ಲಗ್ನದ ವೇಳೆಗೆ ಬಂದು ಹೋಗುವುದಾಗಿ ಹೇಳಿ, ಮೈಸೂರಿನಲ್ಲಿಯೇ ಉಳಿದುಕೊಂಡ. ಸುಮಿತ್ರೆ ಮುಂಜಿಯ ಅಡಿಗೆ ಕೆಲಸದಲ್ಲಿ ನೆರವಾಗಲು ತನ್ನೊಂದಿಗೆ ನಾರಾಯಣನನ್ನು ಕರೆದೊಯ್ದಳು. ನಾರಾಯಣನನ್ನು ತನ್ನೊಡನೆ ಕರೆದೊಯ್ಯಲು ಮತ್ತೊಂದು ಕಾರಣವೆಂದರೆ ಬರುವಾಗ ತನಗೆ ಜತೆಯಾಗುವುದೆಂದು. ಸದಾಶಿವ ಊಟ ತಿಂಡಿಗಳಿಗೆ ಧಾವಂತ ಪಡದೆ ಆ ಎಂಟು ದಿನಗಳು ಹೋಟಲಿನಲ್ಲಿ ಊಟಮಾಡುವುದಾಗಿ ಆಶ್ವಾಸನವಿತ್ತ ಮೇಲೆ ನಾರಾಯಣನನ್ನು ತನ್ನೊಡನೆ ಕರೆದೊಯ್ಯಲು ಸುಮಿತ್ರೆ ಸಮ್ಮತಿಸಿದುದು. ನಾರಾಯಣ ಮನೆಯಲ್ಲಿಯೇ ಇರಬೇಕೆಂದು ಸುಮಿತ್ರೆ

ಅಭಿಪ್ರಾಯಪಟ್ಟರೂ, ಮಲೇರಿಯಾ ಜ್ವರದಿಂದ ಕಂಗಾಲಾಗಿದ್ದ ಸುಮಿತ್ರೆಯ ತಾಯಿಗೆ ಅಡಿಗೆ ಕೆಲಸದಲ್ಲಿ ನೆರವಾಗಲೆಂದೇ ಸದಾಶಿವ ಅವನನ್ನು ಸುಮಿತ್ರೆಯೊಡನೆ ಕಳುಹಿಸಿಕೊಟ್ಟಿದ್ದ.

ಸುಮಿತ್ರೆ ಹೊರಟುಹೋದ ಮೇಲೆ ಮನೆಯಲ್ಲಿ ಸದಾಶಿವ ಒಂಟಿಯಾಗಿ ಉಳಿದ. ಸುಮಿತ್ರೆ, ಬಾಲಚಂದ್ರ ಇದ್ದಾಗ ತುಂಬಿದಂತಿದ್ದ ಮನೆ ಈಗ ಅವನಿಗೆ ಹಾಳು ಸುರಿಯಲಾರಂಭಿಸಿತ್ತು. ಅವನು ಸುಮಿತ್ರೆಗೆ ಹೇಳಿದ್ದಂತೆ ತನ್ನ ಅಂಗಡಿಗೆ ಸಮೀಪದಲ್ಲಿದ್ದ ಚಂದ್ರಭವನದಲ್ಲಿ ಊಟಮಾಡಿ, ಮನೆ ಬೇಸರವಾಗುತ್ತಿದ್ದುದರಿಂದ ಆ ಕಾಲವನ್ನೂ ಅಂಗಡಿಯಲ್ಲಿಯೇ ಕಳೆಯಲು ನಿಶ್ಚಯಿಸಿದ.

ಮೊದಲನೆಯ ದಿನ ಹೋಟಲಿನಲ್ಲಿ ಊಟ ಮುಗಿಸಿ ಮನೆಗೆ ಅಭ್ಯಾಸದಂತೆ ವಿಶ್ರಾಂತಿಗೆಂದು ಬಂದಾಗ ಅವನು ಬರುವುದನ್ನೇ ಕಾಯುತ್ತಿದ್ದ ಲೀಲಾವತಿ ಪ್ರಶ್ನಿಸಿದಳು, " ಊಟವಾಯಿತೆ ? "

" ಸದಾಶಿವ ' ಹೂಂ ' ಗುಟ್ಟಿದ.

" ಎಲ್ಲಿ ? "

" ಹೋಟಲಿನಲ್ಲಿ ಮಾಡಿಕೊಂಡು ಬಂದೆ."

" ನಾವುಗಳೆಲ್ಲ ಇದ್ದೂ ನೀವು ಹೋಟಲಿನಲ್ಲಿ ಊಟಮಾಡಿಕೊಂಡು ಬರುವಂತಹ ಸ್ಥಿತಿ ನಿಮಗೇನು ಬಂದಿದೆ? ನಾವುಗಳು ಒಂದೇ ಮನೆಯವರಂತೆ ಇದ್ದರೂ ಒಪ್ಪೊತ್ತಿನ ಊಟಕ್ಕೆ ನೀವು ಹೋಟಲಿಗೆ ಹೋಗಬೇಕೆ? ನೀವು ಹೋಟಲಿಗೆ ಹೋದರೆ ನಮಗೆ ಶುದ್ಧ ಅವಮಾನ! ಬೆಳಿಗ್ಗೆ ಸುಮಿತ್ರೆ ಊರಿಗೆ ಹೊರಡುವಾಗಲೇ ಊಟಕ್ಕೆ ನಿಮ್ಮನ್ನು ನಮ್ಮ ಮನೆಗೇ ಕಳುಹಿಸಿಕೊಡಲು ಅವಳಿಗೆ ಹೇಳಿದ್ದೆ. ಅವಳು ನಿಮಗೆ ಹೇಳಿದಳೋ ಇಲ್ಲವೋ ತಿಳಿಯದು. ನೀವು ಊಟಕ್ಕೆ ಬರುವಿರೆಂದು ನಮ್ಮ ಅಣ್ಣ ಇದುತನಕ ನಿಮಗಾಗಿ ಎದುರು ನೋಡುತ್ತಿದ್ದರು. ನೀವು ಮನೆಗೆ ಬರದೆ ಹೋಟಲಿಗೆ ಯಾಕೆ ಹೋದಿರಿ....ಹೋಗಲಿ ಇಂದಿನಿಂದ ಸುಮಿತ್ರೆ ಮೈಸೂರಿಗೆ ಬರುವ ತನಕ ನೀವು ಹೋಟಲಿಗೆ ಹೋಗಬಾರದು. ನಮ್ಮ ಮನೆಗೆ ಊಟಕ್ಕೆ ಬರಬೇಕು ತಿಳಿಯಿತೆ ? " ಎಂದು ಆಗ್ರಹ ಪೂರ್ವವಾಗಿ ಹೇಳಿದಳು. ಆ

ಮಾತಿಗೆ ಸದಾಶಿವ ಸಂಕೋಚಗೊಂಡು ಹೇಳಿದ:

"ನಿಮಗೇಕೆ ವೃಥಾ ತೊಂದರೆ. ಇನ್ನು ಎರಡು ಮೂರು ದಿನಗಳು ತಾನೆ? ನಾನು ಹೇಗಾದರೂ ಕಾಲಹಾಕುತ್ತೇನೆ."

"ನನ್ನ ಮನೆಗೆ ನೀವು ಊಟಕ್ಕೆ ಬಂದರೆ ನಮಗೆ ತೊಂದರೆಯೆ? ನೀವು ಎಂದಿಗೂ ಹಾಗೆ ತಿಳಿಯಬಾರದು. ನಿಮಗಾಗಿ ನಾವು ಯಾವ ತೊಂದರೆ ತೆಗೆದುಕೊಳ್ಳಬೇಕಾಗಿದೆ? ಅಡಿಗೆಯವಳು ಇದ್ದಾಳೆ. ಮಾಡು ತ್ತಾಳೆ. ನೀವು ವೃಥಾ ಸಂಕೋಚಪಡುತ್ತಿದ್ದೀರಿ ಅಷ್ಟೇ."

ಸದಾಶಿವ "ನಿಮಗೇಕೆ ಸುಮ್ಮನೆ ತೊಂದರೆ ಕೊಡಬೇಕು" ಎಂದು ಎಳೆದ ರಾಗವನ್ನೇ ಮತ್ತೆ ಎಳೆದ.

"ನೀವು ಹೀಗೆಲ್ಲ ತಿಳಿಯುವುದಾದರೆ ನನ್ನ ಮನಸ್ಸಿಗೆ ತುಂಬಾ ನೋವಾಗುತ್ತದೆ. ಆ ದಿನ ನಾನು ನಿಮ್ಮ ಮನೆಯಲ್ಲಿ ನೀವು ಊಟಕ್ಕೆ ಎಬ್ಬಿಸಿದ ಕೂಡಲೇ ಏಳಲಿಲ್ಲವೆ? ನಾವುಗಳು ಇಷ್ಟು ಅನ್ಯೋನ್ಯವಾಗಿದ್ದು ನೀವು ಇನ್ನೂ ದಾಕ್ಷಿಣ್ಯಪಟ್ಟುಕೊಳ್ಳುವುದನ್ನು ನೋಡಿದರೆ ನನಗೆ ತುಂಬಾ ವ್ಯಥೆಯಾಗುತ್ತದೆ."

ಇಷ್ಟೆಲ್ಲಾ ಒಕ್ಕಣೆಯಾದ ಮೇಲೆ ಬೇರೆ ನಿರ್ವಾಹವಿಲ್ಲದೆ ಸದಾಶಿವ ತನ್ನ ಊಟವನ್ನು ಲೀಲಾವತಿಯ ಮನೆಯಲ್ಲಿ ಮಾಡಲು ಒಪ್ಪಿಗೆ ಕೊಟ್ಟ.

"ಇವತ್ತು ರಾತ್ರಿಯಿಂದಲೇ ಅಟೆಂಡೆನ್ಸ್ ಕೊಡಬೇಕು" ಎಂದಳು ನಗುತ್ತಾ.

"ಎಸ್ ಮೇಡಂ" ಎಂದು ಸದಾಶಿವ ಮಾರುತ್ತರ ಕೊಟ್ಟ.

ರಾತ್ರಿ ವಿಶ್ವನಾಥರಾಯರು ತಮ್ಮ ಪದ್ಧತಿಯಂತೆ ಎಂಟು ಗಂಟೆಗೇ ಊಟಮಾಡಿದರೂ, ಲೀಲಾವತಿ ಮಾತ್ರ ಸದಾಶಿವ ಅಂಗಡಿ ಮುಚ್ಚಿ ಮನೆಗೆ ಬರುವ ತನಕ ಅವನಿಗಾಗಿ ಕಾದಿದ್ದಳು. ಅವಳೂ ಅವನೊಂದಿಗೇ ಊಟಕ್ಕೆ ಕುಳಿತಳು.

"ನೀವು ಏಕೆ ಇಲ್ಲಿಯ ತನಕ ಕಾಯಬೇಕಿತ್ತು?"

"ನಿಮ್ಮನ್ನು ಊಟಕ್ಕೆಂದು ಕರೆದು ನಾವು ಉಂಡು ಕೂತರೆ ಅದು ಮರ್ಯಾದೆಯೆ? ಇಷ್ಟಕ್ಕೂ ನನ್ನ ಊಟ ಸಾಮಾನ್ಯವಾಗಿ ಇಷ್ಟು ಹೊತ್ತಿಗೆ-"

ಊಟ ಮಾಡುವಾಗ ಲೀಲಾವತಿ ಸದಾಶಿವನಿಗೆ ತುಂಬಾ ಉಪಚರಿಸಿದಳು.

ಊಟವಾದ ಮೇಲೆ ಲೀಲಾವತಿ ಸಾಮಾನ್ಯವಾಗಿ ಬೀಡ ಹಾಕುವ ಅಭ್ಯಾಸವಿಲ್ಲದಿದ್ದರೂ—ಸದಾಶಿವನಿಗೆ ಊಟವಾದ ಮೇಲೆ ತಾಂಬೂಲದ ಅಭ್ಯಾಸವಿರುವುದನ್ನು ತಿಳಿದಿದ್ದ ಅವಳು ಸಂಜೆಯಲ್ಲೇ ಮಾರ್ಕೆಟ್ಟಿನಿಂದ ಸೊಗಸಾದ ಎಲೆಅಡಿಕೆಗಳನ್ನು ತರಿಸಿಕೊಂಡಿದ್ದಳು. ಇಷ್ಟರಲ್ಲಿಯೇ ಅವಳು ತೃಪ್ತಿಪಡದೆ, ಪೇಟೆಯಿಂದ ಸೊಗಸಾದ ಬಾದಾಮಿಮಾವಿನಹಣ್ಣು ತರಿಸಿದ್ದಳು. ಸಾಮಾನ್ಯವಾಗಿ ಊಟವಾದ ಮೇಲೆ ಯಾವುದಾದರೂ ಹಣ್ಣು ಹಂಪಲನ್ನು ತಿನ್ನುವ ಅಭ್ಯಾಸವಿಟ್ಟುಕೊಂಡಿದ್ದ ಸದಾಶಿವನಿಗಾಗಿ ಈ ಎಲ್ಲ ಏರ್ಪಾಡು ನಡೆದಿತ್ತು. ಇದನ್ನು ಕಂಡು ಸದಾಶಿವನಿಗೆ ಯಾಕೋ ಉಪಚಾರ ಅತಿಯಾಯಿತೆಂದು ಒಂದು ಬಗೆಯ ಸಂಕೋಚವಾಯಿತು.

ಹಣ್ಣು ತಿಂದ ಮೇಲೆ ಸದಾಶಿವ ಮನೆಗೆ ಹೊರಟು ನಿಂತಾಗ ಲೀಲಾವತಿ ಎಂದಳು.

"ಒನ್ ಮಿನಿಟ್ ಪ್ಲೀಸ್!"

"ಏಕೆ?"

"ಬೀಡಾ ಹಾಕಿಕೊಳ್ಳದೇ ಹೋಗುತ್ತೀರಾ?"

"ನೀವು ಸಾಮಾನ್ಯವಾಗಿ ಬೀಡಾ ಹಾಕಿಕೊಳ್ಳುವುದಿಲ್ಲವಲ್ಲ?—"

"ಆದರೆ ನೀವು ಅಭ್ಯಾಸಮಾಡಿಸಿದ್ದೀರಲ್ಲ!"

"ಎಂದು?"

"ಅಂದು!" ಲೀಲಾವತಿ ಮುಗುಳು ನಕ್ಕಳು.

ಲೀಲಾವತಿ ತಾನೆ ಶ್ರಮವಹಿಸಿಕಟ್ಟಿದ ಬೀಡವನ್ನು ತಂದು ತಟ್ಟೆಯಲ್ಲಿ ಸದಾಶಿವನಿಗೆ ಕೊಡುತ್ತಾ ಹೇಳಿದಳು:

"ನಿಮಗೆ ಹೀಗೆ ಕೊಟ್ಟರೆ ಬಹುಶಃ ಬೀಡ ರುಚಿಸುವುದಿಲ್ಲವೇನೋ?"

"ಹೀಗೆ ಕೊಡುವುದೆಂದರೆ?"

"ನಿಮ್ಮ ಸುಮಿತ್ರೆಯ ಕೈಯಿಂದ ಬಂದರೆ...."

"ಓ!" ಎಂದು ದೀರ್ಘವಾಗಿ ರಾಗ ತೆಗೆದನೇ ಹೊರತು ಬೇರೆ

ಏನೂ ನುಡಿಯಲಿಲ್ಲ. ಅವನಿಗೆ ಆ ಕ್ಷಣಕ್ಕೆ ಸುಮಿತ್ರೆಯ ನೆನಪಾಯಿತು. ಅವನು ಸುಮ್ಮನಾದುದನ್ನು ಕಂಡು ಲೀಲಾವತಿ ಹೇಳಿದಳು—

" ಬಹುಶಃ ನಿಮಗೆ ಸುಮಿತ್ರೆಯ ನೆನಪಾಗುತ್ತಿರಬೇಕು."

" ಅಂತಹದೇನೂ ಇಲ್ಲ. ಆದರೂ........"

" ನಿಮ್ಮ ಮನಸ್ಸಿನಲ್ಲಿರುವುದನ್ನು ನನಗೆ ಗೊತ್ತಿಲ್ಲವೆಂದು ತಿಳಿದಿದ್ದೀರಾ? ನೀವು ಸುಮಿತ್ರೆಯನ್ನು ಒಂದು ಕ್ಷಣ ಬಿಟ್ಟಿದ್ದವರಲ್ಲ. ಪಾಪ ಸುಮಿತ್ರೆ ಇಲ್ಲದೆ ನಿಮಗೆ ತುಂಬಾ ಬೇಜಾರಾಗಿದೆ ಅಲ್ಲವೆ?" ಕುತೂಹಲ ಪೂರ್ಣವಾಗಿ ನೋಡಿದಳು.

ಸದಾಶಿವ ಮಾತನಾಡದೆ ಮುಗುಳು ನಕ್ಕ.

ಈ ನಗುವಿನಿಂದ ಉತ್ತೇಜಿತಳಾಗಿ ಧೈರ್ಯವಾಗಿ ಕೇಳಿಯೇ ಬಿಟ್ಟಳು-

" ನಿಮಗೆ ಅಷ್ಟು ದೊಡ್ಡ ಮನೆಯಲ್ಲಿ ಒಂಟಿಯಾಗಿ ಮಲಗಿದರೆ ನಿದ್ರೆ ಹತ್ತುತ್ತದೆಯೆ?"

" ನನಗೆ ಅಂತಹ ಹೆದರಿಕೆ ಇಲ್ಲ!"

" ಹೆದರಿಕೆಯ ಪ್ರಶ್ನೆಯಲ್ಲ—ನಿಮಗೆ ಸುಮಿತ್ರೆ ಇಲ್ಲದೆ...." ಮುಂದೆ ಹೇಳಲು ಸಂಕೋಚವಾಯಿತು.

ಈ ಮಾತು ಕೇಳಿ ಸದಾಶಿವ ಹುಚ್ಚು ಹುಚ್ಚಾಗಿ ನಕ್ಕುಬಿಟ್ಟ.

" ನೀವು ಸಂಕೋಚಪಡದೆ ಇದ್ದರೆ ಹೇಳ್ತೇನೆ" ಎಂದಳು ಲೀಲಾವತಿ.

" ಏನು?"

" ನೀವು ಯಾಕೆ ನಮ್ಮ ಮನೆಯಲ್ಲಿಯೇ ಮಲಗಬಾರದು?"

ಈ ಮಾತಿಗೆ ಕೂಡಲೇ ಉತ್ತರ ಹೇಳಲಾರದೆ ಕ್ಷಣಕಾಲ ಯೋಚಿಸಿ ಹೇಳಿದ.

" ಹಾಗಾದರೆ ಇದು ನಿಮ್ಮ ಮನೆಯಲ್ಲವೆ?"

" ಹಾಗೆಂದರೆ?"

" ಊಟಕ್ಕೆ ನಮ್ಮ ಮನೆ; ಮಲಗುವುದಕ್ಕೆ ನಿಮ್ಮ ಮನೆ! ಇನ್ನೂ ನಾವು ಬೇರೆ ನೀವು ಬೇರೆ ಎನ್ನುವ ಭಾವನೆ ಬಿಟ್ಟಿಲ್ಲ?"

" ಓ ಹಾಗೋ. ನನ್ನ ಮಾತನ್ನು ಹಾಗೆ ಅರ್ಥಮಾಡಿಕೊಳ್ಳಬೇಡಿ.

ನನ್ನ ಬಟ್ಟೆ ಬರೆ ಅಲ್ಲಿದೆ ಎಂದು ಹಾಗೆ ಹೇಳಿದೆನೇ ಹೊರತು ಬೇರೆಯಲ್ಲ!"

"ಹಾಗೆಂದರೆ ನಮ್ಮ ಮನೆಯಲ್ಲಿ ಮಲಗಲು ಅನುಕೂಲವಿಲ್ಲವೆಂದು ನಿಮ್ಮ ಭಾವನೆಯೋ?"

"ಹಾಗಲ್ಲ. ನಾನು ಇಲ್ಲಿ ಮಲಗಲು ನನ್ನ ಅಭ್ಯಂತರವಿಲ್ಲ. ಆದರೂ ಮನೆಯನ್ನು ರಾತ್ರಿ ವೇಳೆ ಹಾಗೆಲ್ಲ ಖಾಲಿ ಬಿಡಬಾರದು."

"ಬೇಕಿದ್ದರೆ ಆಳನ್ನು ಅಲ್ಲಿ ಮಲಗಿಕೊಳ್ಳಲು ಕಳುಹಿಸುತ್ತೇನೆ."

"ಈಗ ಅಂತಹ ಪ್ರಸಂಗವೇನಿದೆ ಹೇಳಿ—ನಾನು ಹೋಗಿ ಅಲ್ಲೇ ಮಲಗುತ್ತೇನೆ—ಎಲ್ಲಿ ಮಲಗಿದರೆ ಏನು?"

"ನಾನು ಹೇಳುವುದೂ ಅದನ್ನೇ. ಅಲ್ಲಿ ಮಲಗುವ ಬದಲು ಇಲ್ಲೇ ಮಲಗಿ ಅಂತ."

"ನೀವು ಈ ವಿಷಯದಲ್ಲಿ ಯಾಕಿಷ್ಟು ಬಲವಂತಪಡಿಸುತ್ತೀರೋ ನಾನು ಕಾಣೆ! ನಿಮಗೆ ಈ ವಿಷಯಗಳ ಸೂಕ್ಷ್ಮ ಗೊತ್ತಾಗುವುದಿಲ್ಲ. ನಮ್ಮ ಮನೆ ಇರುವಾಗ ಇಲ್ಲಿ ಮಲಗುವುದು ಚೆನ್ನಾಗಿರುವುದಿಲ್ಲ."

"ಚೆನ್ನಾಗಿರುವುದಿಲ್ಲವೆಂದರೆ ಹೇಗೆ?"

"ಅದೇ ನಿಮಗೆ ಗೊತ್ತಾಗುವುದಿಲ್ಲವೆಂದದ್ದು. ನಾನು ಇಲ್ಲಿ ಮಲಗಿದರೆ ನೋಡಿದವರಿಗೆ ತಪ್ಪು ತಿಳಿಯಲು ಅವಕಾಶಕೊಟ್ಟಂತಾಗುತ್ತದೆ."

"ನೀವು ಇಲ್ಲಿ ಮಲಗಿದರೆ ಯಾರಿಗೆ ತಪ್ಪು ಅಭಿಪ್ರಾಯ ಕೊಟ್ಟಂತಾಗುತ್ತದೆ? ನನಗಂತೂ ನಿಮ್ಮ ಮಾತು ಅರ್ಥವಾಗುತ್ತಿಲ್ಲ. ನೀವು ಇಲ್ಲಿ ಮಲಗಿದರೆ ಯಾರು ನೋಡುತ್ತಾರೆ? ಏನು ತಿಳಿಯುತ್ತಾರೆ?"

ಈಗ ನಿರ್ವಾಹವಿಲ್ಲದೆ ಸದಾಶಿವ ಹೇಳಿದ.

"ನೀವು ಹರೆಯದ ಯುವತಿ. ಕಾರಣವಿಲ್ಲದೆ ನಾನು ನಿಮ್ಮ ಮನೆಯಲ್ಲಿ ಮಲಗಿದರೆ ನೋಡಿದ ಜನ ಅಂದರೆ—ನಿಮ್ಮ ಅಡಿಗೆಯವಳು, ಕೆಲಸದಾಳು ಇವರುಗಳು, ನಮ್ಮ ಬಗ್ಗೆ ತಪ್ಪು ತಿಳಿಯಲು ಅವಕಾಶವಿದೆ."

"ಏನು ತಪ್ಪು ತಿಳಿಯುತ್ತಾರೆ?"

"ನಮ್ಮಿಬ್ಬರ ಭಾವನೆ, ಸಂಬಂಧ ಎಷ್ಟು ಉದಾತ್ತವಾಗಿರಲಿ,

ಪವಿತ್ರವಾಗಿರಲಿ, ನೋಡುವವರ ದೃಷ್ಟಿಯಲ್ಲಿ ಇದು ಸಂಶಯಕ್ಕೆ ಎಡೆ ಗೊಡುತ್ತದೆ. ನಾನು ನಿಮ್ಮ ಮನೆಯಲ್ಲಿ, ಉಂಡಮನೆಗೆ ಕಲಂಕ ತರಲಾರೆ. ಆದುದರಿಂದ ಇಲ್ಲಿ ಮಲಗಲು ಸಾಧ್ಯವಿಲ್ಲ. ದಯವಿಟ್ಟು ಕ್ಷಮಿಸಿ." ಎಂದ ನಿಷ್ಠುರವಾಗಿ.

ಈ ಮಾತು ಕೇಳಿ ಲೀಲಾವತಿ ಗಹಗಹಿಸಿ ನಕ್ಕುಬಿಟ್ಟಳು. ಈ ನಗು ಸದಾಶಿವನನ್ನು ದಿಗ್ಭ್ರಮೆಗೊಳಿಸದೆ ಇರಲಿಲ್ಲ.

ಲೀಲಾವತಿ ಗಂಭೀರವಾಗಿ ಹೇಳಿದಳು.

"ನೀವು ಯಾಕೋ ಅಳುಕುಮನಸ್ಸಿನಿಂದ ಮಾತನಾಡುತ್ತಿದ್ದೀರಿ. ನಮ್ಮ ಮನೆಯಲ್ಲಿ ಮಲಗಿದರೆ ನನಗೆ ಅಪವಾದವೆ? ನಿಮಗೆ ಅಪವಾದವೆ? ಮನೆಯಲ್ಲಿ ನನ್ನ ವಿನಾ ಬೇರೆ ಯಾರೂ ಇಲ್ಲದಿದ್ದರೆ ನೀವು ಹೇಳುವ ಮಾತು ಸಮಂಜಸವೆನಿಸೀತು. ಆದರೆ ನಮ್ಮ ತಂದೆಯ ಜತೆಯಲ್ಲಿ ನಾನಿರುವಾಗ ನಿಮಗೆಲ್ಲಿಯ ಅಪವಾದ? ನೀವು ನಮ್ಮ ತಂದೆಯ ಕೋಣೆಯಲ್ಲಿ ಮಲಗಿದರೆ ಏನು ಅಡ್ಡಿ? ಇದರಲ್ಲಿ ಯಾರು ತಪ್ಪು ತಿಳಿಯುವರೆಂದು ನಿಮ್ಮ ಭಾವನೆ?"

ಈ ಮಾತಿನಿಂದ ಸದಾಶಿವ ಎಚ್ಚರಗೊಳ್ಳುವಂತೆ ಆಯಿತು. ಅವನೆಂದ "ನೀವು ಏನು ಹೇಳಿದರೂ ಈ ಕೆಲಸವನ್ನು ಮಾಡಲಾರೆ. ನೀವು ಹೀಗೆಲ್ಲ ಬಲವಂತ ಪಡಿಸುವುದಾದರೆ ನಾನು ನಿಮ್ಮ ಮನೆಗೆ ಊಟಕ್ಕೇ ಬರುವುದಿಲ್ಲ" ಎಂದು ಹುಸಿಮುನಿಸುಮಾಡಿದ—ಈ ಮಾತು ಕೇಳಿ—

"ಸದ್ಯ ಹಾಗೆಲ್ಲ ಮಾಡಬೇಡಿ ಮಹಾರಾಯರೇ. ನೀವು ಇಲ್ಲಿ ಮಲಗಿಕೊಳ್ಳದೆ ಹೋದರೂ ಚಿಂತೆ ಇಲ್ಲ. ಊಟಕ್ಕೆ ಚಕ್ಕರ್ ಕೊಡಬೇಡಿ" ಎನ್ನಲೇಬೇಕಾಯಿತು ಲೀಲಾವತಿ.

ಸದಾಶಿವ ಈ ಮಾತು ಕೇಳಿ ನಿಟ್ಟುಸಿರುಬಿಟ್ಟ ಸದ್ಯದ ಗಂಡಾಂತರದಿಂದ ಬಿಡುಗಡೆಯಾದೆನೆಂಬ ಹಿಗ್ಗಿನಿಂದ ಮನೆಗೆ ಹೊರಟ.

ಸದಾಶಿವ ಮನೆ ಸೇರಿ, ಹಾಸಿಗೆ ಬಿಚ್ಚಿ ಮಲಗಿದರೂ ಬಹಳ ಹೊತ್ತಿನ ತನಕ ಅವನಿಗೆ ನಿದ್ರೆ ಹತ್ತಲಿಲ್ಲ. ಅವನಿಗೆ ಯಾಕೋ ಲೀಲಾವತಿಯ ಆ ದಿನದ ವರ್ತನೆ ವಿಚಿತ್ರವಾಗಿ ಕಾಣಿಸಿತ್ತು. ಅವಳು ತನ್ನ

ಊಟ ತಿಂಡಿಗಳಲ್ಲಿ ತೆಗೆದುಕೊಂಡ ಆಸಕ್ತಿಯನ್ನು ಕಂಡು ಅವನು ಅಷ್ಟು ಹಚ್ಚಿಕೊಳ್ಳಲಿಲ್ಲ. ಆದರೆ ತನ್ನ ಮನೆಯಲ್ಲಿಯೇ ಮಲಗಲು ಲೀಲಾವತಿ ಎಳೆಯ ಮಗುವಿನಂತೆ ಹಠಮಾಡಿದ್ದಳು. ಅವಳ ಎಲ್ಲ ಮಾತಿನ ಹಿಂದೆ ಇದ್ದ ಅರ್ಥವೇನು ಎಂಬುದನ್ನು ತಿಳಿಯಲಾರದವನಾದ. ಲೀಲಾವತಿ ಸುಮಿತ್ರೆಯರು ಗೆಳತಿಯರಿರಬಹುದು. ಹೀಗೆಂದ ಮಾತ್ರಕ್ಕೆ ತನ್ನ ವಿಷಯ ದಲ್ಲಿ, ಸುಮಿತ್ರೆ ಇಲ್ಲದ ವೇಳೆಯಲ್ಲಿ ತನ್ನೊಡನೆ ಇಷ್ಟು ಸ್ವಚ್ಛಂದವಾಗಿ ವರ್ತಿಸುವುದರಲ್ಲಿ ಯಾವುದೋ ವಿಶೇಷ ಸಂಗತಿ ಅಡಗಿರಲೇ ಬೇಕು ಎಂದು ಲೀಲಾವತಿಯ ನಡತೆಯ ಬಗ್ಗೆ ಸಂಶಯ ತಾಳಿದ. ಕೆಲವು ದಿನ ಗಳಿಂದ ಲೀಲಾತಿಯ ಗಮನ ತನ್ನ ಕಡೆಗೆ ಇದೆ ಎಂಬುದು ಅಪ್ರಾಸಂಗಿಕ ವಾಗಿ ಅವನ ಗಮನಕ್ಕೆ ಬೀಳದೆ ಇರಲಿಲ್ಲ. ಆದರೆ ಅದನ್ನೆಲ್ಲ ಅವನು ಉಪೇಕ್ಷೆಮಾಡಿ, ಲೀಲಾವತಿಯ ನಡೆನುಡಿಯ ವಿಷಯದಲ್ಲಿ ಪೂಜ್ಯವೂ ಪವಿತ್ರವೂ ಆದ ಭಾವನೆ ಇಟ್ಟುಕೊಂಡಿದ್ದ. ಅವನೆಂದೂ ಅವಳ ಶೀಲದ ವಿಷಯದಲ್ಲಿ ಕಲಂಕ ದೃಷ್ಟಿಯಲ್ಲಿ ವಿಚಾರ ಮಾಡಿರಲಿಲ್ಲ. ಅವಳ ಬಗ್ಗೆ ತುಂಬಾ ಅಭಿಮಾನವಿತ್ತು. ಆದರೆ ಕೆಲವು ತಿಂಗಳುಗಳಿಂದ ಈಚೆಗೆ ಲೀಲಾವತಿಯ ಮನಸ್ಸಿನಲ್ಲಿ ಯಾವುದೋ ತಿಕ್ಕಾಟ ನಡೆಯುತ್ತಿದೆ ಎಂದು ಅವನ ಗಮನಕ್ಕೆ ಬೀಳದೆ ಇರಲಿಲ್ಲ. ಲೀಲಾವತಿ ಮೊದಲಿನ ಲೀಲಾವತಿ ಯಾಗಿರದೆ—ತನ್ನ ವಿಷಯದಲ್ಲಿ ವಿಶೇಷ ರೀತಿಯ ಆಸಕ್ತಿ ತೆಗೆದುಕೊಳ್ಳ ತೊಡಗಿರುವುದು ಅವನನ್ನು ವಿಚಾರಕ್ಕೆಡೆಮಾಡಿತ್ತು. ಇಂದು ಅವನ ಮನಸ್ಸಿನ ಎಲ್ಲ ಸಂಶಯ ಹೆಪ್ಪುಗೊಂಡಂತೆ ಲೀಲಾವತಿ ತನ್ನೊಡನೆ ಇಂದೇಕೆ ಹೀಗೆ ವರ್ತಿಸಿದಳು ಎನ್ನುವ ಪ್ರಶ್ನೆಯಲ್ಲಿ ಸಮುತ್ತರ ಹುಡುಕಲು ತೊಡ ಗಿತ್ತು. ಏನೇ ಆದರೂ ಲೀಲಾವತಿಯ ನಿರ್ಮಲ ಚಾರಿತ್ರ್ಯವನ್ನು ಶಂಕಿಸುವ ಧೈರ್ಯ ಸದಾಶಿವನಿಗೆ ಆಗಲಿಲ್ಲ. ಯಾಕೆಂದರೆ ಲೀಲಾವತಿ ಕಲಿತ ಹೆಣ್ಣು— ಅಲ್ಲದೆ ಜವಾಬ್ದಾರಿಯುಳ್ಳ ಮಹಿಳೆ. ಅವಳು ತನ್ನ ಜೀವನದ ಸರ್ವಸ್ವ ವೆನಿಸಿಕೊಂಡಿದ್ದ ಶೀಲದ ವಿಷಯದಲ್ಲಿ ಇಷ್ಟು ಹಗುರವಾಗಿ ವರ್ತಿಸುವ ಳೆಂಬುದು ಅವನ ಕಲ್ಪನೆಗೆ ಮೀರಿದ ವಿಷಯ. ಅವನು ಲೀಲಾವತಿಯ ಇಂದಿನ ವಿಶೇಷ ರೀತಿಯ ವರ್ತನೆಯಿಂದ ಯಾವ ಹೊಸ ವಿಷಯವನ್ನೂ

ಹೊರಡಿಸಲಾರದೆ ಸುಮ್ಮನೆ ಒದ್ದಾಡಿದ. ಇವರ ಗೊಂದಲದಲ್ಲಿ ಯಾವಾಗ ನಿದ್ರೆ ಹತ್ತಿತ್ತೋ ಅವನಿಗೆ ತಿಳಿಯಲಿಲ್ಲ. ಎಚ್ಚರವಾದಾಗ ಅವನು ಪ್ರತಿ ದಿನ ಏಳುವ ಹೊತ್ತೇ ಆಗಿತ್ತು.

ಸದಾಶಿವ ಎದ್ದವನೇ ಮುಖ ತೊಳೆದು, ನೀರು ಒಲೆ ಹೊತ್ತಿಸಿ ಕೆಲವು ಆಸನಗಳನ್ನು ಮಾಡಿ, ಅನಂತರ ಸ್ನಾನಮಾಡಿಕೊಂಡು ಕಾಫಿಗೆಂದು 'ಹೀಟರಿ'ನ ಮೇಲೆ ನೀರಿಟ್ಟು, ಪದ್ಧತಿಯಂತೆ ರಾಮನಾಮ ಬರೆಯುತ್ತ ಕುಳಿತುಕೊಂಡ. ಆಗ ಇನ್ನೂ ಸುಮಾರು ಏಳರ ಸಮಯ. ಈ ವೇಳೆಗಾಗಲೇ ಎಂದೂ ಏಳದಿದ್ದ ಲೀಲಾವತಿ ಎದ್ದು ಸ್ನಾನಮಾಡಿ, ಸದಾಶಿವ ತನ್ನ ಮನೆಯಲ್ಲಿ ಏನು ಮಾಡುತ್ತಿರುವನೋ ನೋಡಲು ಬಂದಳು. ಅವನು ಎದ್ದಿದ್ದರೆ ಅವನನ್ನು ಸ್ನಾನಕ್ಕೆ, ಕಾಫಿ ತಿಂಡಿಗೆ ತನ್ನ ಮನೆಗೆ ಕರೆದೊಯ್ಯುವುದೇ ಅವಳ ಉದ್ದೇಶವಾಗಿತ್ತು. ಆದರೆ ಬಂದು ನೋಡುತ್ತಾಳೆ. ಸದಾಶಿವ ತಾನು ಏಳುವ ಮೊದಲೇ ತನ್ನ ಕಾಫಿಗೆ ನೀರಿಟ್ಟು ಕುಳಿತಿದ್ದಾನೆ! ಅವಳಿಗೆ ಆಶ್ಚರ್ಯವೇ ಆಯಿತು. ಅವಳು ಒಂದೂ ಮಾತಿಲ್ಲದೆ ಬೆರಗಾಗಿ ನಿಂತುಕೊಂಡಳು. ಅವಳನ್ನು ಕಂಡ ಸದಾಶಿವನೆಂದ "ಇದೇನಿದು? ಇಷ್ಟು ಹೊತ್ತಿಗೆ.......ನೀವು ಇಲ್ಲಿ?"

ಅವನಿಗೆ ಹೊತ್ತು ಹುಟ್ಟುವ ಮೊದಲೇ ಲೀಲಾವತಿಯನ್ನು ತನ್ನ ಮನೆಯಲ್ಲಿ ಕಾಣುವಂತಾಗಿದ್ದುದು ತುಂಬಾ ಸೋಜಿಗದ ವಿಷಯ–ಲೀಲಾವತಿ ಇದುವರೆಗೆ ಸುಮಾರು ಒಂಭತ್ತು ಗಂಟೆಗೆ ಮೊದಲು ಎದ್ದವಳಲ್ಲ. ಇಂಥವಳು ಬೆಳಿಗ್ಗೆ ಎದ್ದು ತನ್ನ ಮನೆಯಲ್ಲಿ ಪ್ರತ್ಯಕ್ಷಳಾಗಿರುವುದು ಅವನಿಗೆ ಕೌತುಕದ ಸಂಗತಿಯಾಯಿತು.

"ನಿಮ್ಮನ್ನು ಸ್ನಾನಕ್ಕೆ ಮನೆಗೆ ಕರೆದುಕೊಂಡು ಹೋಗಲು ಬಂದೆ."

"ನನ್ನ ಸ್ನಾನ ಆಗಲೇ ಮುಗಿಯಿತು."

"ಹಾಗಾದರೆ ನೀವು ತಣ್ಣೀರು ಮಾಡಿದಿರಾ?"

"ಹಾಗೇನಿಲ್ಲ. ನಾನೇ ಒಂದು ನಾಲ್ಕು ಕೊಡ ನೀರು ಕಾಯಿಸಿಕೊಂಡೆ."

"ಹೋಗಲಿ. ಸ್ನಾನ ತೀರಿದ್ದರೆ ಕಾಫಿಗಾದರೂ ಬನ್ನಿ!"

" ಕಾಫಿಗೆ ನೀರು ಇಟ್ಟಿದ್ದಾಗಿದೆ--ನೀರು ಕುದಿಯುತ್ತಿದೆ. ಪುಡಿ ಹಾಕಿ ಸೋಸಿ ಕುಡಿಯುವುದೇ ಬಾಕಿ. "

" ನಿಮಗೆ ಯಾರು ಕಾಫಿ ಮಾಡಲು ಹೇಳಿದರು ? "

—ಎಂದಳು ಬೇಸರದ ದನಿಯಲ್ಲಿ.

" ನಾವು ನಿಮಗೋಸ್ಕರ ಕಾಫಿ ಮಾಡಿ ಕಾದಿದ್ದರೆ, ನೀವು ಇಲ್ಲಿ ಕಾಫಿಗೆ ನೀರಿಟ್ಟಿದ್ದೀರಿ. ಇದು ಯಾವ ನ್ಯಾಯ ? " ಎಂದು ಹುಸಿಮುನಿಸು ಮಾಡಿದಳು.

" ಶುದ್ಧ ಅನ್ಯಾಯ ? " ಎಂದ ಅದೇ ಧಾಟಿಯಲ್ಲಿ ಸದಾಶಿವ.

" ಹೌದೋ ಅಲ್ಲವೋ ನೀವೇ ಹೇಳಿ ? "

" ನಮ್ಮ ಮನೆಯಲ್ಲಿ ನಾವು ಕಾಫಿ ಮಾಡಿ ಕುಡಿಯುವುದು ನ್ಯಾಯವ್ರೋ ಅನ್ಯಾಯವೋ ನೀವೇ ಹೇಳಿ ? "

" ಮತ್ತೆ ನೀವು ನಮ್ಮ ಮನೆ—ನಿಮ್ಮ ಮನೆ ಎಂದು ಆರಂಭಿಸಿದಿರಿ."

" ಇಲ್ಲಿ ಮಹಾರಾಯಳೇ, ಇದು ನಿಮ್ಮ ಮನೆಯೇ ಅದೂ ನಿಮ್ಮ ಮನೆಯೇ " ಎಂದ ಕೊಂಕುದನಿಯಲ್ಲಿ.

" ಯು ಆರ್ ಇನ್‌ಸಲ್‌ಟಿಂಗ್ ಮಿ " ಎಂದಳು ಲೀಲಾವತಿ.

" ಯಾಕೆ ? "

" ನಾನು ಮನೆಯೊಡತಿ, ನೀವು ಬಾಡಿಗೆದಾರರೆಂದು ನಾನು ಎಂದಾದರೂ ಹೇಳಿದೆನೇ ? "

" ನಾನು ಎಲ್ಲಿ ಹಾಗೆ ಹೇಳಿದೆ ? "

" ಇನ್ನೇನು ! ಇದೂ ನಿಮ್ಮ ಮನೆಯೇ ಅದೂ ನಿಮ್ಮ ಮನೆಯೇ ಎಂದು ವ್ಯಂಗ್ಯವಾಗಿ ಹೇಳಿದಿರಲ್ಲ ! "

" ಓ ! ಹಾಗೋ. ಹಾಗೆಂದರೆ—ಇನ್ನೇನೂ ಅಲ್ಲ. ಇದೂ ನನ್ನ ಮನೆ ಅದೂ ನನ್ನ ಮನೆ ಎಂದು ಹೇಳುವ ಬದಲು ಹಾಗೆ ಹೇಳಿರಬೇಕು. ದಯವಿಟ್ಟು ಕ್ಷಮಿಸಿ. "

" ನಾನು ಕ್ಷಮಿಸುವುದಿಲ್ಲ. "

" ಕ್ಷಮಿಸದೆ ಹೋದರೆ ಹೋಗಲಿ ಬಿಡಿ. "

" ನಾನು ಬಿಡುವುದಿಲ್ಲ. "

" ಬಿಡದೆ ಹೋದರೆ ಕಟ್ಟಿಹಾಕಿಕೊಳ್ಳಿ ! "

" ನನ್ನ ಸೆರಗಿಗೆ ? "

ಈ ಮಾತು ಕೇಳಿ ಸದಾಶಿವನಿಗೆ ನಗು ತಡೆಹಿಡಿಯಲು ಆಗಲಿಲ್ಲ. ಅವನು ಖೊಳ್ ಎಂದು ನಕ್ಕುಬಿಟ್ಟ.

" ನೀವು ಆ ಕೆಲಸ ಮಾಡಿಬಿಡಿ. ನಮ್ಮ ಸುಮಿತ್ರ ನನ್ನನ್ನು ಜೀವ ಸಹಿತ ಬಿಡುವುದಿಲ್ಲ ! " ಎಂದು ನಗೆಯಾಡಿದ.

ಈ ವೇಳೆಗೆ ಅಡಿಗೆ ಮನೆಯಲ್ಲಿದ್ದ ಕಾಫಿನೀರು ಕುದಿಯಲು ಆರಂಭವಾಗಿತ್ತು. ಅದನ್ನು ಇಳಿಸಲು ಬರಿಗೈಯಲ್ಲಿ ಮುಟ್ಟಿದಾಗ ಹೀಟರ್‌ಗೂ ಪಾತ್ರೆಗೂ ಕಾಂಟಾಕ್ಟ್ ಇದ್ದುದರಿಂದ ಅವನು ಪಾತ್ರೆ ಮುಟ್ಟಿದ ಕೂಡಲೇ ಅವನಿಗೆ ಷಾಕ್ ಹೊಡೆಯಿತು. ಅವನು 'ಹಾಂ' ಎಂದುಕೊಂಡು ಕುದಿಯುವ ನೀರಿನ ಪಾತ್ರೆಯನ್ನು ನೆಲದ ಮೇಲೆ ಕೆಡವಿ ಬಿಟ್ಟ.

ಲೀಲಾವತಿ ಅಡಿಗೆ ಮನೆಗೆ ಧಾವಿಸಿ ಬಂದು

" ಏನಾಯಿತು ? " ಎಂದಳು.

" ಷಾಕ್ ಹೊಡೆಯಿತು. "

" ನನ್ನ ಮಾತು ಕೇಳದೆ ಕಾಫಿ ಪ್ರಯತ್ನ ಮಾಡಿದ್ದಕ್ಕೆ ಸರಿಯಾದ ಶಿಕ್ಷೆಯಾಯಿತು. ನಿಮಗೆ ಹಾಗೇ ಆಗಬೇಕು " ಎಂದು ಅವನನ್ನು ಅಣಕಿಸಿ ಹೇಳಿದಳು.

" ಅಲ್ಲ ಮಹಾರಾಯರೆ, ನೀವು ಎಲೆಕ್ಟ್ರಿಕಲ್ ಇಂಜಿನಿಯರ್ ಆಗಿದ್ದು, ಕುದಿಯುವ ನೀರು ಹೀಟರ್‌ನ ಕಾಯಿಲ್‌ಗೆ ಬಿದ್ದರೆ ಶಾರ್ಟ್ ಸರ್ಕ್ಯೂಟ್ ಆಗಿ ಷಾಕ್ ಹೊಡೆಯುತ್ತೆಂಬ ವಿಷಯ ತಿಳಿಯದೆ ಹೋಯಿತಲ್ಲ. ನೀವೆಂದಾದರೂ ಕಾಫಿ ಮಾಡಿದ್ದರಲ್ಲವೇ ಈ ಸಂಗತಿ ತಿಳಿಯುವುದು ? ಹೋಗಲಿ ಬನ್ನಿ ನಮ್ಮ ಮನೆಗೆ. ಕಾಫಿ ರೆಡಿಯಾಗಿದೆ " ಎಂದು ಅವನನ್ನು ಬಲವಂತವಾಗಿ ತನ್ನ ಮನೆಗೆ ಕರೆದೊಯ್ದಳು.

ಈ ವೇಳೆಗಾಗಲೇ ಎಚ್ಚರಗೊಂಡಿದ್ದ ವಿಶ್ವನಾಥರಾಯರು ಇಬ್ಬರನ್ನೂ

ಆದರದಲ್ಲಿ ಬರಮಾಡಿಕೊಂಡು ಅವರೊಂದಿಗೆ ತಾವೂ ಬೆಳಗಿನ ಕಾಫಿ ಕುಡಿಯುತ್ತಾ ಕುಳಿತರು. ಆಗ ಲೀಲಾವತಿ, ಸದಾಶಿವ ಕಾಫಿ ಮಾಡಲು ಹೋಗಿ ಹೇಗೆ ಷಾಕ್ ಹೊಡೆಸಿಕೊಂಡನೆಂಬ ಕಥೆಯನ್ನು ಹೇಳಿ ತಂದೆಯನ್ನು ನಗುಗಡಲಿನಲ್ಲಿ ಕೆಡವಿದಳು.

ಬೆಳಗಿನ ಉಪಾಹಾರ ಮುಗಿಸಿ ಮೇಲೇಳುತ್ತಿರುವಾಗ ವಿಶ್ವನಾಥ ರಾಯರು ಹೇಳಿದರು. "ನಿನ್ನೆ ಮಾಡಿದಂತೆ ಮಾಡಿಬಿಡಬೇಡಿ. ಇವತ್ತು ಊಟಕ್ಕೆ ಇಲ್ಲಿಗೇ ಬರಬೇಕು."

"ನಿಮ್ಮ ಮಗಳು ಆ ಹುಕುಂ ಅನ್ನು ಎಂದೋ ಜಾರಿಮಾಡಿದ್ದಾಳೆ."

ಈ ಮಾತು ಕೇಳಿ ವಿಶ್ವನಾಥರಾಯರು ಮುಗುಳು ನಕ್ಕರು.

ಮಧ್ಯಾಹ್ನ ಸದಾಶಿವ ಊಟದ ವೇಳೆಗಿಂತ ಮುಂಚೆಯೇ ಮನೆಗೆ ಬಂದ—ತನಗಾಗಿ ಅವರೇಕೆ ಕಾಯಬೇಕೆಂದು.

ಲೀಲಾವತಿ ಸದಾಶಿವನನ್ನು ನೋಡುತ್ತಲೇ 'ಯು ಆರ್ ಇನ್ ಟೈಮ್' ಎಂದೆನ್ನುತ್ತಾ ಸ್ವಾಗತಿಸಿದಳು.

"ನಿಮ್ಮ 'ಫಾದರ್'ದು ಊಟವಾಯಿತೇ?"

"ಅವರದು ಹತ್ತುಗಂಟೆಗೇ ಆಯಿತು. ತಲೆಯ ಮೇಲೆ ತಲೆಬಿದ್ದರೂ ಅವರಿಗೆ ಹತ್ತು ಗಂಟೆಗೆ ಊಟಮಾಡಿಬಿಡಬೇಕು—ಇಲ್ಲವೆ ಇದ್ದರೆ ಅವರಿಗೆ ಊಟಮಾಡಿದರೂ ಊಟ ಮಾಡಿದಂತೆ ಇರುವುದಿಲ್ಲ."

"ಹಾಗಾದರೆ ನಿಮ್ಮದು?"

"ನಿಮ್ಮ ಜತೆಗೇ ಕುಳಿತುಕೊಳ್ಳೋಣವೆಂದು ಮಾಡಲಿಲ್ಲ."

"ನನಗಾಗಿ ನೀವೇಕೆ ಕಾಯಬೇಕೋ ಕಾಣೆ!"

ಕೈಹಿಡಿದ ಹೆಂಡತಿ ಸುಮಿತ್ರೆ ತನಗಾಗಿ ಕಾಯುತ್ತಿದ್ದಂತೆ ತನಗೆ ಯಾವ ರೀತಿಯಲ್ಲಿಯೂ ಸಂಬಂಧಿಸದ ಲೀಲಾವತಿ ತಾನು ಬರುವ ತನಕ ಕಾಯುವುದು ಅವನಿಗೆ ಅಸಮಾಧಾನವೂ ಆಯಿತು, ಒಂದು ಬಗೆಯ ಸಂತೋಷವೂ ಆಯಿತು. ಇನ್ನೇಕೆ ಊಟಕ್ಕೆ ತಡವಾಗಬೇಕೆಂದು, ಸಂಕೋಚದಿಂದಲೇ ಊಟಕ್ಕೆ ಎದ್ದ. ಊಟ ಮುಗಿದ ಮೇಲೆ ಲೀಲಾವತಿ ಹೇಳಿದರು.

"ಇಲ್ಲೇ ಕೊಂಚ ವಿಶ್ರಾಂತಿ ತೆಗೆದುಕೊಂಡು ಹೋಗಬಾರದೆ?"

ಸದಾಶಿವ ಸೂತ್ರದ ಬೊಂಬೆಯಂತೆ ಮರುಮಾತನಾಡದೆ ಅಲ್ಲೇ ಇದ್ದ ಈಸಿ ಛೇರಿನ ಮೇಲೆ ಕುಳಿತುಕೊಂಡ. ಅವನಿಗೂ ಒಂದು ಉಸಿರಾಡುವ ಪ್ರಾಣಿ ಇರದ ಖಾಲಿ ಮನೆಗೆ ಹೋಗಿ ಮಾಡಬೇಕಾದ್ದೇನು? ಎನ್ನುವ ಆಲೋಚನೆ ಇದ್ದುದರಿಂದ ಲೀಲಾವತಿ ಹೇಳಿದಂತೆ ಮಾಡಿದ್ದ.

ಲೀಲಾವತಿ ಬೀಡ ಕಟ್ಟಕೊಡುತ್ತ, ನಾಚುತ್ತಾ ಹೇಳಿದಳು.

"ನೀವೇನೂ ತಿಳಿಯದಿದ್ದರೆ—ನನ್ನದೊಂದು ಮಾತು...."

"ಯಾವ ಮಾತು?"

"ಇಂದು ನಾನೇಕೆ ನಿಮ್ಮ ಬಾಯಿಗೆ ಬೀಡ ಹಾಕಬಾರದು?"

ಈ ಮಾತು ಕೇಳಿ ಸದಾಶಿವನಿಗೆ ಮೈಯಲ್ಲಿ ಏಕೋ ಬೆವರಿತು. ಬೆವರಿದ ಅವನ ಮುಖ ಕಂಡು ಲೀಲಾವತಿ ಹೇಳಿದಳು.

"ಯಾಕೆ ಬೆವರು? ಬಿಸಿ ಊಟವೆಂದೆ?"

ಸದಾಶಿವನಿಗೆ ಈಗ ನಿಜಕ್ಕೂ ನಾಚಿಗೆಯಾಯಿತು. ಅವನು ಟವಲಿನಿಂದ ಮುಖ ವರೆಸಿಕೊಂಡ.

ಲೀಲಾವತಿಯ ಬೀಡಾ ಕಟ್ಟುವುದು ಮುಗಿದು ಬಂದಾಗ ಸದಾಶಿವ ಹೇಳಿದ:

"ಇಲ್ಲಿ ಕೊಡಿ, ನಾನೇ ಹಾಕಿಕೊಳ್ಳುತ್ತೇನೆ."

"ನಾನು ನಿಮ್ಮ ಬಾಯಿಗೆ ಕೊಟ್ಟರೆ ಇದರಲ್ಲಿ ಏನು ತಪ್ಪು? ಇದು ಕೇವಲ ನಿಮ್ಮ ಸುಪ್ರಿಯ ಹಕ್ಕೆ?" ಎಂದಳು ನಗುತ್ತ.

ಸದಾಶಿವನೂ ಈ ಮಾತು ಕೇಳಿ ಹುಚ್ಚುಹುಚ್ಚಾಗಿ ನಕ್ಕುಬಿಟ್ಟ.

"ಅವನ್ನಿಲ್ಲಿ ಕೊಡಿ, ನಾನೇ ಹಾಕಿಕೊಳ್ಳುತ್ತೇನೆ."

"ಉಹೂಂ........ನಾನೇ ಬಾಯಿಗೆ ಹಾಕಬೇಕು."

ಕೇವಲ ತಮಾಷೆಗೆ ಲೀಲಾವತಿ ಹೀಗೆ ಅನ್ನುತ್ತಿರಬಹುದೆಂದು ತಿಳಿದಿದ್ದ ಸದಾಶಿವನಿಗೆ ಈಗ ಏನು ಮಾಡಲೂ ತೋಚದೆ ಹೋಯಿತು. ಅವನು ದಿಗ್ಭ್ರಮೆಗೊಂಡು ಕುಳಿತಿರುವಾಗಲೇ ಲೀಲಾವತಿ ಅವನ ಸಮೀಪಕ್ಕೆ ಬಂದು ಅವನ ಬಾಯಿಗೆ ಬೀಡವನ್ನು ತುರುಕಿಯೇ ಬಿಟ್ಟಳು. ಆಗ

ಸದಾಶಿವ ನಿರ್ವಾಹವಿಲ್ಲದೆ ಅದನ್ನು ಅಗಿದು ನುಂಗಬೇಕಾಯಿತು. ಅವನು ಅಗಿಯುವುದನ್ನೇ ನೋಡುತ್ತಿದ್ದ ಲೀಲಾವತಿ ಉನ್ಮತ್ತ ನೋಟದಲ್ಲಿ ಅವನನ್ನೇ ನೋಡುತ್ತಾ ಹೇಳಿದಳು.

"ನೀವು ತುಂಬಾ ಒಳ್ಳೆಯವರು."

"ಏಕೆ?"

"ನಿಮಗೆ ನಿಮ್ಮ ಮಾತೇ ಗೆಲ್ಲಬೇಕೆಂಬ ಹಠವಿಲ್ಲ."

"ನಿಮ್ಮೊಂದಿಗೆ ಹಠಮಾಡಿ ಗೆಲ್ಲುವವರು ಯಾರು?"

ಸದಾಶಿವ ತನಗೆ ತಿಳಿಯದಂತೆ ಮಾತನಾಡಿದ.

"ಈ ಬಿರುದಿಗೆ ನಾನು ಅರ್ಹಳಲ್ಲ!"

"ಏಕೆ?"

"ಇನ್ನೂ ನೀವು ಗೆದ್ದಿಲ್ಲವಲ್ಲ!"

ಯಾವ ವಿಷಯದಲ್ಲಿ ಎಂದು ಸದಾಶಿವ ಹೇಳಲಿಲ್ಲ; ಲೀಲಾವತಿಯೂ ಹೇಳಲಿಲ್ಲ.

"ನನಗೆ ನಿದ್ರೆ ಬರುತ್ತಿದೆ, ಮನೆಗೆ ಹೋಗಬೇಕು"ಎಂದು ಗೊಣಗುಟ್ಟಿಕೊಳ್ಳುತ್ತಾ ಸದಾಶಿವ ಎದ್ದಾಗ ಲೀಲಾವತಿ ಅಲ್ಲೇ ಮಲಗಿಕೊಳ್ಳಲು ಬಲವಂತ ಮಾಡಿದಳು. ಮಲಗಿಕೊಳ್ಳುವ ವಿಷಯದಲ್ಲಿ ಬಲವಂತ ಪಡಿಸಿದರೆ ತಾನು ಊಟಕ್ಕೇ ಬರುವುದಿಲ್ಲವೆಂದು ಹೆದರಿಸಿದಾಗ, ಲೀಲಾವತಿ ಸುಮ್ಮನಾದಳು.

ಸದಾಶಿವನ ಸಂಶಯ ನಿಜವಾಯಿತು. ತನ್ನ ವಿಷಯದಲ್ಲಿ ಏಕಿಷ್ಟು ಅಕ್ಕರಾಸ್ಥೆ ವಹಿಸಿರುವಳೆಂಬ ವಿಷಯ, ಅವಳ ವಿಷಯ ವಾಸನೆಯಿಂದ ಎಂದು ತಿಳಿದುಹೋಯಿತು. ಅವಳು ಯಾವುದೋ ತನ್ನ ಅತೃಪ್ತ ಬಯಕೆಯನ್ನು ಈಡೇರಿಸಿಕೊಳ್ಳುವ ಸಲುವಾಗಿ ಮೋಹದ ಬಲೆಯಲ್ಲಿ ತನ್ನನ್ನು ಮೆಲ್ಲಮೆಲ್ಲನೆ ಸೆರೆಹಿಡಿಯಬೆತ್ನಿಸುತ್ತಿರುವುದಾಗಿ ಭಾಸವಾಗಿದ್ದ ಸಂಗತಿ ಈಗ ಸದೃಢವಾಯಿತು. ಈ ವಿಷಕನ್ಯೆಯ ಬಲೆಗೆ ಏನು ಮಾಡಿದರೂ ತಾನು ಬೀಳಬಾರದೆಂದು ಸದಾಶಿವ ನಿಶ್ಚಯಿಸಿಕೊಂಡ. ತನ್ನ ಮಡದಿಯ ಸಂಗಾತಿಯೂ, ತನಗೆ ಸೋದರಿಯಂತೆಯೂ ಇದ್ದ ಲೀಲಾವತಿಯ

ವಿಷಯದಲ್ಲಿ ಒಮ್ಮೆಲೇ ಈ ಬಗೆಯ ತೀರ್ಮಾನಕ್ಕೆ ಬರಲು ಅವನಿಂದ ಇದು ವರೆಗೆ ಸಾಧ್ಯವಾಗದೇ ಇದ್ದರೂ, ಇಂದಿನ ಅವಳ ಮಾತು, ಭಾವಭಂಗಿ ಇವು ಗಳು ಅವಳ ಹೃದಯದ ಪಡಿನೆರಳಿನಂತೆ ಇದ್ದುವು. ತುಂಬು ಯೌವನದ ಯುವತಿಯೋರ್ವಳು ತನ್ನಂಥವನೊಂದಿಗೆ, ಬಾಯಿಗೆ ಬೀಡ ಹಾಕಬೇಕೆ ನ್ನುವ ಸಲಿಗೆ ವ್ಯಕ್ತಪಡಿಸಿದ ಮೇಲೆ ಅವಳ ಮನಸ್ಸು ಖಂಡಿತವಾಗಿಯೂ ದುರಾಲೋಚನೆಗಳ ಹುತ್ತವಾಗಿರಬೇಕೆಂದುಕೊಂಡ. ಏನೇ ಇರಲಿ, ತಾನು ಸುಮಿತ್ರೆ ಇಲ್ಲದ ವೇಳೆಯಲ್ಲಿ ಅವಳಿಗೆ ಪ್ರೋತ್ಸವೆಸಗಬಾರದು. ತನ್ನ ಆತ್ಮಸಂಯಮವನ್ನು ಕಳೆದುಕೊಳ್ಳಬಾರದು. ಸುಮಿತ್ರೆಯ ಬಗ್ಗೆ ತನಗೆ ಇರುವ ಪ್ರೇಮದ ವಿಷಮ ಪರೀಕ್ಷೆ ಈ ಘಟ್ಟ. ಇದರಲ್ಲಿ ತಾನೆಂದಿಗೂ ಸೋಲಬಾರದೆಂದುಕೊಂಡ. ಸಾಧ್ಯವಾದರೆ ಲೀಲಾವತಿಗೆ ತಾನು ಎಂಥವ ನೆಂದು ತೋರಿಸಿಕೊಡಬೇಕು. ಪ್ರಣಯೋನ್ಮತ್ತೆಯಾದ ಅವಳಿಗೆ ಬುದ್ಧಿ ಹೇಳಿ, ಅವಳಲ್ಲಿ ವಿವೇಕೋದಯವುಂಟುಮಾಡಬೇಕು. ಅವಳ ಮನೆ ಯಲ್ಲಿ ತಾನು ಎರಡು ದಿನಗಳಿಂದ ಹೊತ್ತ ಅನ್ನದ ಋಣಕ್ಕೆ ಇದೇ ಸರಿ ಯಾದ ಪ್ರತಿಋಣ....ಇದೇ ಬಗೆಯ ಹಗಲುಗನಸುಗಳಲ್ಲಿ ಹಗಲು ಸರಿದು ರಾತ್ರಿಯಾಯಿತು.

ಇಂದು ಕಾರಣಾಂತರಗಳಿಂದ ಅಂಗಡಿಯನ್ನು ಬಿಟ್ಟು ಬರಲು ಕೊಂಚ ವೇಳೆಯಾಯಿತು. ಬರುತ್ತ ದಾರಿಯ ಹೋಟಲಿನಲ್ಲಿ ಊಟಮಾಡಿ ಕೊಂಡು ಹೋಗುವ ಆಸೆಯಾಯಿತು. ಆದರೆ ಮನೆಯಲ್ಲಿ ಲೀಲಾವತಿ ತನಗಾಗಿ ಕಾಯುತ್ತ ಕುಳಿತಿರುವಳೆಂಬ ವಿಷಯ ನೆನಪಾಗಿ, ಹೋಟಲಿನ ಪಾವಟಿಗೆಗಳ ತನಕ ಹೋಗಿದ್ದ ಕಾಲನ್ನು ಹಿಂದಕ್ಕೆ ಎಳೆದುಕೊಂಡು ಮನೆಗೆ ಬಂದ. ಮನೆಯಲ್ಲಿ ಪ್ರೀತಿಪೂರ್ವಕವಾದ ಸ್ವಾಗತ ಆತಿಥ್ಯವೇ ನಡೆದುವು. ಸದಾಶಿವ ಮಧ್ಯಾಹ್ನ ನಿಶ್ಚಯಿಸಿಕೊಂಡಿದ್ದಂತೆ ಲೀಲಾವತಿಯೊಂದಿಗೆ ಹೆಚ್ಚಿನ ಮಾತಿಗೆ ಅವಕಾಶ ಕೊಡದೆ ಗಂಭೀರವಾಗಿಯೇ ಊಟಮಾಡಿ, ಕೈತೊಳೆದು ತನ್ನ ಮನೆಗೆ ಹೊರಟುಹೋದ. ಲೀಲಾವತಿ ಅವನಿಗಾಗಿ ಅಣಿಮಾಡಿಟ್ಟ ಬೀಡವನ್ನು ತೆಗೆದುಕೊಳ್ಳುವಷ್ಟು ವ್ಯವಧಾನ ಅವನಲ್ಲಿ ಉಳಿ ದಿರಲಿಲ್ಲ. ಅವನ ಇಂದಿನ ವರ್ತನೆಯಿಂದ ಲೀಲಾವತಿಗೆ ಕೊಂಚ ನಿರು

ತ್ಸಾಹವಾಯಿತು. ಆದರೆ ಅವಳು ಅದರಿಂದ ಎಚ್ಚೆತ್ತುಕೊಳ್ಳಲಾಗದೆ ತಿಳಿಗೇಡಿ ಕಾಮದಗ್ಧ ಯುವತಿಯಾಗಿದ್ದಳು. ಅವಳು ಸದಾಶಿವನು ತನ್ನ ಮನೆಯಿಂದ ಕೋಪಮಾಡಿಕೊಂಡವನೆಂಬಂತೆ ಹೊರಟುಹೋದ ಮೇಲೆ ಒಂದು ಗಂಟೆಯ ತನಕ ಏನು ಮಾಡಬೇಕೆಂದು ತೋಚದೆ ಅಶಾಂತಿಗೊಂಡು ಹಾಸಿಗೆಯಲ್ಲಿ ಹೊರಳಿದಳು. ಕಡೆಗೆ ಅದೇನು ನಿಶ್ಚಯಿಸಿದಳೋ ಅವಳು ಹಾಸಿಗೆಯಿಂದ ಎದ್ದು ಕನ್ನಡಿಯ ಮುಂದೆ ನಿಂತು ತನ್ನ ರೂಪವನ್ನೇ ಕ್ಷಣಕಾಲ ನೋಡಿಕೊಂಡಳು. ಅವಳಿಗೆ ತನ್ನ ರೂಪದ ಬಗ್ಗೆ ಒಂದು ಬಗೆಯ ಹೆಮ್ಮೆಯುಂಟಾಯಿತು. ಕೂಡಲೇ ತಲೆಗೂದಲನ್ನು ಬಾಚಿಕೊಂಡಳು. ಮುಖಕ್ಕೆ ಪೌಡರು ಹಚ್ಚಿ, ಸಣ್ಣನೆ ತಿಲಕವಿಟ್ಟುಕೊಂಡಳು. ಉಟ್ಟಿದ್ದ ಸೀರೆಯನ್ನು ಕಳಚಿ ತುಂಬಾ ಹಗುರಾದ, ಪಾರದರ್ಶಕವಾದ ರೇಷ್ಮೆಯ ಸೀರೆಯೊಂದನ್ನು ಉಟ್ಟಳು. ಅದಕ್ಕೆ ಸರಿಹೋಲುವ ಕುಪ್ಪಸ ತೊಟ್ಟು, ಮಾಟವಾದ ತನ್ನ ಮೈಯನ್ನು ಕ್ಷಣಕಾಲ ನೋಡಿ ಆನಂದಿಸಿದಳು. ಅನಂತರ ತಂದೆ ಮಲಗಿಕೊಂಡಿರುವ ಸಂಗತಿಯನ್ನು ಖಚಿತಪಡಿಸಿಕೊಂಡು ಕೈಯಲ್ಲಿ ವೀಳ್ಯವನ್ನು ಅಣಿಗೊಳಿಸಿಕೊಂಡು ಸದಾಶಿವನ ಮನೆಗೆ ಹೊರಟಳು. ಅವಳು ಹೊರಟ ರೀತಿಯನ್ನು ನೋಡಿದರೆ ದಿಗ್ವಿಜಯಕ್ಕೆ ಹೊರಟ ಮದನಿಕೆಯಂತೆ ಇದ್ದಳು. ನಿಜಕ್ಕೂ ಆ ಕ್ಷಣದಲ್ಲಿ ಅವಳೊಬ್ಬಳು ಕಾಮದಗ್ಧ ಯೋಧೆ. ಅವಳ ಅಸ್ತ್ರಗಳೆಂದರೆ ರೂಪ, ಯೌವನ, ವಿದ್ಯೆ. ಈ ಮೂಲಕ ಸದಾಶಿವನ ಸಂಯಮದ ಕೋಟೆಯನ್ನು ಭೇದಿಸಿ, ಅವನ ಪೌರುಷವನ್ನು ಸೂರೆಗೊಳ್ಳಬೇಕೆಂಬುದೇ ಅವಳ ಜೈತ್ರಯಾತ್ರೆಯ ಮಹೋದ್ದೇಶ. ಇವರಲ್ಲಿ ಜಯ ಪಡೆಯಲು ಕುಸುಮಶರನ ಧ್ಯಾನಮಾಡುತ್ತಾ ನಡೆದಳು.

ಇತ್ತ ಮನೆಯಲ್ಲಿ ಸದಾಶಿವ ಹಾಸಿಗೆಯಲ್ಲಿ ಹುಚ್ಚನಂತೆ ಹೊರಳುತ್ತಿದ್ದ. ಅವನಿಗೆ ತನ್ನನ್ನು ಪ್ರೀತಿಯಿಂದ ಮಾತನಾಡಿಸಿ, ಊಟ ಹಾಕಿ ಉಪಚರಿಸಿದ ಲೀಲಾವತಿಯೊಂದಿಗೆ ತುಂಬಾ ವ್ಯಥೆಯಾಗಿತ್ತು. ಹಾಗೆ ತಾನು ವರ್ತಿಸದೆ ಇದ್ದರೆ ತನಗೆ ಉಳಿಗಾಲವಿರುತ್ತಿರಲಿಲ್ಲವೆಂಬ ಸಮಾಧಾನ ಮಾಡಿಕೊಂಡರೂ ಲೀಲಾವತಿಯಂತಹ ಕೋಮಲೆಯ ಮನಸ್ಸು ನೋಯಿಸುವಂತಾದುದಕ್ಕಾಗಿ ಅವನಿಗೆ ಒಂದು ಬಗೆಯ ನೋವುಂಟಾಗಿತ್ತು. ತಾನು

ಮಾಡಿದುದು ಸರಿಯೇ? ತಪ್ಪೇ? ಎಂಬುವನ್ನೂ, ತನ್ನ ಗಂಭೀರ ವರ್ತನೆ ಯಿಂದ ಲೀಲಾವತಿಯ ಮೇಲೆ ಆಗಿರಬಹುದಾದ ಪರಿಣಾಮವನ್ನೂ ಊಹಿಸಿ ಕೊಳ್ಳುತ್ತಾ ಹಾಸಿಗೆಯಲ್ಲಿ ಹೊರಳುತ್ತಿರುವಾಗ ಬೀದಿಯ ಬಾಗಿಲ ಬಳಿ ಸಪ್ಪಳಾಯಿತು. ಯಾರೆಂದು ನೋಡಲು ಉಟ್ಟ ಬಟ್ಟೆಯಲ್ಲಿಯೇ ಸದಾಶಿವ ಹೊರಟುಬಂದ. ಕತ್ತಲೆಯಲ್ಲಿ ಮುಸುಕಿಟ್ಟು ಬಂದಿದ್ದ ಲೀಲಾವತಿ ತಟ್ಟನೆ ಗುರುತು ಸಿಕ್ಕಲಿಲ್ಲ. ಸುಮಿತ್ರೆಯನ್ನು ಹುಡುಕಿಕೊಂಡು ಬಂದ ರೋಗಿಗಳು ಯಾರೋ ಇರಬೇಕು-ಎಂದುಕೊಳ್ಳುತ್ತಾ ಬಾಗಿಲು ತೆರೆದರೆ-ಎದುರಿಗೆ ಸರ್ವಾಲಂಕಾರದಿಂದ ಮೋಹಿನಿಯಂತೆ ಕಾಣುತ್ತಿದ್ದ ಲೀಲಾವತಿ! ಸದಾಶಿವನಿಗೆ ತನ್ನ ಮನೆಗೆ ಈ ಸರಿರಾತ್ರಿಯಲ್ಲಿ ಬಂದ ಲೀಲಾವತಿಯನ್ನು ನೋಡಿ ದಿಗ್ಭ್ರಮೆಯಾಯಿತು. ಒಂದು ಬಗೆಯ ಹೆದರಿಕೆಯೂ ಆಯಿತು. ಅವನು ಬೆರಗಾಗಿ ನಿಂತುದನ್ನು ಕಂಡು ಲೀಲಾವತಿಯೇ ಬಾಗಿಲು ಮುಚ್ಚಿ ಬಂದಳು.

ಪ್ರಾಯದ ಗಂಡಾದ ತನ್ನನ್ನು ನೋಡಬೇಕೆಂದು ಅಪರಾತ್ರಿಯಲ್ಲಿ ಬಂದ ಯುವತಿಯ ರಾಜಕಾರ್ಯವೆಂತಹುದೆಂಬುದನ್ನು ಸದಾಶಿವ ಊಹಿಸಿ ಕೊಂಡ. ಅವನಿಗೆ ಲೀಲಾವತಿಯನ್ನು ಅಲ್ಲಿಂದಲೇ ಮಾತನಾಡಿ ಕಳುಹಿಸಿ ಬಿಡುವ ಆಸೆಯಾಯಿತು.

"ಏಕೆ ಬಂದಿರಿ? ಏನು ಬಂದಿರಿ?"

"ಇದೇನು? ಬಂದ ಅತಿಥಿಗಳನ್ನು ಒಳಗೆ ಬನ್ನಿ, ಕುಳಿತುಕೊಳ್ಳಿ ಎಂದು ಹೇಳದೆ—ಬಾಗಿಲಲ್ಲಿಯೇ ನಿಂತು ಮಾತನಾಡಿಸಿ ಕಳುಹಿಸುವ ಹಂಚಿಕೆಯಲ್ಲಿದ್ದೀರಲ್ಲ!" ಎಂದಳು. ಆಗ ಸದಾಶಿವ ಅನ್ಯಮನಸ್ಕನಾಗಿ

"ಕುಳಿತುಕೊಳ್ಳಿ" ಎಂದು ಆಸನ ತೋರಿಸಿದ.

"ಇಲ್ಲಿ ಬೇಡ. ಅಲ್ಲಿ ಬನ್ನಿ" ಎಂದು ಸದಾಶಿವನ ಕೋಣೆಗೆ ನಡೆದಳು. ಸದಾಶಿವ ಮಂತ್ರ ಮುಗ್ಧ ಹಾವಿನಂತೆ ಅವಳನ್ನು ಅನುಸರಿಸಿ ನಡೆದ. ಲೀಲಾವತಿ ಅಲ್ಲಿದ್ದ ಕುರ್ಚಿಯ ಮೇಲೆ ಕುಳಿತಳು....ಸದಾಶಿವ ಅವಳಿಗೆ ದೂರವಾಗಿ, ಮಂಚದ ಮೇಲೆ ಕುಳಿತುಕೊಂಡು ಲೀಲಾವತಿಯನ್ನು ತೀಕ್ಷ್ಣವಾಗಿ ನೋಡಿದ.

" ಯಾಕೆ ಹಾಗೆ ನೋಡುತ್ತೀರಿ ? "

" ನೀವೇಕೆ ಹಾಗೆ ನೋಡುತ್ತೀರಿ ? "

" ಹೇಗೆ ನೋಡುತ್ತೇನೆ ? "

" ನನ್ನನ್ನು ತಿಂದು ಬಿಡಲೆಂಬಂತೆ ನೋಡುತ್ತಿರುವಿರಿ ?"

" ನೀವು ಹೇಳಿದ ಮಾತು ಅಕ್ಷರಶಃ ಸತ್ಯ. "

" ಹಾಗಾದರೆ ನೀವು ಬಂದ ಕಾರ್ಯ ಇದಕ್ಕಾಗಿ ತಾನೆ ? "

ಈ ಮಾತು ಕೇಳಿ ಲೀಲಾವತಿ ಉನ್ಮತ್ತಳಾಗಿ ನೋಡಿದಳು. ಅವಳ ಕಣ್ಣುಗಳಲ್ಲಿ ಮಾದಕತೆಯಿತ್ತು, ದೈನ್ಯತೆಯಿತ್ತು, ಕಾತರವಿತ್ತು, ಎಲ್ಲಕ್ಕೂ ಹೆಚ್ಚಾಗಿ ಹಸಿವಿತ್ತು.

ಸದಾಶಿವ ಏನೋ ಹೇಳಲು ಯತ್ನಿಸಿ—

" ಲೀಲಾವತೀ—" ಎಂದ.

" ನನ್ನನ್ನು ಹಾಗೆ ಕರೆಯಬೇಡಿ. ಲೀಲಾ ಎನ್ನಿ ! ಲೀಲೂ ಎನ್ನಿ !

" ಲೀಲಾವತಿ ನೀವಿಷ್ಟು........ಹೀಗೆ........"

" ನಾನು ಲೀಲಾವತಿಯಲ್ಲ. ನಿಮ್ಮ ಲೀಲ........ನಿಮ್ಮ ಲೀಲು. ನನ್ನನ್ನು ಬಹುವಚನದಲ್ಲಿ ಕರೆಯಬೇಡಿ. " ಎಂದು ಅಂಗಲಾಚುವಂತೆ ದೈನ್ಯವಾಗಿ ಹೇಳಿದಳು.

" ಹೋಗಲಿ. ನೀವು ಬಂದದ್ದು ? "

" ಅದನ್ನು ನಾನೇ ಬಾಯಿಬಿಟ್ಟು ಹೇಳಬೇಕೆ ? ನನ್ನನ್ನು ನೋಡಿದರೆ ನಾನು ಬಂದದ್ದು ಏಕೆಂದು ತಿಳಿಯುವುದಿಲ್ಲವೆ ? " ಎಂದು ನಕ್ಕಳು.

" ತಿಳಿಯಲಿಲ್ಲ " ಎಂದ ಸದಾಶಿವ ವಿಷಯವೇನೆಂದು ಅರಿತಿದ್ದರೂ ಕೂಡ.

" ಏಕೆ ತಿಳಿಯಲಿಲ್ಲ? ನಿಮ್ಮ ಕಣ್ಣಿಗೆ ನನ್ನ ರೂಪ, ಯೌವನ, ಸಿಂಗಾರ ಎಲ್ಲವೂ ಬೀಳದೆ ಹೋಯಿತೆ ? " ಈ ಅಪರಾತ್ರಿಯಲ್ಲಿ ಇದನ್ನು ಯಾರಿಗಾಗಿ ಮಾಡಿಕೊಂಡಿರುವೆನೆಂದು ತಿಳಿದಿರುವಿರಿ ?

" ನಿಮ್ಮ ರೂಪ, ಯೌವನಗಳನ್ನು ಕಣ್ಣುಬಿಟ್ಟು ನೋಡುವ ಸ್ಥಿತಿಯಲ್ಲಿ ನಾನಿಲ್ಲ."

“ ಏಕೆ? ನೀವು ಕಣ್ಣಿರುವ ಕುರುಡರೇ ? ”

“ ನೀವು ಹೇಗೆ ಬೇಕಾದರೂ ತಿಳಿಯಿರಿ, ನಿಮ್ಮ ಈ ಬಗೆಯ ವರ್ತನೆಗೆ ನಾನು ಪ್ರೋತ್ಸಾಹ, ಪುಷ್ಟಿಕೊಡಲಾರೆ.”

“ ಏಕೆ? ಇಲ್ಲಿ ಯಾರ ಆತಂಕವಿದೆ? ಸುಮಿತ್ರೆ ಹೇಗೂ ಊರಿನಲ್ಲಿ ಇಲ್ಲವಲ್ಲ?”

“ ಸುಮಿತ್ರೆ ಊರಿನಲ್ಲಿ ಇಲ್ಲದಿದ್ದರೇನಂತೆ. ನನ್ನ ಪ್ರೀತಿ ಅವಳಿಗೆ ಮೀಸಲು.”

“ ನೀವು ತೋರಿಕೆಗಾಗಿ ಹಾಗೆ ಹೇಳುತ್ತಿಲ್ಲ ತಾನೆ ? ”

“ಇದರಲ್ಲಿ ತೋರಿಕೆಯ ಮಾತೇಕೆ? ನಾನು ಸುಮಿತ್ರೆಯನ್ನು ತ್ರಿಕರಣ ಪೂರ್ವಕವಾಗಿ ಪ್ರೀತಿಸುತ್ತೇನೆ. ನನ್ನ ಸರ್ವಸ್ವವೂ ಅವಳಿಗೇ ಮುಡಿಪು.”

“ ನನ್ನ ಎದುರಿನಲ್ಲಿ ನಿಂತುಕೊಂಡು ಈ ಮಾತನ್ನು ಹೇಳಲು ನಿಮಗೆ ಹೇಗೆ ಮನವಾಗುತ್ತಿದೆ ” ಎಂದು ತಿರಸ್ಕಾರದ ನಗು ನಕ್ಕಳು.

ಸದಾಶಿವ ಕೆಳಗಿಳಿಸಿದ್ದ ತಲೆಯನ್ನು ಮೇಲೆ ಎತ್ತಲಿಲ್ಲ. ಅವನಿಗೆ ಲೀಲಾವತಿಯ ಕಾಮೋದ್ದೀಪ್ತ ದೃಷ್ಟಿಯನ್ನು ಎದುರಿಸುವ ಧೈರ್ಯವಾಗಲಿಲ್ಲ.

“ ಯಾಕೆ ತಲೆತಗ್ಗಿಸಿ ಕುಳಿತಿರಿ? ನನ್ನನ್ನು ನೋಡುವುದು ಪಾಪವೆ!

ಈ ಮಾತು ಕೇಳಿ ಸದಾಶಿವ ಲೀಲಾವತಿಯನ್ನು ದಿಟ್ಟಿಸಿನೋಡಿದ.

ಹೌದು, ಲೀಲಾವತಿ ಸೌಂದರ್ಯವೇ ಮೂರ್ತಿಮಂತಾಗಿ ನಿಂತಿದ್ದಳು. ಭಾವಾವೇಶದಲ್ಲಿ ಅವಳು ಅನುಪಮ ಸುಂದರಿಯಾಗಿ ಕಾಣಿಸುತ್ತಿದ್ದಳು. ಅವಳ ಮುಖ ಆಗತಾನೆ ಅರಳಿದ ಕಮಲದಂತೆಯೇ ಉಲ್ಲಸಿತವಾಗಿತ್ತು. ಅವಳ ಕಣ್ಣುಗಳಲ್ಲಿ ಎಂತಹದೋ ಉದ್ದೀಪಕ ಶಕ್ತಿ ಇತ್ತು. ಅವಳು ಉಟ್ಟಿದ್ದ ತೆಳುವಾದ ರೇಷ್ಮೆಯ ಸೀರೆಯ ಮೂಲಕ ಅವಳ ದೇಹದ ಹೊಂಬಣ್ಣದ ಕಾಂತಿ ಮಂದವಾಗಿ ಕಾಣಿಸುತ್ತಿತ್ತು. ಹೃದಯದ ಬಡಿತಕ್ಕೆ ಅನುಗುಣವಾಗಿ ಏರಿಳಿಯುತ್ತಿದ್ದ ಅವಳ ಎದೆಯ ಭಾಗ—ಹರಿದು ಹೋಗುತ್ತಿರುವ ಯೌವನ ಸುಧೆಯನ್ನು ಬಲವಂತವಾಗಿ ಒಂದೆಡೆ ಕಟ್ಟಿಹಾಕಿದಂತೆ ಸೆಟೆದು ನಿಂತಿತ್ತು. ಅದರ ಮಾಟ, ಬಣ್ಣ, ತೆಳುವಾದ ಕಂಚುಕದ ಅಡಿಯಿಂದ ಅಸ್ಪಷ್ಟವಾಗಿ ಗೋಚರಿಸುತ್ತಿತ್ತು. ಲೀಲಾವತಿ ಕುಳಿತಿದ್ದ ಭಂಗಿ

ಯಲ್ಲಿ ಅವಳ ದೇಹದಲ್ಲೆಲ್ಲಾ ಆ ಭಾಗವೇ ಅತ್ಯಂತ ಆಕರ್ಷಕ ಭಾಗವಾಗಿತ್ತು. ಸದಾಶಿವ ಅವಳನ್ನೇ ತದೇಕಚಿತ್ತನಾಗಿ ನೋಡಿದ. ನೋಡಿದಷ್ಟೂ ನೋಡುವ ಬಯಕೆಯಾಯಿತು. ನೋಡ ನೋಡುತ್ತ ಅವನ ಮನಸ್ಸಿನಲ್ಲಿದ್ದ ದುಷ್ಟವಾಸನೆಗಳಿಗೆ ಕೊಳ್ಳಿ ಹಾಕಿದಂತೆ ಆಯಿತು. ಕ್ಷಣಕಾಲ ಮೈ ಬೆವರಿತು. ನೋಟ ಮಂಜಾಯಿತು—ಅವನ ಉದ್ವೇಗ ಹೆಚ್ಚಿದಂತೆ ಅವನ ಉಸಿರಾಟವೂ ಹೆಚ್ಚಾಗುತ್ತ ನಡೆಯಿತು. ಇದೇ ಬಗೆಯ ರಾಗೋದ್ವಿಗ್ನ ಭಾವದಲ್ಲಿ ಅವನು ಇನ್ನು ಕೆಲವು ಕಾಲ ಇದ್ದಿದ್ದರೆ ಅವನ ಆತ್ಮ ಸಂಯಮವು ಗಾಳಿಗೆ ಸಿಕ್ಕಿದ ತರಗೆಲೆಯಂತೆ ಹಾರಿ ಹೋಗುತ್ತಿತ್ತೋ ಏನೋ. ಆದರೆ ಅವನಿಗೆ ಅನಿರೀಕ್ಷಿತವಾಗಿ ಸುಮಿತ್ರೆಯ ನೆನಪಾಯಿತು. ಅವಳ ನೆನಪಿನೊಡನೆ ಅವನ ವಿಕಾರಗಳೆಲ್ಲವೂ ನಾಶವಾದುವು. ಅವನಲ್ಲಿ ಮೊದಲಿನ ಪವಿತ್ರ ಭಾವನೆಯ ಸಂಚಾರವಾಯಿತು. ರಾಗರಸದ ಮೋಹದಲ್ಲಿ ಕೊಚ್ಚಿ ಹೋಗುತ್ತಿದ್ದ ಅವನಿಗೆ ಸುಮಿತ್ರೆಯ ನೆನಪು ಹರಿಗೋಲಾಯಿತು. ಆ ನೆನಪಿನೊಂದಿಗೆ ಮನಸ್ಸಿನ ಕಂಗಾಲತನ, ಚಂಚಲತೆ, ಚಪಲತೆಗಳು ಮಾಯವಾಗಿ ಮನಸ್ಸು ನಿರಾಳವಾಗಿ, ಶುಭ್ರತೆ, ದೃಢತೆ, ವಿವೇಕಗಳಿಗೆ ಎಡೆಕೊಟ್ಟಿತು. ಅವನ ಮನಸ್ಸು ಲೀಲಾವತಿಯ ನಿಲವು ನೋಟ, ರೂಪ ಯೌವನಗಳಿಂದಾಗಿ ಅಲ್ಲೋಲ ಕಲ್ಲೋಲವಾಗಿದ್ದರೂ, ಸುಮಿತ್ರೆಯ ಪ್ರಿಯಸಾನ್ನಿಧ್ಯದಲ್ಲಿ ಸ್ತ್ರೀ ಸೌಂದರ್ಯವನ್ನು ನಿಷ್ಕಳಂಕ ದೃಷ್ಟಿಯಿಂದ, ಸಾತ್ವಿಕ ರೀತಿಯಲ್ಲಿ ನೋಡುವುದನ್ನು ಕಲಿತಿದ್ದ ಅವನ ಸಂಯಮದ ಕಟ್ಟೆ ಶಿಥಿಲವಾಗಲಿಲ್ಲ. ಅವನು ನಿಸರ್ಗದಲ್ಲಿ ಕಾಣುವ ಗಿರಿ ಕಾನನಗಳನ್ನು ನೋಡುವಂತೆಯೇ ಲೀಲಾವತಿಯ ಸೌಂದರ್ಯವನ್ನು ನೋಡಿ ಸಂತೋಷಪಡಲು ಸಮರ್ಥನಾದ.

ಮೈಯನ್ನೆಲ್ಲಾ ಕಣ್ಣಾಗಿಸಿಕೊಂಡು ನೋಡುತ್ತಾ ಕುಳಿತ ಸದಾಶಿವನನ್ನು ನೋಡಿ,

"ನನ್ನನ್ನು ನೋಡಿ ಸಂತೋಷಪಟ್ಟನೆ ತೀರಿತೆ? ಇವನ್ನೆಲ್ಲ ಮರೆಸುವ ಸ್ವರ್ಗ ಸೌಂದರ್ಯ ನನ್ನಲ್ಲಿದೆ." ಎನ್ನುವಂತೆ ಲೀಲಾವತಿ ಕತ್ತನ್ನು ಕೊಂಕಿಸಿ ಮುಗುಳು ನಕ್ಕಳು.

"ಸದಾಶಿವ ಅರ್ಥವಿಲ್ಲದ ಚಿಂತೆಯಿಂದ ಏನೂ ಸಾಧಿಸಿದಂತೆ ಆಗುವುದಿಲ್ಲ—ವ್ಯರ್ಥಕಾಲಹರಣವಷ್ಟೇ. ಇಲ್ಲಿ ಕೇಳಿ—ಹೆಣ್ಣಿನ ವಿಷಯದಲ್ಲಿ ತಂದೆ ಮಕ್ಕಳೂ ಪ್ರತಿ ಸ್ಪರ್ಧಿಗಳೇ ಆಗುತ್ತಾರಂತೆ—ನಿಮಗೆ ಮದುವೆಯಾಗಿದ್ದರೇನಂತೆ—ನಿಮ್ಮ ಯೌವನಕ್ಕೆ ಅನೇಕರನ್ನು ತೃಪ್ತಿಪಡಿಸುವ ಶಕ್ತಿ ಇದೆ. ನೀವು, ಪಾಶ್ಚಾತ್ಯ ನಾಗರಿಕತೆಯ ಕೂಸಾದ ನೀವು ತ್ರೇತಾಯುಗದ ರಾಮಚಂದ್ರನಂತೆ ಸತೀವ್ರತನೆಂದು ಹೇಳಿಕೊಳ್ಳುವುದನ್ನು ಕೇಳಿ ನನಗೆ ನಗು ಬರುತ್ತಿದೆ........" ಎಂದಳು.

"ಲೀಲಾವತಿ ಕಾಮ ವಿಕಾರಳಾಗಿರುವ ನಿಮಗೆ ಜಗದ್ವಂದ್ಯ ಶ್ರೀರಾಮಚಂದ್ರ ಕೈಲಾಗದವನಂತೆ ಕಾಣಿಸಿದನೆ ನಿಮ್ಮ ಮನಸ್ಸು ಯಾವ ಮಟ್ಟ ಮುಟ್ಟಿದೆ ಎಂಬುದನ್ನು ತೋರಗೊಟ್ಟಂತಾಯಿತು. ಏಕ ಪತ್ನೀವ್ರತ ಶ್ರೀರಾಮಚಂದ್ರನಿಗೆ ಮಾತ್ರ ಮೀಸಲಿಟ್ಟ ಮಕುಟವಲ್ಲ. ಅದು ಜಗತ್ತಿನ ಎಲ್ಲ ಪುರುಷರ ಆದರ್ಶ. ನಾನು ಪಾಶ್ಚಿಮಾತ್ಯ ವಿದ್ಯೆ ಕಲಿತರೇನು? ತನಗಾಗಿ ಸರ್ವಸ್ವವನ್ನು ಧಾರೆ ಎರೆದಿರುವ ವ್ಯಕ್ತಿಗೆ ಎರಡು ಬಗೆಯಬಾರದೆನ್ನುವ ಭಾರತೀಯ ಸಂಸ್ಕೃತಿಯಲ್ಲಿ ನನಗೆ ಅಚಲವಾದ ಶ್ರದ್ಧೆ, ನಂಬಿಕೆಗಳಿವೆ. ನಾನೆಂದಿಗೂ ಕೈಹಿಡಿದ ಸುಮಿತ್ರೆಗೆ ದ್ರೋಹ ಬಗೆಯಲಾರೆ" ಎಂದ ನಿಷ್ಠುರವಾಗಿ.

"ನಾನು ನಿಮ್ಮಲ್ಲಿ ಯಾಚಿಸುತ್ತಿರುವುದು ಸುಮಿತ್ರೆಗೆಂದು ಮೀಸಲಿಟ್ಟ ಪ್ರೀತಿಯಲ್ಲಿ ತಿಲಾಂಶವಲ್ಲ. ನಾನು ಬಯಸುತ್ತಿರುವುದು ನಿಮ್ಮ ಪ್ರಣಯ, ಶೃಂಗಾರ. ಮರುಭೂಮಿಯಂತಿರುವ ದೇಹದ ಬರಡು ಭೂಮಿಗೆ ಅಮೃತ ವರ್ಷ; ವ್ಯರ್ಥವಾಗುತ್ತಿರುವ ಈ ಯೌವನದ ಸೌಂದರ್ಯಕ್ಕೆ ಸಾರ್ಥಕತೆ.... ನನಗೆ ಬೇಕಾಗಿರುವುದು ಹೃದಯಸ್ಪರ್ಶಿಯಾದ ನಿಮ್ಮ ಪ್ರೇಮವಲ್ಲ; ದೇಹ ಸ್ಪರ್ಶಿಯಾದ ಕಾಮ." ಎಂದು ಬಡಬಡಿಸಿದಳು.

"ನನ್ನ ಕಾಮ ಚತುರ್ವಿಧ ಪುರುಷಾರ್ಥಗಳಲ್ಲಿ ಒಂದಾಗಿರುವುದರಿಂದ ಅದೂ ಸುಮಿತ್ರೆಗೇ ಮುಡಿಪು."

"ಇದು ಸ್ವಾರ್ಥವಲ್ಲವೆ? "

"ಹೇಗೆ?"

“ ಹಲವರ ಸ್ವತ್ತಾಗಬಹುದಾದ ನಿಮ್ಮ ಯೌವನ ಒಂದೇ ಹೆಣ್ಣಿಗೆ ಮೀಸಲಾಗುವುದು ! ”

“ ಇದು ನಿಮ್ಮ ತಪ್ಪು ಗ್ರಹಿಕೆ. ವ್ಯಕ್ತಿಯ ಪ್ರೀತಿ, ಯೌವನ ಬಳಿಗೆ ಬರುವ ದುಂಬಿಗಳಿಗೆಲ್ಲ ಮಕರಂದವನ್ನು ಹಂಚುವ ಹೂವಲ್ಲ. ಕಂಡಕಡೆ ಕೈಹಾಕಿ ಕಿತ್ತುಕೊಳ್ಳಲು ಅದು ಕಣಗಲೆ ಹೂವಲ್ಲ. ಅದು ಕನ್ನೈದಿಲೆಯಂತೆ, ಚಂದ್ರನಿಗೆ ಮಾತ್ರವೇ ಮೀಸಲು, ಕಮಲದಂತೆ ಸೂರ್ಯನಿಗೆ ಮಾತ್ರ ಮೀಸಲು–ನನಗೆ ಸುಮಿತ್ರೆಯಿಂದ ಎಲ್ಲ ರೀತಿಯ ಸುಖ, ಶಾಂತಿ ದೊರೆತಿವೆ. ಹೀಗಿದ್ದಮೇಲೆ ಉಳಿದ ಹೂಗಳ ಚಿಂತೆ ನನಗೆ ಇಲ್ಲ.”

“ ದೇವರಿಗೆ ಹೂಗಳ ಚಿಂತೆಯಿಲ್ಲದಿದ್ದರೂ–ಹೂಗಳಿಗೆ ದೇವರ ಚಿಂತೆ ಇದೆ. ಹೂ ಅರಳಿದುದಕ್ಕೆ ಸಾರ್ಥಕ ದೇವರ ಸೇವೆಗೆ ಸಲ್ಲುವುದು.”

“ ನನಗೆ ಯಾರ ಸೇವೆಯೂ ಬೇಡ.”

“ ನೀರು ಕುಡಿಯಬೇಕೆನ್ನಿಸುವುದು ಬಾಯಾರಿಕೆಯಾದವರಿಗೇ ಹೊರತು ತೃಪ್ತಿಗೊಂಡವರಿಗಲ್ಲ.”

ಕ್ಷಣಕಾಲ ಸದಾಶಿವ ಸುಮ್ಮನೆ ಕುಳಿತ.

ಲೀಲಾವತಿ ಮುಂದುವರಿಸಿದಳು.

“ ಸದಾಶಿವ, ನೀವು ವಯೋಧರ್ಮಕ್ಕೆ ಅನುಚಿತ ಮಾತನಾಡಿ ಆತ್ಮವಂಚನೆಮಾಡಿಕೊಳ್ಳುತ್ತಿರುವಿರಿ. ನೀವು ಸಂಯಮದ ಮಾತು ಹೇಳುತ್ತಿರುವಿರಿ. ಈ ವಯಸ್ಸಿನಲ್ಲಿ ಸಂಯಮ ಸುಲಭ ಸಾಧ್ಯವೆ ? ಸಂಯಮದ ಮಾತು ಕೈಲಾಗದ ಹೇಡಿಗಳ ಮಾತು. ನಿಮ್ಮಂಥ ಪುರುಷಸಿಂಹನ ಬಾಯಲ್ಲಿ ಬರುವ ಮಾತಲ್ಲ. ಇಲ್ಲಿ ಕೇಳಿ....ನಾನೂ ಇದುವರೆಗೆ ನಿಮ್ಮಂತೆ ಕಠೋರ ಸಂಯಮ ವ್ರತದಲ್ಲಿ ಇದ್ದೆ. ನಿಮಗಿಂತಲೂ ನಿಷ್ಠುರವಾದ ಸಂಯಮದಲ್ಲಿ ಜೀವನ ಸಾಗಿಸಿದ್ದೆ. ಆದರೆ ನನ್ನ ಜೀವನದಲ್ಲಿ ನೀವು ಧೂಮಕೇತುವಂತೆ ಕಾಣಿಸಿಕೊಂಡಿರಿ. ಯಾರನ್ನೂ ಕಾಮಿಸದೆ ಇದ್ದ ನಾನು ನಿಮ್ಮನ್ನು ಕಾಮಿಸಿದೆ. ನೀವು ನಿಮಗರಿಯದಂತೆಯೇ ನನ್ನ ಸಂಯಮದ ಕಟ್ಟೆಯನ್ನು ಒಡೆದುಬಿಟ್ಟಿರುವಿರಿ. ನನ್ನ ಜೀವನದಲ್ಲಿ ನೀವು ಮಾಡಿರುವ ಹಾವಳಿ ಎಷ್ಟೆಂಬುದರ ಕಲ್ಪನೆ ನಿಮಗಿದೆಯೆ ? ನಿಮ್ಮಿಂದಾಗಿ ನನಗೆ ಕಣ್ಣಿಗೆ ನಿದ್ರೆ

ಇಲ್ಲ. ಮೈಗೆ ಸುಖವಿಲ್ಲ. ನನ್ನ ಬಾಳಿನಲ್ಲಿ ಕಾರ್ಗತ್ತಲೆ ಕವಿದು ಬಿರುಗಾಳಿ ಭೋರ್ಗರೆಯುತ್ತ ಮನಸ್ಸನ್ನು ಕದಡಿಬಿಟ್ಟಿದೆ. ಹೆಣ್ಣಾಗಿ ಹುಟ್ಟಿ ಗಂಡಾಗಿ ಬೆಳೆದಿದ್ದ ನನ್ನಲ್ಲಿ ನೀವು ಸ್ತ್ರೀತ್ವವನ್ನು ಜಾಗೃತಗೊಳಿಸಿರುವಿರಿ. ಮಾತ್ರವಲ್ಲ ವಿರಹದಿಂದ ಹಣ್ಣು ಮಾಡಿರುವಿರಿ. ನನಗೆ ಇನ್ನು ತಡೆಯಲು ಸಾಧ್ಯವಿಲ್ಲ. ಸಂಯಮದ ಬದುಕು ನನಗೆ ಸಾಕಾಗಿದೆ. ನನಗೆ ಈಗ ಸುಖ ಬೇಕು. ಸುಖ! ಅದನ್ನು ನೀವು ಕೊಡಬಲ್ಲಿರಿ. ದಯವಿಟ್ಟು ಕೃಪೆ ಮಾಡಬೇಕು" ಎಂದೆನ್ನುತ್ತಾ ಸದಾಶಿವನನ್ನು ಅಪ್ಪಿಕೊಳ್ಳಲೆಂಬಂತೆ ಅವನ ಬಳಿಗೆ ಹೋದಳು. ಅವಳ ಅಸಹಾಯಕತೆ, ದೈನ್ಯತೆಗಳನ್ನು ಕಂಡು ಸದಾಶಿವನಿಗೆ ತುಂಬಾ ಪಶ್ಚಾತ್ತಾಪವಾಯಿತು. ಅವನು ಲೀಲಾವತಿಯನ್ನು ಸಂತೈಸುತ್ತಲೆಂದ:

"ಬೇಡ ಲೀಲಾವತಿ, ನಿಮ್ಮಂಥ ಕಲಿತ ಹೆಣ್ಣು ಹೀಗೆಲ್ಲ ಅವಿಚಾರಿಯಾಗಬಾರದು. ನೀವು ಕ್ಷಣಭಂಗುರವಾದ ದೈಹಿಕ ಸುಖಕ್ಕಾಗಿ ಅವಿವೇಕಿಯಾಗುವುದೇ? ನಿಮಗೆ ಒಂಟಿಜೀವನ ಸಾಕೆನಿಸಿದ್ದರೆ ನೀವು ಮದುವೆಯಾಗಿ ಸುಖದಿಂದ ಇರಿ. ಆ ಸರಳ ಹಾದಿಯನ್ನು ಬಿಟ್ಟು ದುರ್ಬಲ ಮನಸ್ಸಿಗೊಳಗಾಗಿ ಈ ಬಗೆಯ ಅಡ್ಡಹಾದಿ ತುಳಿಯಬಾರದು. ನಿಮ್ಮಂಥ ವಿದ್ಯಾವತಿಯೂ, ಸತ್ಕುಲ ಪ್ರಸೂತೆಯೂ ಮಾಡುವ ಕೆಲಸವಲ್ಲ ಇದು."

"ನಾನು ನಿಮ್ಮಲ್ಲಿಗೆ ಬಂದದ್ದು ಈ ಉಪದೇಶಾಮೃತಕ್ಕೆ ಅಲ್ಲ. ನನಗೆ ಬೇಕಾಗಿರುವುದು ನಿಮ್ಮ ಮಾತಲ್ಲ ನೀವು! ನೀವು!"

"ನಾನು ನಿಮಗೆ ದುರ್ಲಭನೇ ಸರಿ."

ಈ ಮಾತಿನಿಂದ ಲೀಲಾವತಿ ಕೆರಳಿದಳು.

"ಏನು? ನೀವು ದುರ್ಲಭರೆ? ನಾನು ಸುಲಭ ಸಾಧ್ಯವೆಂದು ತಿಳಿದಿರುವಿರಾ? ಸದಾಶಿವ....ಕೇಳಿ ನನಗಾಗಿ ಹಾತೊರೆದವರ ಕಡೆ ಕತ್ತೆತ್ತಿ ನೋಡಿದವಳಲ್ಲ. ನಾನು ನಿಮ್ಮ ಬಳಿಗೆ ಪ್ರಣಯಾರ್ಥಿಯಾಗಿ ಬಂದ ಮಾತ್ರಕ್ಕೆ ನನ್ನನ್ನು ಹಗುರವಾಗಿ ನೋಡಬೇಡಿ. ಯಾರಿಗೂ ಈ ಚೆಲುವೊಡಲಿನ ಸುಖಸ್ಪರ್ಶ ಸಿಕ್ಕಿರಲಿಲ್ಲ. ಈ ವಿಷಯದಲ್ಲಿ ನೀವು ಭಾಗ್ಯಶಾಲಿಯೇ ಸರಿ. ಇದಕ್ಕಾಗಿ ನೀವು ಹೆಮ್ಮೆ ಪಡಬೇಕು. ಬಾಯಾರಿ ಬಳಿಗೆ ಬಂದವಳಿಗೆ ನೀರುಣಿಸಿ ಕೃತಕೃತ್ಯರಾಗಬೇಕು."

ಎಂದವಳೇ ಭಾವೋದ್ವೇಗವನ್ನು ತಡೆಯಲಾರದೆ ಸದಾಶಿವನನ್ನು ಆಲಿಂಗಿಸಲು ಹೋದಳು. ಇದನ್ನು ಕಂಡ ಸದಾಶಿವ ಕ್ಷಣಕಾಲ ತಬ್ಬಿಬ್ಬಾದರೂ—ಯಾವ ಬಗೆಯ ವಿಕಾರಕ್ಕೊಳಗಾಗದೆ ಲೀಲಾವತಿಯನ್ನು ಕೈಹಿಡಿದು ಬಳಿಯಲ್ಲೇ ಕುಳ್ಳಿರಿಸಿಕೊಂಡು ಹೇಳಿದ.

"ಲೀಲಾವತಿ, ನೀವಿಷ್ಟು ಹುಚ್ಚರಾಗಿರುವಿರೆಂದು ನಾನು ತಿಳಿದಿರಲಿಲ್ಲ. ನಿಮಗೆ ಮಾನ ಮರ್ಯಾದೆ ಮನೆತನದ ಗೌರವಗಳು ಇಲ್ಲವಾದುವೆ? ನೀವು ಇಷ್ಟೆಲ್ಲಾ ಕಲಿತು ಕಾಲೇಜಿನಲ್ಲಿ ಅಧ್ಯಾಪಕಿಯಾಗಿದ್ದುಕೊಂಡೂ ಎಷ್ಟು ಅವಿವೇಕದಿಂದ ವರ್ತಿಸುತ್ತಿರುವಿರಿ? ನೀವು ಉನ್ಮತ್ತರಾಗಿರುವಿರಿ. ನಿಮ್ಮ ಯಃಕಶ್ಚಿತ ಕಾಮಪಿಪಾಸೆಗೆ ನಿಮ್ಮ ಆದರ್ಶ, ಸತ್ಕೀರ್ತಿ, ಮನೆತನದ ಗೌರವಗಳನ್ನು ಬಲಿಗೊಡುವಿರಾ? ನೀವು ಚಿತ್ತಚಾಂಚಲ್ಯದಿಂದ ಎಂತಹ ಹುತ್ತದಲ್ಲಿ ಕೈಹಾಕುತ್ತಿರುವಿರಿ ಎಂದು ಬಲ್ಲಿರಾ? ನೀವು ಇಷ್ಟೊಂದು ಕಾಲ ಕಾಯ್ದುಕೊಂಡು ಬಂದಿರುವ ಶೀಲವನ್ನು ನಿಮಿಷಾರ್ಧದಲ್ಲಿ ಗಾಳಿಗೆ ತೂರಿಬಿಡುವಿರಾ? ನಿಮಗೆ ಶೀಲದ ಬೆಲೆ ಇಲ್ಲವಾಯಿತೆ? ಸಂಯಮದ ಬದುಕು ಸಾಕಾಯಿತೆ? ಕನ್ಯಾಶ್ರಮದ ಕಠೋರ ನಿಯಮಗಳು ದುಸ್ಸಹನೀಯವಾದುವೆ? ಹಾಗಾದರೆ ನೀವೇಕೆ ಎಲ್ಲರಂತೆ ಮದುವೆಯಾಗಿ ಸುಖದಿಂದ ಇರಬಾರದು? ಏಕೆ ಅವಿವಾಹಿತಳಾಗಿದ್ದುಕೊಂಡು ಈ ಬಗೆಯ ಆತ್ಮವಂಚನೆ ಮಾಡಿಕೊಳ್ಳುತ್ತೀರಿ?" ಎಂದು ಪ್ರಶ್ನೆಗಳ ಮಳೆಯನ್ನೇ ಕರೆದ. ಇದರಿಂದಾಗಿ ಲೀಲಾವತಿಯಲ್ಲಿ ಭಾವೋದ್ವಿಗ್ನತೆ ಕಳೆದು ಅವಳಲ್ಲಿ ವಿವೇಕೋದಯ ಉಂಟಾಯಿತು. ಅವಳಿಗೆ ತಾನು ಬಗೆಬಗೆಯಾಗಿ ಪ್ರಾರ್ಥಿಸಿದರೂ ತನ್ನನ್ನು ಕಡೆಗಣ್ಣಿನಿಂದ ನೋಡದೆ ತಿರಸ್ಕರಿಸಿ ಬಿಟ್ಟ ಸದಾಶಿವನ ವಿಷಯದಲ್ಲಿ ಅಭಿಮಾನ ಗೌರವಗಳಿಗಿಂತ ಸೇಡಿನ ಪ್ರತಿಕಾರದ ಮನೋಭಾವವೇ ಬೆಳೆಯಿತು. ಅವಳು ಸದಾಶಿವನನ್ನು ದುರದುರನೆ ನೋಡುತ್ತಾ ಸಿಂಹಿಣಿಯಂತೆ ಕುಳಿತಳು. ಅವನು ಹೇಳುವುದೆಲ್ಲ ಮುಗಿದ ಮೇಲೆ ಲೀಲಾವತಿ ಹೇಳಿದಳು.

"ಸದಾಶಿವ! ನೀವೊಬ್ಬರು ಹೇಡಿ ಎಂಬುದು ನನಗೆ ಇದುವರೆಗೆ ತಿಳಿದಿರಲಿಲ್ಲ. ನಿಮ್ಮ ಪೌರುಷಕ್ಕೆ ಧಿಕ್ಕಾರ! ಒಲಿದು ಬಂದ ಹೆಣ್ಣನ್ನು ಕಣ್ಣೆತ್ತಿ ನೋಡದ ನಿಮ್ಮ ಶೌರ್ಯಕ್ಕೆ ಧಿಕ್ಕಾರ!! ಬಾಯಾರಿ ಬಸವಳಿದು

ಬಂದ ಹೆಣ್ಣಿಗೆ ನೀವು ಶುಷ್ಕ ಧರ್ಮೋಪದೇಶ ಮಾಡುವಿರಾ? ಹೇಡಿಗೆ ಮಾತೇ ಮುಖ್ಯಾಸ್ತ್ರವಂತೆ—ನಿಮ್ಮಂಥ ಹೆಣ್ಣಿಗರನ್ನು ನೆಚ್ಚಿಬಂದು ನಾನು ಕೆಟ್ಟೆ" ಎಂದು ಬಾಯಿಗೆ ಬಂದಂತೆ ಒದರಿ ಹರಟತೊಡಗಿದಳು.

"ಲೀಲಾವತಿ ಸಾಕುಮಾಡಿ ನಿಮ್ಮ ಮಾತು! ಸೇಡಿನ ಕೈಗೆ ಬುದ್ಧಿಯನ್ನು ಕೊಟ್ಟು ಮೂರ್ಖರಾಗಬೇಡಿ. ನಿಮ್ಮನ್ನಿಲ್ಲಿ ಬರಹೇಳಿದವರು ಯಾರು? ಕರೆಸಿಕೊಳ್ಳದೆ ಬಂದವರಿಗೆ ಅದೆಷ್ಟು ದುರಹಂಕಾರ?"

"ಹೌದು ನಾನು ಕರೆಸಿಕೊಳ್ಳದೆ ಬಂದೆ. ಇದೋ....ಹೇಳಿಸಿಕೊಳ್ಳದೆ ಹೊರಡುತ್ತೇನೆ. ಆದರೆ ನೀವೊಂದು ಮಾತು ನೆನಪಿನಲ್ಲಿ ಇಡಿ. ನಿಮ್ಮ ಹೃದಯಶೂನ್ಯ ನಡವಳಿಕೆಯಿಂದ ಮೂಸಲಿತ್ತ ಮಲ್ಲಿಗೆಯನ್ನು ಹೊಸೆದು ಬಿಟ್ಟಿರುವಿರಿ. ಆ ಹೂವಿನ ಶಾಪ ಒಂದು ದಿನ ನಿಮಗೆ ತಟ್ಟದೆ ಇರದು. ನಿಮ್ಮ ದುಷ್ಕೃತ್ಯವನ್ನು ನೆನೆದು ಒಂದು ದಿನ ನೀವೇ ಪಶ್ಚಾತ್ತಾಪ ಪಡುತ್ತೀರಿ! ಮರೆಯಬೇಡಿ." ಎಂದು ಹೇಳಿ ಅಲ್ಲಿ ನಿಲ್ಲದೆ ಮಿಂಚಿನ ವೇಗದಲ್ಲಿ ಅಲ್ಲಿಂದ ಮಾಯವಾದಳು. ಮನೆಗೆ ಬಂದು ಹಾಸಿಗೆಯ ಮೇಲೆ ಮಲಗಿದಾಗ ಅವಳಿಗೆ ಅದುತನಕ ತಡೆಹಿಡಿದಿದ್ದ ದುಃಖದ ಕೋಡಿ ಕಿತ್ತು ಬಂತು. ಅವಳಿಗಾದ ಪರಾಭವ ಅವಳ ಬಗ್ಗೆ ಅವಳಿಗಿದ್ದ ನಂಬಿಕೆಯನ್ನೇ ಹಿಡಿದು ಅಲುಗಿಸಿತ್ತು. ತನ್ನ ರೂಪ, ಯೌವನ ವಿದ್ಯೆಗಳಿಂದ ಯಾರನ್ನು ಬೇಕಾದರೂ ಸೆರೆಹಿಡಿಯಬಹುದೆಂದು ಅವಳು ತಿಳಿದಿದ್ದಳು. ಹೀಗಿದ್ದ ಅವಳಿಗೆ ಸದಾಶಿವನಿಂದ ಮೊಟ್ಟ ಮೊದಲನೆಯ ಬಾರಿ ಸೋಲು ಉಂಟಾಗಿತ್ತು. ಸದಾಶಿವ ಅವಳ ಸೊಬಗು ಸೌಂದರ್ಯವನ್ನು ನೋಡಿಯೂ ಅಚಲನಾಗಿ ನಿಂತಿದ್ದ. ಅವನ ಸಂಯಮದ ಮುಂದೆ ಲೀಲಾವತಿಯ ಮೋಹ ಮಂಜಿನಂತೆ ಕರಗಿ ಹೋಗಿತ್ತು. ತನ್ನ ಆಸೆ ಈಡೇರದುದಕ್ಕಿಂತಲೂ ತನ್ನ ಅಸಂಭಾವಕ್ಕಾದ ಸೋಲು ಅವಳ ಹೃದಯವನ್ನು ಹಿಂಡಿತು. ಅವಳು ಹಣ್ಣಾದಳು. ಅವಳ ಜೀವನದಲ್ಲಿ ಮೊಟ್ಟ ಮೊದಲನೆಯ ಬಾರಿ ಹೆಣ್ಣಿನ ಅತೃಪ್ತ ಬಯಕೆ ಬೃಹದಾಕಾರವಾಗಿ ಬೆಳೆಯಿತು. ಅದರ ಬೇಗೆಯಲ್ಲಿ ಬೆಂದು, ಹಾಸಿಗೆಯ ಮೇಲೆ ಎಳೆಯ ಮಗುವಿನಂತೆ ಹೊರಳಾಡಿದಳು. ಹೃದಯದ ಕೊರಗನ್ನು ಹುದುಗಿಸಿಕೊಳ್ಳಲಾಗದೆ ಬಿಕ್ಕಿ ಬಿಕ್ಕಿ ಅತ್ತಳು.

ಆ ರಾತ್ರಿಯಲ್ಲಿ ಲೀಲಾವತಿಯ ಕೋಣೆಯಿಂದ ಬಿಕ್ಕುವ ಸ್ವರವನ್ನು ಕೇಳಿ ಅಡಿಗೆಯವಳಿಗೆ ಎಚ್ಚರವಾಗಿ, ಅವಳು ಯಾರು ಅಳುತ್ತಿರುವರೆಂದು ನೋಡಲು ಬಂದಳು. ಲೀಲಾವತಿಯ ಕೋಣೆ ಬೋಲ್ಟು ಹಾಕಿತ್ತು. ಒಳಗೆ ದೀಪ ಉರಿಯುತ್ತಿತ್ತು. ಅವಳಿಗೆ ಗಾಬರಿಯಾಯಿತು. ಡಬಡಬನೆ ಬಾಗಿಲು ಬಡಿದಳು. ಎಷ್ಟು ಬಡಿದರೂ ಬಾಗಿಲು ತೆರೆಯಲಿಲ್ಲ. ಅವಳಿಗೆ ಬೇರೇನೂ ತೋಚದೆ ವಿಶ್ವನಾಥರಾಯರನ್ನು ಎಚ್ಚರಿಸಿ ಅವರಿಗೆ ವಿಷಯವನ್ನು ತಿಳಿಸಿದಳು. ವಿಶ್ವನಾಥರಾಯರು ವಿಶ್ವಸಾಹಸ ಮಾಡಿ ಬಾಗಿಲು ತೆರೆಸಿದರು. ಒಳಗೆ ಕಂಡ ದೃಶ್ಯ ಅವರ ಹೃದಯವನ್ನು ನಡುಗಿಸಿತು. ಲೀಲಾವತಿ ತಲೆಯನ್ನು ಬಿರಿ ಬಿಚ್ಚಿಕೊಂಡು ಹುಚ್ಚಿಯಂತೆ ಅಳುತ್ತಿದ್ದಳು. ಅವಳ ದುಃಖದ ಆವೇಗವನ್ನು ಕಂಡು ಅವರಿಗೆ ಹೆದರಿಕೆಯಾಯಿತು. ಅವರು ಬಂದು ಮಗಳ ಹಾಸಿಗೆಯ ಮೇಲೆ ಕುಳಿತು ಮಗಳ ಮೈತಡವಿದರು.

"ಏನಾಯಿತು ಮಗು ಏನಾಯಿತು?" ಎಂದು ಆತಂಕದಿಂದ ಕೇಳಿದರು. ಲೀಲಾವತಿಗೆ ತಂದೆಯ ಪ್ರಿಯ ನುಡಿಗಳಿಂದ ಸಮಾಧಾನವಾದಂತೆ ತೋರಿ ಅವಳು ಎದೆಯನ್ನು ತೋರಿಸುತ್ತಾ "ಇಲ್ಲಿ ಬೆಂಕಿ ಬಿದ್ದಿದೆ ಬೆಂಕಿ" ಎಂದು ಉದ್ಗಾರ ತೆಗೆದಳು.

ಲೀಲಾವತಿಯ ಮಾತು, ವರ್ತನೆಯಿಂದ ನಡೆದ ವಿಷಯವೇನೆಂದು ಯಾರಿಗೂ ತಿಳಿಯಲಿಲ್ಲ. ಅಡಿಗೆಯವಳು ಎಲ್ಲೋ ಭೂತಚೇಷ್ಟೆ ಇರಬೇಕು ಎಂದುಕೊಂಡಳು. ವಿಶ್ವನಾಥರಾಯರು ಎಲ್ಲೋ ಕೆಟ್ಟಕನಸು ಬಿದ್ದಿರಬೇಕೆಂದು ಊಹಿಸಿದರು.

"ಲೀಲಾ ಕೆಟ್ಟ ಕನಸು ಬಿತ್ತೆ?"

"ಹೌದು ಅಣ್ಣ. ಭಯಂಕರ ಸ್ವಪ್ನ!" ಎಂದಳು.

"ಹೋಗಲಿ ಇಲ್ಲಿ ಮಲಗುವುದು ಬೇಡ. ನನ್ನ ಜತೆಯಲ್ಲಿಯೇ ಮಲಗುವೆಯಂತೆ ಬಾ" ಎಂದು ಹೇಳಿ ಮಗಳನ್ನು ತಮ್ಮ ಕೋಣೆಯಲ್ಲಿಯೇ ಮಲಗಿಸಿ, ಎಳೆ ಮಗುವನ್ನು ತಟ್ಟುವಂತೆ ತಟ್ಟಿದರು. ತಂದೆಯ ಪ್ರೀತಿಯ ಆವರಣದಲ್ಲಿ ಲೀಲಾವತಿ ತನ್ನ ಬಾಳಿನ ದುಃಸ್ವಪ್ನವನ್ನು ಮರೆತು ಹಸುಗೂಸಿನಂತೆಯೇ ನಿದ್ರೆ ಮಾಡಿದಳು.

# ೧೪

ಈ ಘಟನೆ ನಡೆದ ಮೂರನೆಯ ದಿನ ವಿಶ್ವನಾಥರಾಯರು ತಮ್ಮ ಮಗಳ ಆಸೆಯಂತೆ ಮಿತವಾದ ಸಾಮಾನಿನೊಡನೆ ನಂದಿಗೆ ಬೇಸಿಗೆಯನ್ನು ಕಳೆದು ಬರಲು ಹೊರಟುಬಿಟ್ಟರು. ಬಹು ಕಾಲದಿಂದಲೂ ನಂದಿಯಲ್ಲಿ ಕೆಲವು ತಿಂಗಳಾದರೂ ಇರಬೇಕೆಂದು ವಿಶ್ವನಾಥರಾಯರ ಆಸೆಯಾಗಿತ್ತು. ಅವರಿಗೆ ಬಾಲ್ಯದಿಂದಲೂ ಹೃದ್ರೋಗವಿತ್ತು. ಅದಕ್ಕೆ ಬೇಕಾಗಿದ್ದುದು ವಿಶ್ರಾಂತಿ ಮತ್ತು ಮನಶ್ಶಾಂತಿ. ಮಗಳ ಜತೆಯಲ್ಲಿ ಬಂದು ಇರತೊಡಗಿದ ಮೇಲೆ ಇವುಗಳೆರಡು ಅವರ ಪಾಲಿಗೆ ಇಲ್ಲವೆನ್ನಬೇಕು. ಲೀಲಾವತಿ ತನ್ನ ಜೀವನದಲ್ಲಿ ದುಃಸ್ವಪ್ನ ಕಂಡ ಆ ದಿನದ ಲಾಗಾಯಿತು ಹೊರಗೆ ತಲೆ ಇಡಲು ನಾಚಿ, ಮನೆಯಲ್ಲೇ ಸದಾ ಯೋಚಿಸುತ್ತಾ ಏನನ್ನೋ ಕನವರಿಸುತ್ತ ಮೈ ಮನಸ್ಸಿನ ಆಲಸಿಕೆಯಿಂದ ಹಾಸಿಗೆ ಹಿಡಿದಿದ್ದಳು. ಈ ರೋಗಕ್ಕೆ ಬೇರೆ ಯಾವ ಮದ್ದು ಹಿಡಿಸುವುದಿಲ್ಲವೆಂದು ವಿಶ್ವನಾಥರಾಯರಿಗೆ ಅರಿವಾಗಿ ಕೆಲ ಕಾಲ ಈ ಮನೆಯಿಂದ ಹೊರಗೆ ಇರುವುದೇ ಉತ್ತಮವೆಂದು ತೋರಿ, ತಮ್ಮ ಹಳೆಯ ಅಭಿಲಾಷೆಯನ್ನು ಈ ಸಮಯದಲ್ಲಿ ಈಡೇರಿಸಿಕೊಂಡರು. ಅವರಿಗೆ ತಮ್ಮ ಮಗಳ ಜೀವನದಲ್ಲಿ ಹಠಾತ್ತನೆ ಕಾಣಿಸಿಕೊಂಡ ನಿರುತ್ಸಾಹ, ಕಳವಳಕ್ಕೆ ಸದಾಶಿವನೇ ಅಪರೋಕ್ಷವಾಗಿ ಕಾರಣನೆಂಬ ವಿಷಯ ತಿಳಿಯಲಿಲ್ಲ. ತಮ್ಮ ಮನೆಗೆ ಎಂದಿನಂತೆ ಊಟಕ್ಕೆ ಅವನು ಬರುವುದು ತಪ್ಪಿಹೋದ ಕಾರಣವನ್ನು ಅವರು ಅಷ್ಟಾಗಿ ತಲೆಗೆ ಹಚ್ಚಿಕೊಳ್ಳಲಿಲ್ಲ. ಸದಾಶಿವ ಉಪಾಯಾಂತರವಾಗಿ ತನ್ನ ಗೆಳೆಯರ ಮನೆಯಲ್ಲಿ ಸತ್ಕಾರ, ಭೋಜನ, ಔತಣಗಳೆಂದು ನೆಪ ಹೇಳಿ, ಹೋಟಲಿನಲ್ಲಿ ಊಟಮಾಡಿ ಬರುತ್ತಿದ್ದ. ಈ ಬಗ್ಗೆ ಲೀಲಾವತಿಗೂ ಮೊದಲಿನ ಆಸಕ್ತಿ ಇರಲಿಲ್ಲ. ಅವಳಿಗೆ ಸದಾಶಿವನನ್ನು ನೋಡಿದರೆ ಸಿಟ್ಟು ನೆತ್ತಿಗೇರುತ್ತಿತ್ತು. ಅಷ್ಟೇ ಅವಮಾನ ಮತ್ತೊಮ್ಮೆ ಆಗುತ್ತಿತ್ತು. ಹೀಗಾಗಿ ಅವನು ಸುಳಿದ ಕಡೆ ಅವಳು ಸುಳಿಯುತ್ತಿರಲಿಲ್ಲ. ಅವನ ಬಗ್ಗೆ ಅವಳಿಗೆ ಒಂದು ಬಗೆಯ ಹೆದರಿಕೆ, ತಿರಸ್ಕಾರಗಳು ಉಂಟಾಗಿತ್ತೆಂದರೂ ಸರಿ. ಅವಳಿಗೆ ಸದಾಶಿವನ ಬಗ್ಗೆ ಮೊದಲಿನ ಪ್ರೀತಿಗೌರವಗಳು

ಮಾಯವಾಗಿ ಸೇಡಿನ ಭಾವವೇ ಬಲವಾಯಿತು. ಆದರೆ ಅವಳು ಸದಾಶಿವನ ಮೇಲೆ ಯಾವ ಬಗೆಯ ಪ್ರತೀಕಾರವನ್ನು ಮಾಡುವಂತೆ ಇರಲಿಲ್ಲ. ಅವಳ ಸಿಟ್ಟು ಅಸಮಾಧಾನಗಳು ಹಲ್ಲು ಕಳಚಿಕೊಂಡ ಹಾವಿನದರಂತೆ ಆಗಿತ್ತು. ಅವಳಿಗೂ ಕೆಟ್ಟ ನೆನಪುಗಳ ನಿವಾಸವಾದ ಆ ಮನೆಯ ಆವರಣದಿಂದ ಕೆಲ ಕಾಲ ದೂರವಿರುವ ಆಸೆಯಾಯಿತು. ತಂದೆಯ ಕಾಹಿಲೆಯನ್ನು ಮುಂದೆ ಮಾಡಿಕೊಂಡು ಬೇಸಿಗೆಯಲ್ಲಿ ಆರೋಗ್ಯಧಾಮವೆನಿಸಿದ್ದ ನಂದಿಗೆ ತಂದೆಯೊಡನೆ ಹೊರಟುಬಿಟ್ಟಳು.

ಸದಾಶಿವನಿಗೆ ತಂದೆ ಮಕ್ಕಳು ಹೊರಡುವ ಸಂಗತಿ ಹೊರಡುವ ಮುನ್ನ ತಿಳಿದಿರಲಿಲ್ಲ. ಅವನ ಕಿವಿಗೆ ಯಾವ ಸುದ್ದಿಗಳೂ ಬೀಳಲಿಲ್ಲ. ಅವನಿಗೆ ತಿಳಿದುದಾದರೂ ಅವರು ಮನೆಯನ್ನು ಬಿಟ್ಟು ಹೊರಟುಹೋದ ಎಷ್ಟೋ ಹೊತ್ತಿನ ಮೇಲೆ. ಅವನು ಎಂದಿನಂತೆ ಹನ್ನೆರಡು ಗಂಟೆಗೆ ಮನೆಗೆ ಬಂದಾಗ ವಿಶ್ವನಾಥರಾಯರ ಮನೆಗೆ ಬೀಗಹಾಕಿತ್ತು. ಏಕೆಂದು ವಿಸ್ಮಯ ವಾಯಿತು. ಮನೆಯಲ್ಲಿದ್ದ ಕೆಲಸದಾಳನ್ನು ವಿಚಾರಿಸಿದ.

"ರಾಯರು ಮನೆಯಲ್ಲಿ ಇಲ್ಲವೇನೋ ರಂಗಪ್ಪ?"

"ಇಲ್ಲ ಬುದ್ಧಿ."

"ಎಲ್ಲಿ ಹೋಗಿದಾರೋ?"

"ಅದೆಲ್ಲೊ ನಂದಿಗಂತೆ ಬುದ್ಧಿ."

"ಯಾರು ಯಾರು ಹೋದರೋ?"

"ರಾಯ್ರು. ಚಿಕ್ಕಮ್ಮಾವ್ರು ಹೋದ್ರು ಬುದ್ದಿ...."

"ಯಾವಾಗ ಹೋದರೋ?"

"ಬೆಳಗಿನ ರೈಲಿನಾಗ ಬುದ್ದಿ."

"ಅವರು ಹೋಗೋವಾಗ ನನ್ನ ವಿಷಯವೇನಾವರೂ ಹೇಳಿದ್ರಾ?"

"ಆಡಿದ್ರೂ ಬುದ್ದಿ, ದೊಡ್‌ರಾಯ್ರು ಇದ್ದುಗೊಂಡು ನೀವು ಎದ್ದಿದ್ರೆ ಕರಕೊಂಡು ಬಾ. ಮನೆಕಡೆ ನೋಡ್ಕೊಳ್ಳಿ ಅಂತ ಹೇಳೋಗೋಣ ಅಂತ ನಂಗೆ ಅಂದ್ರು. ಈ ಮಾತು ಕೇಳಿ ಚಿಕ್ಕಮ್ಮಾವ್ರು 'ಅವರು ಮಲಗ್ಬಿಟ್ಟಿದ್ದಾರೆ. ಎಬ್ಬಿಸೋದೇನೂ ಬೇಡ' ಎಂದು ಆ ಮಾತ್ನ ಅಲ್ಲಿಗೇ ಮಟಕಿಬಿಟ್ರು."

" ಹಾಗಾದರೆ ಅವರು ಯಾವಾಗ ಹಿಂದಿರುಗಿ ಬರುತ್ತಾರೆ? "

" ದೊಡ್ಡರಾಯ್ರು ಏನೂ ಹೇಳ್ಳಿಲ್ಲ ಬುದ್ಧಿ. ಚಿಕ್ಕಮ್ಮಾವ್ರು ಮಾತ್ರ ರಜ ತೀರೋ ಹೊತ್ಗೆ ಬಂದುಬಿಡ್ತೊ ಅಂಗೆ ಹೇಳಿದ್ರು ಬುದ್ಧಿ."

"ಹಾಗಾದರೆ ಪ್ರಯಾಣ ಸಿದ್ಧಮಾಡಿದೋರು ಚಿಕ್ಕಮ್ಮಾವ್ರೆ ಅನ್ನು."

" ಹೌದು ಬುದ್ಧಿ, ಭೂತ ಚ್ಯಾಸ್ಟಿ ಇಂದ ಈ ಮನೇಲಿ ಇರೋದು ಬ್ಯಾಡಾಂತ ಅನಿಸ್ತು ! "

" ಭೂತ ಚೇಷ್ಟೆ—ಹಾಗಂದರೆ ಏನೋ ? "

" ಹಂಗಾದರೆ ನಿಮಗಿನ್ನೂ ಆ ವಿಷಯ ಗೊತ್ತಿರೋಕಿಲ್ಲ ಅಂತ ಕಾಣುತ್ತೆ " ಎಂದು ಲೀಲಾವತಿಯ ಮೈಮೇಲೆ ಬಂದ ಭೂತದ ವಿಷಯ ತನಗೆ ತಿಳಿದಂತೆ ಹೇಳಿದ. ಲೀಲಾವತಿ ಉಟ್ಟಬಟ್ಟೆಯನ್ನು ಹರಿದುಹಾಕಿದುದು, ಹಣೆಯ ಕುಂಕುಮವನ್ನು ಒರೆಸಿಹಾಕಿದ್ದು, ತಲೆಗೂದಲನ್ನು ಬಿಚ್ಚಿಕೊಂಡಿದ್ದು, ಕೆಂಗಣ್ಣು ಮಾಡ್ತಾ, ಕಟಕಟನೆ ಹಲ್ಲು ಕಡಿಯುತ್ತಾ ಮಾತನಾಡಿದೋರ ಮೇಲೆಲ್ಲ ಬೀಳಲು ಬರುತ್ತಿದ್ದುದು—ಇವೆಲ್ಲ ಭೂತಚೇಷ್ಟೆಯನ್ನೂ ಆದ್ಯಂತವಾಗಿ ತಿಳಿಸಿದ.

" ಹಾಗಾದರೆ ಈ ಮನೆಯಲ್ಲಿ ಭೂತವಿದೆ ಅನ್ನು ರಂಗಪ್ಪ."

" ಇರಬೌದು ಬುದ್ಧಿ."

" ನಿಮ್ಮನ್ನೇನೂ ಮಾಡೋದಿಲ್ಲವೆ ? "

" ನಮ್ಮನ್ನೇನು ಮಾಡ್ತವೆ ಅವು. ಅಡಿಗೆ ಆಯಮ್ಮ ಹೇಳ್ತಿದ್ದಳು. ಭೂತಗಳಲ್ಲಿ ಹೆಣ್ಣು ಪಿಶಾಚಿ, ಗಂಡು ಪಿಶಾಚಿ ಅಂತ ಎರಡು ರಖಂ ಇರ್ತದಂತೆ. ಹೆಣ್ಣು ಪಿಶಾಚಿ ಗಂಡಸರ್ನ, ಗಂಡು ಪಿಶಾಚಿ ಹೆಂಗಸರ್ನ ಹಿಡಿಯುತ್ವಂತೆ. ಈ ಮನೇಲಿ ಇರೋದು ಗಂಡು ದೆವ್ವ ಅಂತೆ, ಆದ್ರಿಂದ ನಮಗೆಲ್ಲ ಭಯವಿಲ್ಲ, ಅದು ನಮ್ಮನ್ನೇನೂ ಮಾಡೊಲ್ಲ ! "

ಈ ಮಾತನೆಲ್ಲ ಕೇಳಿ ಸದಾಶಿವನಿಗೆ ಆ ಕ್ಷಣಕ್ಕೆ ಹೊಟ್ಟೆ ಬಿರಿಯುವಂತೆ ನಗು ಬಂದರೂ, ನಗುವಿನ ಅಬ್ಬರದ ಹಿಂದೆ ಇಷ್ಟಕ್ಕೆಲ್ಲ ಕಾರಣವಾದ ಅಂದಿನ ಘಟನೆಗಳನ್ನು ನೆನೆದು ಅವನ ಮನಸ್ಸು ಲೀಲಾವತಿಗಾಗಿ ಮುಮ್ಮಲ ಮರುಗಿತು. ಲೀಲಾವತಿ ಈ ವಿಷಯಗಳನ್ನು ಏಕಿಷ್ಟು ತಲೆಗೆ

ಹಚ್ಚಿಕೊಂಡಳೆಂಬುದು ಅವನಿಗೆ ಅರ್ಥವಾಗಲಿಲ್ಲ. ಸುಖದ ಸುಪ್ಪತ್ತಿಗೆಯಲ್ಲಿ ಬೆಳೆದ ಅವಳಿಗೆ ಬಾಳಿನಲ್ಲಾದ ಒಂದೇ ಒಂದು ಪರಾಭವ ಅವಳ ಜೀವನದಲ್ಲಿ ಮಹತ್ತರ ಕ್ಷೋಭೆಯನ್ನು ಉಂಟುಮಾಡಿತ್ತು. ಅವನ್ನು ನೆನೆದು ಅವಳಿಗಾಗಿ ಕನಿಕರಪಟ್ಟ.

ಸುಮಿತ್ರೆ ತಮ್ಮನ ಮುಂಜಿಯನ್ನು ಮುಗಿಸಿಕೊಂಡು ನಾರಾಯಣನೊಡನೆ ಮೈಸೂರಿಗೆ ಬಂದಳು. ಮತ್ತೆ ಸದಾಶಿವನ ಮನೆ ಬೆಳಕಿನಿಂದ ತುಂಬಿಕೊಂಡಿತು. ಆದರೆ ಅವನ ಮನಸ್ಸು ಮಾತ್ರ ಇನ್ನೂ ಬೇಕೋ ಎನ್ನುತ್ತಿತ್ತು. ಲೀಲಾವತಿಯು ತನ್ನ ಬೇಸಿಗೆಯ ಶಿಬಿರದಿಂದ ಬರುವ ತನಕ ಅವನ ಮನಸ್ಸಿನ ಅಶಾಂತಿ ಹೋಗಲಿಲ್ಲ. ಲೀಲಾವತಿಯ ಬಗ್ಗೆ ಅವನು ಅಷ್ಟೊಂದು ಮನಸ್ಸಿಗೆ ಹಚ್ಚಿಕೊಂಡಿದ್ದ.

ಲೀಲಾವತಿಗೆ ನಂದಿಯ ವಾಸ ತುಂಬಾ ಒಳ್ಳೆಯದನ್ನು ಮಾಡಿತು. ಅಲ್ಲಿನ ನಿಶ್ಶಬ್ದ ವಾತಾವರಣ ಅವಳಿಗೆ ಕಳೆದುಕೊಂಡಿದ್ದ ಮನಶ್ಶಾಂತಿಯನ್ನು ಮರಳಿ ತಂದುಕೊಟ್ಟಿತು. ನಿಸರ್ಗದ ರಮಣೀಯತೆಯಲ್ಲಿ, ಅಲ್ಲಿಗೆ ತಮ್ಮಂತೆಯೇ ಬೇಸಿಗೆಯನ್ನು ಕಳೆಯಲು ಬಂದಿದ್ದ ಇತರ ಪ್ರವಾಸಿಗಳೊಡನೆ ಆಟ ಪಾಠ ವಿನೋದಗಳಲ್ಲಿ ಅವಳ ಮನಸ್ಸಿನ ಮುಜುಗರವೆಲ್ಲ ಕಳೆದುಹೋಗಿ ಅವಳಲ್ಲಿ ಹೊಸ ಉತ್ಸಾಹ ಬಂದಿತ್ತು. ಲೀಲಾವತಿ ಹೇಗೆ ಸಾಹಿತ್ಯ ಅಭಿಮಾನಿಯೋ ಹಾಗೆಯೇ ಕ್ರೀಡಾಭಿಮಾನಿ. ಅವಳಿಗೆ ಟೆನಿಸ್ಸೆಂದರೆ ಪ್ರಾಣ. ಅವಳು ನಂದಿಗೂ ತನ್ನ ರಾಕೆಟ್ಟುಗಳನ್ನು ತೆಗೆದುಕೊಂಡು ಹೋಗುವುದನ್ನು ಮರೆತಿರಲಿಲ್ಲ. ಅವಳು ತನ್ನ ರಾಕೆಟ್ಟುಗಳನ್ನು ತೆಗೆದುಕೊಂಡು ಹೋದದ್ದು ಒಳ್ಳೆಯದೇ ಆಯಿತು. ಬೆಟ್ಟದ ಮೇಲೆ ಟ್ರಾವಲರ್ಸ್ ಬಂಗಲೆಯ ಬಳಿಯಲ್ಲೇ ಉತ್ತಮ ರೀತಿಯ ಟೆನಿಸ್ ಕೋರ್ಟ್ ಇತ್ತು. ಆದರೆ ಅದು ಹೆಚ್ಚು ಬಳಕೆಯಲ್ಲಿ ಇರಲಿಲ್ಲ. ಲೀಲಾವತಿ ಹೋದವಳೇ ಟೆನಿಸ್‌ಕೋರ್ಟನ್ನು ಸ್ವಚ್ಛಗೊಳಿಸಿ, ಅಲ್ಲಿನ ಕ್ಲಬ್‌ನಲ್ಲಿದ್ದ ನೆಟ್, ರಾಕೆಟ್ಟು ವಗೈರೆ ಹೊರಗೆ ತೆಗೆಸಿ, ಅಲ್ಲಿ ಇದ್ದ ಕ್ರೀಡಾಸಕ್ತ ಪ್ರವಾಸಿಗಳ ಒಂದು ಟೀಮನ್ನೇ ಆರಂಭಿಸಿದಳು. ಅಲ್ಲಿದ್ದ ನಾಲ್ಕಾರು ಯುರೋಪಿಯನ್ ಕುಟುಂಬದವರು, ಶ್ರೀಮಂತ ಹಾಗೂ ಅಧಿಕಾರ ವರ್ಗದವರು

ಅವಳೊಂದಿಗೆ ಸಹಕರಿಸಿದರು. ಇದರಿಂದಾಗಿ ಲೀಲಾವತಿಯ ಹೊತ್ತು ವಿನೋದವಾಗಿ ಕಳೆದುಹೋಗಿತ್ತು.

ಲೀಲಾವತಿ ಮೈಸೂರಿಗೆ ಬರುವ ವೇಳೆಗೆ ಸುಮಿತ್ರೆ ಬಂದು ಬಹಳ ದಿನಗಳಾಗಿತ್ತು. ಲೀಲಾವತಿಯನ್ನು ನೋಡುತ್ತಲೇ ಸುಮಿತ್ರೆ

"ಒಂದೇ ತಿಂಗಳಿಗೆ ಅದೆಷ್ಟು ಬದಲಾಗಿದ್ದಿ, ಲೀಲಾ?" ಎಂದಳು.

"ಎಷ್ಟು ಬದಲಾಗಿದ್ದೇನೆ?"

"ಗುರುತು ಸಿಗದಷ್ಟು!"

"ನನ್ನನ್ನು ಮರೆಯಲು ಇದೆಲ್ಲ ಉಪಾಯ!"

"ಏಕೆ?"

"ಇನ್ನೇನು ಒಂದು ತಿಂಗಳಾದರೂ ನೀನು ನನಗೆ ಒಂದು ಕಾಗದ ವನ್ನೂ ಬರೆಯಲಿಲ್ಲ. ಮುಂಜಿ ಹೇಗೆ ಆಯಿತು. ಊರಿನಿಂದ ನೀನು ಎಂದು ಬಂದಿ! ಯಾವುದನ್ನೂ ಬರೆಯಲೇ ಇಲ್ಲ?"

ಎಂದು ಆಕ್ಷೇಪಣೆ ಮಾಡಿ ಎಲ್ಲರ ಕ್ಷೇಮ ವಿಚಾರಿಸಿಕೊಂಡಳು. ಅವಳು ಸುಮಿತ್ರೆಯೊಂದಿಗೆ ಮಾತನಾಡುತ್ತಿದ್ದಂತೆ ಆಟವಾಡುತ್ತಿದ್ದ ಬಾಲ ಚಂದ್ರ ಅಲ್ಲಿಗೆ ಬಂದ.

"ಬಾಲು ನೋಡು. ನಿನ್ನ ದೊಡ್ಡಮ್ಮ ಬಂದಿದ್ದಾಳೆ!" ಎಂದಳು. ಆ ತುಂಟ ಲೀಲಾವತಿಯ ಕಡೆಗೊಮ್ಮೆ ನೋಡಿ ಸಂತೋಷದಿಂದ ಮುಖ ವರಳಿಸಿದ. ಅವಳಿಗೆ ಬಾಲಚಂದ್ರನನ್ನು ಎತ್ತಿಕೊಂಡು ಮುದ್ದು ಮಾಡ ಬೇಕೆನಿಸಿ ಅವನನ್ನು ಬಳಿಗೆ ಕರೆದಳು. ಬಾಲಚಂದ್ರ ಬಳಿಗೆ ಬರಲಿಲ್ಲ.

"ಹೋಗು ಬಾಲು, ನಿನ್ನ ದೊಡ್ಡಮ್ಮ ಮಿಠಾಯಿ ಕೊಡ್ತಾಳೆ ಹೋಗು!" ಎಂದಾಗಲೇ ಅವನು ಲೀಲಾವತಿಯ ಬಳಿಗೆ ಹೋದದ್ದು. ಲೀಲಾವತಿ ಅವನನ್ನು ಎತ್ತಿಕೊಂಡು ಮುದ್ದಾಡುತ್ತ ಹೇಳಿದಳು.

"ನಮ್ಮ ಬಾಲುಗೆ ವರ್ಷ ಆಯಿತಲ್ಲವೆ?"

"ಇನ್ನು ಎಲ್ಲಿ ಬಂತಮ್ಮ. ನಾಳೆ ಹುಣ್ಣಿಮೆಗೆ ಹನ್ನೊಂದು ತಿಂಗಳು ತುಂಬುತ್ತೆ" ಎಂದಳು.

"ನೀವು ಸಂಸಾರ ಹೂಡಿ ಹತ್ತು ತಿಂಗಳೂ ಆಗಲಿಲ್ಲವಲ್ಲ ಆಗಲೇ...."

ಅವಳಿಗೆ ಮಾತನಾಡಲು ಅವಕಾಶಕೊಡದೆ ಸುಮಿತ್ರೆ "ಥೂ ಗಂಡುಬೀರಿ" ಎಂದು ಬೈದಳು. ಇದೇ ವೇಳೆಗೆ ಅಲ್ಲಿ ಸದಾಶಿವ ಕಾಣಿಸಿಕೊಂಡ. ಅವನನ್ನು ನೋಡುತ್ತಲೂ ಲೀಲಾವತಿಯ ಮುಖ ಲಜ್ಜೆಯಿಂದ ಕೆಂಪಾಯಿತು. ಮರು ಕ್ಷಣದಲ್ಲಿ ಮುಖ ಗಂಭೀರವಾಗಿ, ಕಡೆಗೆ ಗಂಟಿಕ್ಕಿತು. ಸದಾಶಿವ ಲೀಲಾವತಿ ಯನ್ನು ಮಾತನಾಡಿಸಲು ಹೋಗಲಿಲ್ಲ. ಅವನು ಕ್ಷಣಕಾಲ ಲೀಲಾವತಿಯನ್ನು ದಿಟ್ಟಿಸಿನೋಡಿ, ತಲೆತಗ್ಗಿಸಿ ಮನೆಯೊಳಗೆ ನಡೆದು ಬಿಟ್ಟ. ಲೀಲಾವತಿ ಎತ್ತಿ ಕೊಂಡಿದ್ದ ಮಗುವನ್ನು ಕೆಳಗೆ ಇಳಿಸಿ ಹೊತ್ತಾಯಿತೆಂದು ಹೇಳಿ ಮನೆಯ ಕಡೆ ಹೊರಟುಬಿಟ್ಟಳು. ಇಬ್ಬರಿಗೂ ಆ ಕ್ಷಣಕ್ಕೆ ಆ ದಿನದ ದುಃಸ್ವಪ್ನ ನೆನಪಾಗಿತ್ತು. ಅಂತಲೇ ಇಬ್ಬರೂ ಅಪರಿಚಿತರೆಂಬಂತೆ ವರ್ತಿಸಿದ್ದರು.

ಈಗ ಲೀಲಾವತಿ ಸುಮಿತ್ರೆಯ ಮನೆಗೆ ಹೆಚ್ಚಾಗಿ ಬರುತ್ತಿರಲಿಲ್ಲ. ಬಂದರೂ ಸದಾಶಿವನಿಲ್ಲದ ವೇಳೆಯಲ್ಲಿ ಬಂದು ಸುಮಿತ್ರೆಯೊಂದಿಗೆ ನಾಲ್ಕು ಮಾತು ಹರಟುತ್ತಿದ್ದು ಹೊರಟು ಹೋಗುತ್ತಿದ್ದಳು. ಸದಾಶಿವ ಅವಳ ಮನಸ್ಸಿನ ಸೀಮೆಯಿಂದ ಮೆಲ್ಲಮೆಲ್ಲನೆ ಜಾರಿಕೊಳ್ಳುತ್ತಿದ್ದ. ತಾನು ಸದಾ ಶಿವನಿಗೆ ಬೇಡವಾದ **ಮೇಲೆ** ತನಗೂ ಅವನು ಬೇಡವೆನ್ನುವ ವೈರಾಗ್ಯ ಅವಳಲ್ಲಿ ಬಂದಿತ್ತು. ತನಗಿದ್ದ ಅನೇಕ ಕೆಲಸಕಾರ್ಯಗಳ ನಡುವೆ ಸದಾಶಿವನ ನೆನಪನ್ನು ಪೂರ್ಣವಾಗಿ ಅಳಿಸಿಬಿಡಲು ನೋಡಿದಳು. ಬೆಳಗಾದರೆ ಕಾಲೇಜು, ಸಂಜೆ ಕಾಸ್ಮೊಪಾಲಿಟನ್ ಕ್ಲಬ್ಬಿನಲ್ಲಿ ಟೆನಿಸ್ ಆಟ, ಇಲ್ಲವೇ ತಂದೆಯೊಡನೆ ವಾಯುವಿಹಾರ. ಇದರ ಮೇಲೆ ಅವಳ ಪ್ರಿಯವಾದ ಗ್ರಂಥರಾಶಿ ಇದ್ದೇ ಇತ್ತು. ಅವಳು ಯಾವದಾದರೊಂದು ಕಥೆ ಕಾದಂಬರಿ ಯನ್ನು ಹಿಡಿದು ಕುಳಿತರೆ ತನ್ನನ್ನೇ ಮರೆತು ಬಿಡುತ್ತಿದ್ದಳು. ಎಂದಮೇಲೆ ಸದಾಶಿವನನ್ನು ಮರೆಯಲು ಬಂತೆ? ಹೀಗಾಗಿ ಕೆಲವು ಕಾಲದಲ್ಲೇ ಸದಾ ಶಿವನೂ ದಿವಾಕರನಂತೆ ಎಂದಾದರೊಮ್ಮೆ ನೆನಪು ಬಂದಾಗ ಸುಳಿಯುವ ವ್ಯಕ್ತಿಯಾದ. ಇಷ್ಟಾದರೂ ಅವರಿಬ್ಬರನ್ನು ಅವಳು ಸಂಪೂರ್ಣವಾಗಿ ಮರೆಯಲು ಸಾಧ್ಯವಾಗಲಿಲ್ಲ. ದಿವಾಕರ ಸದಾಶಿವರು ಲೀಲಾವತಿಯ ಜೀವನದಲ್ಲಿ ಕಾಣಿಸಿಕೊಂಡಿದ್ದ ಅಪೂರ್ವವಾದ ತಾರೆಗಳು. ಒಬ್ಬನು ಲೀಲಾವತಿಯ ಪ್ರೇಮಪೂಜೆಗೆ ಅರ್ಹನಾಗಿದ್ದ, ಇನ್ನೊಬ್ಬನು ಕಾಮಪೂಜೆಗೆ

ಅರ್ಜನಾಗಿದ್ದ. ಒಬ್ಬ ತನ್ನ ನಿರ್ಮಲ ಪ್ರೇಮದಿಂದ ಲೀಲಾವತಿಯ ಹೃದಯದಲ್ಲಿ ನೆಲೆಗೊಂಡಿದ್ದ. ಇನ್ನೊಬ್ಬ ತನ್ನ ಸುಂದರ ಕಾಯದಿಂದ ಲೀಲಾವತಿಯ ಮನಸ್ಸಿನಲ್ಲಿ ಸುಪ್ತವಾಗಿದ್ದ ಬಯಕೆಗಳನ್ನು ಕೆರಳಿಸಿದ್ದ. ಇಬ್ಬರೂ ಅವಳ ಜೀವನದಲ್ಲಿ ಮರೆಯಲಾಗದ ವ್ಯಕ್ತಿಗಳು. ಇವರಲ್ಲಿ ಇಬ್ಬರನ್ನು ಮದುವೆಯಾಗಿದ್ದರೂ ಲೀಲಾವತಿಯ ಬಾಳು ತುಂಬಿ ಬರುತ್ತಿರಲಿಲ್ಲ. ದಿವಾಕರನ ದೈವಿಕಪ್ರೇಮ, ಸದಾಶಿವನ ಮನ್ಮಥಸಾದೃಶ ರೂಪ, ಇವು ಎರಡನ್ನು ತನ್ನಲ್ಲಿ ಸಮನ್ವಯಗೊಂಡ ವ್ಯಕ್ತಿಯೇ ಲೀಲಾವತಿಯ ಆದರ್ಶ ಪತಿ. ಅಂತಹ ಪತಿ ಲೀಲಾವತಿಗೆ ಸಿಕ್ಕುವಂತಿಲ್ಲ. ಅವಳಿಗೆ ಮದುವೆಯಾಗುವಂತೆ ಇಲ್ಲ. ಇಂತಿರುವಾಗ ಲೀಲಾವತಿಯ ಜೀವನದಲ್ಲಿ ಹೊಸ ಪ್ರವಾಹ ಕಾಣಿಸಿಕೊಂಡಿತ್ತು. ಅವಳ ಟೆನಿಸ್ ಆಟದ ಗೆಳೆಯನಾದ ಸುರೇಂದ್ರ ಅವಳ ಬಾಳ ದಿಗಂತದಲ್ಲಿ ಕಾಣಿಸಿಕೊಂಡು ಮೆಲ್ಲ ಮೆಲ್ಲನೆ ತನ್ನ ಪ್ರಭಾವ ಬೀರ ತೊಡಗಿದ್ದ.

ಸುರೇಂದ್ರ ಲೀಲಾವತಿಗೆ ಪರಿಚಯವಾದದ್ದು ಟೆನಿಸ್ ಕೋರ್ಟಿನಲ್ಲಿ. ಲೀಲಾವತಿ ಕಾಸ್ಮೊಪಾಲಿಟನ್ ಕ್ಲಬ್ಬಿನ ಸದಸ್ಯೆಯಾಗುವುದಕ್ಕಿಂತ ಮುಂಚೆ ಕಾಲೇಜಿನ ಟೆನಿಸ್ ಕೋರ್ಟಿನಲ್ಲಿ ಅಭ್ಯಾಸಮಾಡುತ್ತಿದ್ದಳು. ಆಗಲೇ ಸುರೇಂದ್ರನ ಪರಿಚಯವಾದದ್ದು. ಅವಳು ಭಗಿನೀ ಸಮಾಜದ ಕಾರ್ಯದರ್ಶಿನಿಯಾದ ಮೇಲೆ ಸಮಾಜದ ಆವರಣದಲ್ಲಿ ಟೆನಿಸ್ಸನ್ನು ಆರಂಭಿಸಿದ್ದಳು. ಆದರೆ ಭಗಿನೀ ಸಮಾಜದ ಸದಸ್ಯರು ಟೆನಿಸ್ಸಿಗಾಗಿ ತಿಂಗಳು, ತಿಂಗಳಿಗೆ ಹೆಚ್ಚಿನ ಶುಲ್ಕ ಕೊಟ್ಟು, ಆಳುಕಾಳುಗಳನ್ನು ಇಟ್ಟುಕೊಳ್ಳಲಾರದೆ, ಅವರ ಎಲ್ಲ ಉತ್ಸಾಹ ಟೆನಿಸ್ ರಾಕೆಟ್ ಕೊಳ್ಳುವುದರಲ್ಲಿಯೇ ಮುಗಿದಿತ್ತು. ಇದರಿಂದಾಗಿ ಲೀಲಾವತಿ ತನ್ನ ಅಭ್ಯಾಸವನ್ನು ಕಾಲೇಜ್ ಕೋರ್ಟಿನಲ್ಲಿ ಮಾಡುತ್ತಿದ್ದಳು. ಅವಳು ಮಹಾರಾಜ ಕಾಲೇಜಿಗೆ ಬಂದ ಮೇಲೆ ಅವಳ ಕೀರ್ತಿ ವೃದ್ಧಿಸಿತು. ಅವಳು ಸ್ವಲ್ಪ ದಿನಗಳಲ್ಲೇ ಮೈಸೂರಿನಲ್ಲೆಲ್ಲಾ ಹೆಸರು ಪಡೆದ ಉತ್ತಮ ಆಟಗಾರಳಾಗಿದ್ದಳು. ಒಮ್ಮೆ ಮದರಾಸಿಗೆ ಮೈಸೂರಿನ ಪರ ಆಟವಾಡಲು ಹೋದಾಗಲೇ ಸುರೇಂದ್ರನ ಪರಿಚಯ ಗಾಢವಾದದ್ದು.

ಸುರೇಂದ್ರನೊಬ್ಬ ಶ್ರೀಮಂತರ ಪುತ್ರ. ಅವನ ವಯಸ್ಸು ಇನ್ನೂ ನಲವತ್ತರ ಒಳಗೆ ಇದ್ದರೂ ಅವನು ಈ ವೇಳೆಗಾಗಲೇ ಹೆಂಡತಿಯನ್ನು ಕಳೆದು ಕೊಂಡು ವಿಧುರನಾಗಿದ್ದ. ಆವನು ಒಳ್ಳೆ ದೃಢಕಾಯನಾದ ಆಳು. ಅವನು ಸದಾಶಿವನಷ್ಟು ಅಜಾನುಬಾಹುವಾದ ವ್ಯಕ್ತಿಯಾಗಿರದಿದ್ದರೂ ದಿವಾಕರನಷ್ಟು ಕುಳ್ಳಾಗಿರಲಿಲ್ಲ. ಸಾಮಾನ್ಯವಾದ ಎತ್ತರ, ಎತ್ತರಕ್ಕೆ ತಕ್ಕ ಮೈಕಟ್ಟು. ಅವನು ಹಣವಂತರ ಮಗನಾಗಿದ್ದುದರಿಂದ ಬಾಲ್ಯ ದಿಂದಲೂ ಯಾವ ಬಗೆಯ ದೈಹಿಕ ಶ್ರಮದ ಕೆಲಸಗಳನ್ನೂ ಮಾಡದೆ ಇದ್ದು ದರಿಂದ ಅವನ ಮೈ ಕೋಮಲವಾಗಿತ್ತು. ಅವನು ಎರಡು ವರಸೆ ಟೆನಿಸ್ ಆಡಿದನೆಂದರೆ ಅಷ್ಟಕ್ಕೇ ಸುಸ್ತಾಗಿಬಿಡುತ್ತಿದ್ದ. ಲೀಲಾವತಿ ಕಾಸ್ಮೊ ಪಾಲಿಟನ್ ಕ್ಲಬ್ಬಿನ ಸದಸ್ಯೆಯಾದ ಮೇಲೆ ಸಾಮಾನ್ಯವಾಗಿ ಅವನ ವಿರೋಧವಾಗಿ ಆಡಿ ಅವನನ್ನು ಅತ್ತಿಂದಿತ್ತ, ಇತ್ತಿಂದತ್ತ ಓಡಿಸಿ ದಣಿಸು ವುದರಲ್ಲಿ ಹೆಚ್ಚಿನ ಸಂತೋಷ ಹೊಂದುತ್ತಿದ್ದಳು. ಸುರೇಂದ್ರನಿಗೂ ಲೀಲಾ ವತಿಯೊಂದಿಗೆ ಆಟವಾಡಲು ಸದಾ ಹುರುಪು ಬರುತ್ತಿತ್ತು. ಅವನು ಬಾರಿ ಬಾರಿಗೆ ಸೋಲುತ್ತಿದ್ದರೂ ಮತ್ತೆ ಮತ್ತೆ ಆಟವಾಡುವ ಉತ್ಸಾಹ ಉಂಟಾ ಗುತ್ತಿತ್ತು. ಅವನು ಲೀಲಾವತಿಯಿಂದ ಸೋತರೂ ತನ್ನ ಸಂಗಡಿಗರಿಗೆಲ್ಲ ಕಾಸ್ಮೊಪಾಲಿಟನ್ ಕ್ಲಬ್ಬಿನಿಂದ ಸೊಗಸಾದ ಫಲಹಾರ ಕೊಡಿಸುತ್ತಿದ್ದ, ಗೆದ್ದರೂ ಕೊಡಿಸುತ್ತಿದ್ದ. ಹೀಗಾಗಿ ಲೀಲಾವತಿ ಸುರೇಂದ್ರರು ಪ್ರತಿಸ್ಪರ್ಧಿ ಗಳಾಗಿ ರಾಕೆಟ್ ಹಿಡಿದು ನಿಂತರೆಂದರೆ ಅವರ ಗೆಳೆಯ ಗೆಳತಿಯರಿಗೆಲ್ಲ ನೂರ್ಮಡಿ ಉತ್ಸಾಹ ಬರುತ್ತಿತ್ತು.

ಸುರೇಂದ್ರ ಆಗರ್ಭ ಶ್ರೀಮಂತರ ವಂಶಕ್ಕೆ ಸೇರದೆ ಇದ್ದರೂ ಅವನ ತಂದೆ ಶಾಮರಾಯರು ತಾವು ಸಾಯುವ ಮುನ್ನ ಮಗನಿಗೆ ಮೂರುನಾಲ್ಕು ಲಕ್ಷ ರೂಪಾಯಿಯ ಆಸ್ತಿ, ಹೆಸರುಗಳಿಸಿದ್ದ ವ್ಯಾಪಾರ ಸಂಸ್ಥೆ ಬಿಟ್ಟು ಹೋಗಿದ್ದರು. ಅವರು ನಗರದಲ್ಲೆಲ್ಲಾ ಸುಪ್ರಸಿದ್ಧ ಸ್ಟಾಕ್ ಮತ್ತು ಷೇರ್ ಬ್ರೋಕರ್. ಜತೆಗೆ ಲೇವಾದೇವಿ ವ್ಯವಹಾರ ಇಟ್ಟುಕೊಂಡಿದ್ದು ಅಲ್ಪ ಕಾಲದಲ್ಲಿಯೇ ಹೇರಳವಾದ ದ್ರವ್ಯಸಂಪಾದನೆ ಮಾಡಿದ್ದರು. ಅವರಿಗೆ ಲಕ್ಷ್ಮಿಯ ಕಟಾಕ್ಷವಿದ್ದುದರಿಂದ ಬಡವರಾಗಿ ಹುಟ್ಟಿದ ಅವರು ಭಾಗ್ಯವಂತ

ರಾಗಿ ತೀರಿಕೊಂಡಿದ್ದರು. ಅವರು ಹಾಸಿಗೆಯಲ್ಲಿ ನರಳುತ್ತಿದ್ದಾಗ ತಾವು ಹೆಚ್ಚು ಕಾಲ ಉಳಿಯುವುದಿಲ್ಲವೆಂದು ಹೇಗೊ ಹೊಳೆದುಹೋಗಿ ಇನ್ನು ಹದಿನೆಂಟರ ಪ್ರಾಯದ ಕಾಲೇಜು ಹುಡುಗ ಸುರೇಂದ್ರನಿಗೆ ಕುಲೀನ ಮನೆ ತನದಿಂದ ಅವನಿಗೆ ತಕ್ಕ ಹುಡುಗಿಯನ್ನು ತಂದು ವಿವಾಹವನ್ನು ಮಾಡಿ, ಅದನ್ನು ಕಣ್ಣು ತುಂಬಾ ನೋಡಿ ಆನಂದಿಸಿ, ಅದಾದ ಆರು ತಿಂಗಳಿಗೇ ತೀರಿಕೊಂಡಿದ್ದರು. ಇದರಿಂದ ಸುರೇಂದ್ರನಿಗೆ ಬಾಲ್ಯದಲ್ಲಿಯೇ ಸಂಸಾರ ಅತ್ತ ವ್ಯವಹಾರ ಇವು ಎರಡೂ ಗಂಟು ಬಿದ್ದಿತ್ತು. ಅವನು ಆಗಿನ್ನೂ ಇಂಟರ್ ಮೀಡಿಯೇಟ್ ಪರೀಕ್ಷೆಗೆ ಕಟ್ಟಿ ಎರಡು ಬಾರಿ ಫೇಲಾಗಿ ಮೂರನೆಯ ಪ್ರಯತ್ನದಲ್ಲಿ ಇದ್ದ. ಇವನಿಗೆ ತಂದೆ ಸತ್ತಮೇಲೆ ಓದಿನ ಕಡೆ ಮನಸ್ಸು ಹರಿಯದಾಯಿತು. ಇಷ್ಟಕ್ಕೂ ಅವನಿಗೆ ಕೊಂಚವಾದರೂ ಇಷ್ಟವಿಲ್ಲದಿದ್ದ ಪಿ. ಸಿ. ಎಂ. ಜೇರಿ ತಂದೆಯ ಬಲವಂತಕ್ಕೆ ತೆಗೆದುಕೊಂಡಿದ್ದ. ಅದು ತೆಗೆದುಕೊಂಡು ಅವನು ಎಸ್. ಎಸ್. ಎಲ್. ಸಿ. ಪಾಸುಮಾಡಿದುದೇ ಒಂದು ದೊಡ್ಡ ಸಾಹಸವೆನ್ನಬೇಕು. ಕಾಲೇಜಿನಲ್ಲಿ ಅದು ಅವನ ಜನ್ಮ ದ್ವೇಷಿಯಾಗಿ ಅವನನ್ನು ಕಾಡಿತೆನ್ನಬೇಕು. ಅದರ ಕೈಗೆ ಸಿಕ್ಕಿ ಅದನ್ನು ಸೋಲಿಸಿ ಅರಗಿಸಿಕೊಳ್ಳಲಾರದೆ ಎರಡು ಬಾರಿ ಫೇಲಾಗಿದ್ದ. ತಂದೆ ತೀರಿಕೊಂಡ ಮೇಲೆ ಅವನ ವಿದ್ಯಾಭ್ಯಾಸಕ್ಕೆ ತಾನಾಗಿಯೇ ಮುಕ್ತಾಯ ಬಂತು. ಮನೆಯಲ್ಲಿ ತಾಯಿ ಹಾಗೂ ಇತರ ಬಂಧುಮಿತ್ರರು ಅವನು ಪ್ರಾಪ್ತವಯಸ್ಕನಾಗುವ ತನಕ ಓದಿ ತನ್ನ ವ್ಯಾಸಂಗವನ್ನು ಮುಗಿಸಿ, ಅನಂತರ ಸಂಸಾರದ ಕಡೆಗೆ ಗಮನ ಕೊಡಬೇಕೆಂದು ಸಲಹೆ ಮಾಡಿದರೂ ಓದಿನಲ್ಲಿ ಕೊಂಚವೂ ಆಸಕ್ತಿ ಇರದಿದ್ದ ಸುರೇಂದ್ರ ಕಾಲೇಜಿಗೆ ನಮಸ್ಕಾರ ಹೊಡೆದು ತನ್ನ ವ್ಯವಹಾರ ವಹಿವಾಟುಗಳಲ್ಲಿ ಒಮ್ಮನಸ್ಸಿನಿಂದ ಧುಮುಕಿದ. ಅವನು ತಂದೆಯ ಕಾಲದಿಂದಲೂ ಅವರ ಜತೆಗೆ ಓಡಾಡುತ್ತಿದ್ದುದರಿಂದ ವ್ಯಾಪಾರದ ಮರ್ಮ ಅವನಿಗೆ ಗೊತ್ತಾಗಿತ್ತು. ಇದನ್ನು ತನ್ನ ಚಾಕಚಕ್ಯತೆ, ಜಾಣ್ಮೆಯಿಂದ ವೃದ್ಧಿಪಡಿಸಿಕೊಂಡು, ತಂದೆಯ ಕಾಲದಲ್ಲಿ ಯಾವ ರೀತಿಯಲ್ಲಿ ವ್ಯಾಪಾರ ನಡೆಯುತ್ತಿತ್ತೋ ಅದೇ ರೀತಿ ಈಗಲೂ ನಡಸಿಕೊಂಡು ಹೊರಟ. ಅವನ ಜತೆಯಲ್ಲಿದ್ದ ಸಂಗಡಿಗರು ಈ ವಿಷಯ

ದಲ್ಲಿ ಅವನಿಗೆ ತುಂಬಾ ಸಹಾಯ ಮಾಡಿದರು.

ಸುರೇಂದ್ರ ಓದಿನಲ್ಲಿ ಮೊದಲಿನಿಂದ ಹಿಂದಾಗಿದ್ದರೂ ಆಟದಲ್ಲಿ ಯಾವಾಗಲೂ ಮುಂದು. ಅವನ ಪ್ರೀತಿಯ ಆಟ ಕ್ರಿಕೆಟ್, ಮತ್ತು ಟೆನಿಸ್. ಬಾಲ್ಯದಲ್ಲಿ ಕ್ರಿಕೆಟ್‌ನ ಹುಚ್ಚು ವಿಪರೀತವಾಗಿತ್ತು. ಕಾಲೇಜಿಗೆ ಬರುವ ವೇಳೆಗೆ ಇದು ಬಿಟ್ಟು ಹೋಗಿ ಇದರ ಬದಲು ಟೆನಿಸ್ ಹುಚ್ಚು ಹಿಡಿಯಿತು. ಇದರಲ್ಲಿ ಅವನು ಇಡೀ ಕಾಲೇಜಿಗೇ ಚಾಂಪಿಯನ್ ಆದ. ಅವನು ಆಟದಲ್ಲಿ ಎಷ್ಟು ಪ್ರಚಂಡನಾಗಿದ್ದನೋ ನಾಟಕ, ಸಿನಿಮಾ ನೋಡುವುದರಲ್ಲಿಯೂ ಅಷ್ಟೇ ಪ್ರಸಿದ್ಧನಾಗಿದ್ದ. ಸಿನಿಮಾ ನಟ ನಟಿಯರನ್ನು ಅನುಕರಿಸಿ ಹಾಡುವುದು, ಅವರಂತೆ ವೇಷಭೂಷಣಗಳ ಅನುಕರಣ ಇತ್ಯಾದಿ ಗಳಲ್ಲಿ ಅವನು ಎಲ್ಲರನ್ನೂ ಮೀರಿಸಿ ಸಹಾಧ್ಯಾಯಿಗಳಿಂದ 'ಕಾಲೇಜ್ ಸುರೇಂದ್ರ' ಎಂದು ಹೆಸರು ಪಡೆದಿದ್ದ. ಅವನಿಗೆ ಆ ಕಾಲದಲ್ಲಿ ಸುಪ್ರ ಸಿದ್ಧ ನಟನೂ, ಗಾಯಕನೂ ಆಗಿದ್ದ ಸುರೇಂದ್ರನನ್ನು ಕಂಡರೆ ತುಂಬಾ ಇಷ್ಟ. ಅವನಂತೆ ಹಾಡಲು ಸುರೇಂದ್ರ ಪಟ್ಟಪಾಡು ಅಷ್ಟಿಷ್ಟಲ್ಲ. ಅವನ ಸ್ನೇಹಿತರೆಲ್ಲರ ಅಭಿಪ್ರಾಯದಲ್ಲಿ ಸುರೇಂದ್ರ ಸಿನಿಮಾಕ್ಕೆ ಸೇರಿದರೆ ತುಂಬಾ ಒಳ್ಳೆಯ ಭವಿಷ್ಯವಿದೆ ಎಂಬುದಾಗಿತ್ತು. ಅದಕ್ಕೆ ತಕ್ಕಂತೆ ಸುರೇಂದ್ರನ ಸುಂದರವಾದ ಮುಖ, ನಟನಾ ಕೌಶಲ್ಯ, ಇಂಗಿತವನ್ನು ಅರಿತು ಆಡುವ ನಯವಾದ ಮಾತುಗಾರಿಕೆ ಇವುಗಳು ಸಹಕಾರಿಯಾಗಿದ್ದುವು. ಆದರೆ ಸುರೇಂದ್ರನ ಭವಿಷ್ಯ ಸಿನಿಮಾ ಪ್ರಪಂಚಕ್ಕೆ ಮೀಸಲಾಗದೆ ಸ್ಟಾಕ್ ಬ್ರೋಕರ್ ಉದ್ಯಮದಲ್ಲಿ ಮುಗಿದುಹೋಯಿತು. ಅವನು ಆಗಷ್ಟೇ ಮದುವೆಯಾಗಿದ್ದುದಲ್ಲದೆ ತಾಯಿಯನ್ನೂ, ವ್ಯವಹಾರವನ್ನೂ ನೋಡಿ ಕೊಳ್ಳಬೇಕಾಗಿದ್ದುದರಿಂದ. ಸಿನಿಮಾದ ಖಯಾಲಿ ಕೊಂಚ ಕಡಿಮೆ ಯಾಗಲು ಅವನ ಸಹಧರ್ಮಿಣಿ ಬೇರೆ ಕಾರಣಗಳಾಗಿದ್ದಳು. ಆ ಹುಡುಗಿ ತುಂಬಾ ಲಕ್ಷಣವಂತೆ. ಸಿನಿಮಾ ತಾರೆಯರನ್ನು ನಾಚಿಸುವಂತಹ ಸೌಂದರ್ಯ, ಮುಖಭಾವ ಅವಳಲ್ಲಿ ಇತ್ತು. ಅವಳು ಹದಿನೈದು ವರ್ಷದ ತರಳೆಯಿರುವಾಗಲೇ ಅತ್ತೆಯ ಮನೆಗೆ ಬಂದವಳು. ಆಗ ಸುರೇಂದ್ರನಿಗೆ ಇನ್ನೂ ಹತ್ತೊಂಭತ್ತು ವರ್ಷ. ಅವನು ಸಂಸಾರ ಹೂಡಿದ ನಾಲ್ಕೆಂಟು ವರ್ಷ ಅವರ

ಜೀವನ ಸುಖಶಾಂತಿಯ ಆಗರವಾಗಿತ್ತು. ಪ್ರೇಮಮಯವಾಗಿದ್ದ ಅವರ ದಾಂಪತ್ಯಜೀವನದಲ್ಲಿ ಮುಕ್ತಾಫಲಗಳೆಂಬಂತೆ ಮೂವರು ಮಕ್ಕಳು— ಎರಡು ಹೆಣ್ಣು, ಒಂದು ಗಂಡು ಹುಟ್ಟಿದ್ದುವು. ನಾಲ್ಕನೆಯ ಮಗುವಿನ ಹೆರಿಗೆಯಲ್ಲಿ ಸುರೇಂದ್ರನ ಹೆಂಡತಿ ಕ್ಷಯದಿಂದ ತೀರಿಕೊಂಡುಬಿಟ್ಟಳು. ಸುರೇಂದ್ರನಿಗೆ ಆಗ ಇನ್ನೂ ಮೂವತ್ತೈದರ ಪ್ರಾಯ. ಅವನನ್ನೂ ಅವನ ಮಕ್ಕಳನ್ನೂ ಅವಳು ಅನಾಥರನ್ನಾಗಿ ಮಾಡಿ ಹೋಗಿಬಿಟ್ಟಿದ್ದಳು. ಸುರೇಂದ್ರನಿಗೆ ಹೆಂಡತಿಯ ಸಾವಿನಿಂದ ಚೇತರಿಸಿಕೊಳ್ಳಲಾಗದ ಪೆಟ್ಟು ಬಿದ್ದಂತಾಗಿತ್ತು. ಅವನಿಗೆ ಮತ್ತೆ ಮದುವೆಯಾಗಲು ಮನಸ್ಸು ಬರಲಿಲ್ಲ. ಹೆಂಡತಿಯ ಮೇಲೆ, ಅವಳ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳ ಮೇಲೆ ಅವನಿಗೆ ಅಷ್ಟು ಮಮತೆ ಇತ್ತು. ತಾನು ಮತ್ತೆ ಮದುವೆಯಾದರೆ ಅವಳು ತನ್ನ ಮಕ್ಕಳನ್ನು ಸರಿಯಾಗಿ ನೋಡಿಕೊಳ್ಳದೆ ಹೋದರೆ ಎನ್ನುವ ಹೆದರಿಕೆಯಿಂದ ಮತ್ತೆ ಮದುವೆಯಾಗುವ ಸಾಹಸ ಮಾಡಿರಲಿಲ್ಲ. ಅವನ ತಾಯಿ ಪ್ರಾಯದ ಮಗ ಒಂಟಿಯಾಗಿ ಇರುವುದನ್ನು ನೋಡಲಾರದೆ ಎರಡನೆಯ ಮದುವೆಗೆ ಎಷ್ಟೋ ಬಲವಂತಪಡಿಸಿದರು. ಆದರೆ ಸುರೇಂದ್ರ ತಾಯಿಯ ಮಾತನ್ನು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ಅವರೂ ಹೇಳುವಷ್ಟು ಹೇಳಿ ಕಡೆಗೆ ಇಂದಲ್ಲ ನಾಳೆ ತನ್ನ ಒಂಟಿತನದ ಬರಡುತನ ಅರಿವಾಗಿ ಅವನೇ ಮದುವೆಗೆ ಮನಸ್ಸು ಕೊಡುವನೆಂದು ಬಗೆದು ಸುಮ್ಮನಾದರು. ಸುರೇಂದ್ರ ಆದಷ್ಟು ಮಟ್ಟಿಗೆ ಗೃಹಕೃತ್ಯದ ಜಂಜಡದಿಂದ ಹೊರಗಿರಲು ಬಯಸಿ ತನ್ನ ಕಾಲವನ್ನೆಲ್ಲ ತನ್ನ ವ್ಯಾಪಾರಕ್ಕೆ, ಕಾಸ್ಮೊಪಾಲಿಟನ್ ಕ್ಲಬ್, ಟೆನಿಸ್ ಆಟ— ಗೆಳೆಯರ ಕೂಟ, ವಿನೋದಗಳಲ್ಲಿ ಕಳೆಯುತ್ತಿದ್ದ.

ಸುರೇಂದ್ರನ ಜೀವನದಲ್ಲಿ ಕ್ಲಬ್ಬು ಮಹತ್ತರ ಪಾತ್ರ ವಹಿಸಿತ್ತು. ಅವನು ಕ್ಲಬ್ಬಿನ ಆಜೀವ ಸದಸ್ಯರಲ್ಲಿ ಒಬ್ಬನಾಗಿದ್ದ. ಸುರೇಂದ್ರನಂತಹ ಮೇಲ್ತರಗತಿಯ ವ್ಯಕ್ತಿಗಳೇ ಸಾಮಾನ್ಯವಾಗಿ ಅದರ ಸದಸ್ಯರು. ಸರಕಾರಿ ಹಾಗೂ ಖಾಸಗಿ ಗಣ್ಯಪುರುಷರು ತಮ್ಮ ಅಂತಸ್ತಿಗೆ ತಕ್ಕಂತೆ ತಮ್ಮ ಅಭಿರುಚಿ, ವಯಸ್ಸಿಗನುಗುಣವಾಗಿ ಗೆಳೆಯರನ್ನು ಹುಡುಕಿಕೊಂಡು, ತಮ್ಮ ವಿರಾಮವನ್ನು ವಿನೋದವಾಗಿ ಕಳೆಯುತ್ತಿದ್ದರು. ಕ್ಲಬ್ಬಿನಲ್ಲಿ ಅನೇಕ

ಬಗೆಯ 'ಇನ್ ಡೋರ್' ಮತ್ತು 'ಔಟ್ ಡೋರ್' ಆಟಗಳಿಗೆ ಅವಕಾಶವಿತ್ತು. ಇನ್ ಡೋರ್ ಆಟಗಳಲ್ಲಿ ಇಸ್ಪೀಟಿಗೆ ಇದ್ದ ಪಟ್ಟ ಉಳಿದ ಆಟಗಳಿಗೆ ಇರಲಿಲ್ಲ. ಅಂತೆಯೇ ಟೆನಿಸ್ಸಿಗೆ ಇದ್ದ ಪಟ್ಟ ಇತರ ಔಟ್ ಡೋರ್ ಆಟಗಳಿಗೆ ಇರಲಿಲ್ಲವೆನ್ನಬೇಕು. ಸುರೇಂದ್ರ ಹರೆಯದ ಯುವಕನಾದುದರಿಂದ ಇಸ್ಪೀಟಿಗಿಂತಲೂ ಟೆನಿಸ್ಸೇ ಹೆಚ್ಚು ಆಕರ್ಷಕವಾಗಿ ತೋರಿತ್ತು. ಲೀಲಾವತಿಯಂತಹ ಪಾರ್ಟ್‌ನರ್ ಸಿಗಬೇಕಾದರೆ ಕೇಳಬೇಕೆ? ಲೀಲಾವತಿಯ ಜತೆಯಲ್ಲಿ ಹೆಚ್ಚಿನ ಪರಿಚಯ, ಸಲಿಗೆ ಬೆಳೆಸಲೆಂದೇ ಅನೇಕ ಸದಸ್ಯರು ಹೊಸದಾಗಿ ಟೆನಿಸ್ ಕಲಿಯಲು ಆರಂಭಿಸಿದ್ದರೆಂದ ಮೇಲೆ ಲೀಲಾವತಿ ಅಲ್ಲಿನ ಸದಸ್ಯರ ಮೇಲೆ ಎಂತಹ ಪ್ರಭಾವ ಬೀರಿರಬೇಕು ?

ಯಾರ ಮೇಲೆ ಹೇಗೇ ಇರಲಿ. ಸುರೇಂದ್ರನ ಮೇಲೆ ಲೀಲಾವತಿ ವಿಶಿಷ್ಟ ಪ್ರಭಾವ ಬೀರಿದ್ದಳು. ಅವನಿಗೆ ಲೀಲಾವತಿಯ ಪರಿಚಯ, ಸ್ನೇಹ ಹೆಮ್ಮೆಯ ಮಾತಾಗಿತ್ತು. ಅವಳೊಡನೆ ಮಾತನಾಡಲು ಏನೋ ಸಂತೋಷ. ಆಟವಾಡಲು ಏನೋ ಹುರುಪು. ಆದರೂ ಅವನು ಇತರ ಸದಸ್ಯರಂತೆ ಲೀಲಾವತಿಯನ್ನು ಮೇಲೆ ಬಿದ್ದು ಮಾತನಾಡಿಸಲು ಹೋಗುತ್ತಿರಲಿಲ್ಲ. ಲೀಲಾವತಿಯೊಂದಿಗೆ ಹೆಚ್ಚಿನ ಸಲಿಗೆ ಸಂಪರ್ಕ ಇಟ್ಟುಕೊಳ್ಳಬೇಕೆಂಬ ಹೃದಯಾಂತರಾಳದ ಬಯಕೆ ಇದ್ದರೂ ಸ್ವಾಭಾವಿಕವಾಗಿ ಬಂದಿದ್ದ ಸಂಕೋಚ ಅವನು ಲೀಲಾವತಿಯ ಜತೆಯಲ್ಲಿ ಮನಸ್ಸು ಬಂದಂತೆ ವ್ಯವಹರಿಸಲು ಅವಕಾಶಕೊಟ್ಟಿರಲಿಲ್ಲ. ಸದಾ ಹಸನ್ಮುಖಿಯಾಗಿದ್ದು, ಹಿತಮಿತವಾದ ತನ್ನ ಕೃತ್ರಿಮವರಿಯದ ನಡವಳಿಕೆಯಿಂದ ಎಲ್ಲರ ಪ್ರೀತಿಗೌರವಗಳನ್ನು ಸಂಪಾದಿಸಿದ್ದ ಸುರೇಂದ್ರ ಬಹು ಬೇಗನೇ ಲೀಲಾವತಿಯ ಪ್ರೀತಿಗೌರವಗಳಿಗೆ ಪಾತ್ರನಾದ. ಅವನ ಸಂಕೋಚದ ಗೂಡಿನಿಂದ ಹೊರಗೆ ಬರಮಾಡಲು ಲೀಲಾವತಿ ಬೇಕೆಂದೇ ಅವನನ್ನು ತನ್ನ ಜತೆಯಲ್ಲಿ ಆಡಲು ಆಮಂತ್ರಿಸುತ್ತಿದ್ದಳು. ಸುರೇಂದ್ರನಿಗೂ ಇದು ಒಂದು ರೀತಿಯಾಗಿ ಹಿತವಾಗಿಯೇ ಇತ್ತು. ಅವನಿಗೆ ಲೀಲಾವತಿಯ ಮೇಲೆ ಗೆಲ್ಲುವುದಕ್ಕಿಂತ ಅವಳಿಂದ ಸೋಲಿಸಲ್ಪಡುವುದರಲ್ಲಿ ಹೆಚ್ಚಿನ ಆನಂದವಿರುತ್ತಿತ್ತು. ಅವನು ತಾನು ಆಟದಲ್ಲಿ ಸೋಲಲಿ, ಗೆಲ್ಲಲಿ, ಲೀಲಾವತಿಯ

ಆಟವನ್ನು ಮನಸ್ಸಿನಲ್ಲಿಯೇ ಮೆಚ್ಚಿಕೊಳ್ಳುತ್ತಿದ್ದ. ತನ್ನ ಮೆಚ್ಚಿಕೆಯನ್ನು ಬಾಯಲ್ಲಿ ವ್ಯಕ್ತಪಡಿಸಲಾಗದ ಬಿಗುಮಾನ ಅವನದು. ಇದು ಪರೋಕ್ಷ ವಾಗಿ ವ್ಯಕ್ತವಾಗುತ್ತಿತ್ತು. ಲೀಲಾವತಿ ಆಟಕ್ಕೆಂದು ಕೋರ್ಟಿಗೆ ನಡೆದರೆ ಅಲ್ಲಿಯೇ ಕಾಫಿ ತಿಂಡಿಗಳ ಸಮಾರಾಧನೆ ಆಗುತ್ತಿತ್ತು. ಅವಳು ಬಯಸಿ ದಾಗ ಲೈಮ್ ಜ್ಯೂಸ್, ಕ್ರಷ್, ಕಾಫಿ, ಕೋಕೋ ಅಲ್ಲಿ ಸಿದ್ಧವಾಗು ತ್ತಿತ್ತು. ಅನೇಕ ಬಾರಿ ಲೀಲಾವತಿಯನ್ನು ಸುರೇಂದ್ರ ತನ್ನ ಕಾರಿನಲ್ಲಿಯೇ ಅವಳ ಮನೆಗೆ ಕರೆತಂದು ಬಿಟ್ಟುಹೋಗುತ್ತಿದ್ದ. ವಿಶ್ವನಾಥರಾಯರಿಗೂ ಸುರೇಂದ್ರನ ಸರಳ ನಡವಳಿಕೆ ಮನಸ್ಸಿಗೆ ತುಂಬಾ ಹಿಡಿಸಿತ್ತು. ಅವರೂ ಆಗಾಗ್ಗೆ ಅವನ ಗುಣಕಥನವನ್ನು ಮಗಳೊಂದಿಗೆ ಮಾಡದೆ ಇರುತ್ತಿರಲಿಲ್ಲ. ಲೀಲಾವತಿಯ ದೃಷ್ಟಿಯಲ್ಲಿ ಸುರೇಂದ್ರನೊಬ್ಬ ಮಿತ್ರನಾಗಿದ್ದ. ಇದಕ್ಕೂ ಹೆಚ್ಚಿನ ಸ್ಥಾನಮಾನ ದೊರತಿರಲಿಲ್ಲ.

ವಿಶ್ವನಾಥರಾಯರಿಗೆ ಸುರೇಂದ್ರನ ವಿಷಯ ಕೂಲಂಕಷವಾಗಿ ತಿಳಿ ಯುವ ಆಸೆ ಇತ್ತು. ಸುರೇಂದ್ರನ ಪರಿಚಯವಾದಂದಿನಿಂದ ಅವನ ಕುಲ, ಗೋತ್ರ, ಮನೆತನದ ಬಗ್ಗೆ ಎಲ್ಲ ಸಂಗತಿಗಳನ್ನೂ ವಿಚಾರಿಸಿಕೊಂಡಿದ್ದರು. ಅವನ ವಿಷಯದಲ್ಲಿ ಲೀಲಾವತಿ ಎಷ್ಟು ಆಸಕ್ತಿವಹಿಸಿದರೆ ಅಷ್ಟು ಒಳ್ಳೆಯ ದೆಂದು ಅವರ ಅಭಿಪ್ರಾಯ. ಸುರೇಂದ್ರ ಸಿರಿವಂತನಿದ್ದರೂ ಅವನು ಸಿರಿವಂತಿಕೆಯ ಯಾವ ಡಬ್ಬಾಳಿಕೆಯನ್ನೂ ಪ್ರದರ್ಶಿಸದೆ ನಯವಿನಯ ಸಂಪನ್ನನಾಗಿದ್ದುದು ಅವರ ಮನಸ್ಸಿನಲ್ಲಿ ಸದಭಿಪ್ರಾಯ ಮೂಡಿಸಿತ್ತು. ಅಲ್ಲದೆ ಸುರೇಂದ್ರ ಸುಂದರನೂ ದೃಢಕಾಯನೂ ಆಗಿದ್ದ ವ್ಯಕ್ತಿ. ಎಲ್ಲ ರೀತಿಯಲ್ಲಿ ಅವನು ಲೀಲಾವತಿಗೆ ಅನುರೂಪ ವರನೆಂದು ಅವರ ಭಾವನೆ. ತಮ್ಮ ಮನಸ್ಸಿನ ಭಾವನೆಯನ್ನು ಲೀಲಾವತಿಯ ಎದುರು ತೋಡಿಕೊಳ್ಳಲು ಧೈರ್ಯವಿಲ್ಲದೆ, ಪರೋಕ್ಷವಾಗಿ ಅನೇಕ ಬಾರಿ ಅದನ್ನು ವ್ಯಕ್ತಪಡಿ ಸಿದ್ದರು. ಆದರೆ ಲೀಲಾವತಿ ಮಾತ್ರ ಮೊದಲಿನಂತೆಯೇ ಈ ವಿಷಯ ದಲ್ಲಿ ನಿರುತ್ಸಾಹದಿಂದಲೇ ಇದ್ದಳು. ಲೀಲಾವತಿಗೆ ಸುರೇಂದ್ರನ ವಿಷಯ ದಲ್ಲಿ ಯಾವ ಭಾವನೆ ಇದೆ ಎಂಬುದನ್ನು ಪತ್ತೆಮಾಡುವುದು ಅದ ರಿಂದ ಸಾಧ್ಯವಾಗಿರಲಿಲ್ಲ. ಲೀಲಾವತಿ ತನ್ನ ತಂದೆ ಹೇಳುವುದೆಲ್ಲವನ್ನೂ

ಕೇಳಿಕೊಂಡು ಸುಮ್ಮನೆ ನಕ್ಕುಬಿಡುತ್ತಿದ್ದಳು. ಆದರೆ ಸುರೇಂದ್ರನಿಗೆ ಲೀಲಾವತಿಯ ಬಗ್ಗೆ ಯಾವ ಭಾವನೆ ಇದೆ ಎಂಬುದು ಅವರಿಗೆ ಸೂಕ್ಷ್ಮ ವಾಗಿ ತಿಳಿದಿತ್ತು. ಲೀಲಾವತಿ ಅವನನ್ನು ಮದುವೆಯಾಗಲು ಒಪ್ಪುವುದಾ ದರೆ ಅವಳನ್ನು ಮದುವೆಯಾಗಲು ಸುರೇಂದ್ರ ಸಿದ್ಧನಿರುವ ವಿಷಯ ಅವರಿಗೆ ಹೇಗೋ ತಿಳಿದಿತ್ತು. ಆದರೆ ಇವರಿಬ್ಬರಲ್ಲಿ ಸುರೇಂದ್ರನನ್ನು ಒಪ್ಪಿಸುವುದ ಕ್ಕಿಂತಲೂ ಲೀಲಾವತಿಯನ್ನು ಒಪ್ಪಿಸುವುದು ಹೆಚ್ಚು ಕಠಿಣವಾಗಿ ತೋರಿತ್ತು. ಮಗಳಿಗೆ ತಮ್ಮ ಮನಸ್ಸಿನಲ್ಲಿರುವ ವಿಷಯವನ್ನು—ನೀನು ಸುರೇಂದ್ರನನ್ನು ವಿವಾಹವಾಗು—ಎನ್ನುವ ವಿಷಯವನ್ನು ನಿಷ್ಠುರವಾಗಿ ತಿಳಿಸಿಬಿಡುವ ಧೈರ್ಯವಿರಲಿಲ್ಲ. 'ನನ್ನ ಮದುವೆಯ ಗೋರಿಯ ಮೇಲೆ ನಿನ್ನ ಸುಖದ ಸೌಧವನ್ನು ಕಟ್ಟುವ ಆಸೆ ಇದ್ದರೆ ನಾನು ಮದುವೆಗೆ ಸಿದ್ಧಳಿದ್ದೇನೆ' ಎನ್ನುವ ಲೀಲಾವತಿಯ ಮಾತು ಅವರ ಧೈರ್ಯವನ್ನೆಲ್ಲಾ ಉಡುಗಿಸಿತ್ತು. ಮಗಳ ಮೇಲಿನ ಪ್ರೀತಿ ಮಗಳಿಗೆ ಈ ಮಾತು ಹೇಳಿ ಅವಳ ಮನಸ್ಸನ್ನು ನೋಯಿಸಲು ಹಿಮ್ಮೆಟ್ಟಿಸುತ್ತಿತ್ತು. ಹಾಗಾಗಿ ಅವರು ಯಾವ ವಿಷಯ ವನ್ನೂ ಪ್ರಸ್ತಾಪಮಾಡದೆ ಸುಮ್ಮನಿದ್ದರು.

ಸುರೇಂದ್ರನ ವಿಷಯವೂ ಹೀಗೇ ಆಗಿತ್ತು. ಅವನಿಗೆ ಲೀಲಾವತಿಯ ಮೇಲೆ ಒಂದು ಬಗೆಯ ಅಭಿಮಾನ ಉಂಟಾಗಿದ್ದು ಅದು ಕ್ರಮೇಣ ಅನು ರಾಗವಾಗಿ ಮಾರ್ಪಾಟಾಗಿತ್ತು. ಅವಳ ಬಗ್ಗೆ ತನಗೆ ಪ್ರೇಮಾಂಕುರವಾಗಿದೆ ಎಂಬುದನ್ನು ತಿಳಿಯಲು ಅವನಿಗೆ ಹೆಚ್ಚು ಕಾಲ ಬೇಕಾಗಲಿಲ್ಲ. ಅವನು ಲೀಲಾವತಿಯನ್ನು ಮದುವೆಯಾಗಲು ಆಸೆಪಟ್ಟರೂ ವಿದ್ಯಾವತಿಯೂ, ಕುಲೀನ ಮನೆತನದವಳೂ, ರೂಪರಾಣಿಯೂ ಆದ ಲೀಲಾವತಿ ತನ್ನನ್ನು ಕೇವಲ ಇಂಟರ್‌ಮಿಡಿಯೇಟ್ ಓದಿದ, ವಿಧುರನಾದ ತನ್ನನ್ನು ವಿವಾಹ ವಾಗಲು ಸಮ್ಮತಿಸುವಳೇ ಎನ್ನುವ ಶಂಕೆಯಿಂದ ಈ ವಿಷಯವನ್ನು ಬಹಿರಂಗವಾಗಿ ಪ್ರಸ್ತಾಪಿಸಲು ಅಂಜುತ್ತಿದ್ದ. ಅಲ್ಲದೆ ಲೀಲಾವತಿ ಇದು ವರೆಗೆ ಮದುವೆಯಾಗದೆ ಉಳಿದಿರುವುದು, ಮದುವೆಯ ಬಗ್ಗೆ ಅವಳಿಗೆ ಇರುವ ದ್ವೇಷದಿಂದ ಎಂಬುದನ್ನು ಕರ್ಣಾಕರ್ಣಿತವಾಗಿ ಕೇಳಿದ್ದ ಸುರೇಂದ್ರ ಲೀಲಾವತಿಯ ಎದುರಿನಲ್ಲಿ ಈ ಪ್ರಸ್ತಾಪಮಾಡಲು ಹೆದರುತ್ತಿದ್ದ.

ಲೀಲಾವತಿಗೂ ಸುರೇಂದ್ರನ ವಿಷಯದಲ್ಲಿ ಅತಿಶಯವಾದ ಪ್ರೀತಿ ಗೌರವಗಳಿದ್ದುವು. ಸುರೇಂದ್ರನೊಂದಿಗೆ ಮಾತನಾಡುವುದು, ಅವನೊಂದಿಗೆ ಆಟವಾಡುವುದೆಂದರೆ ಅವಳಿಗೆ ತಾನು ಕಾಲೇಜು ಹುಡುಗಿಯರ ಜತೆಯಲ್ಲಿ ಇರುವಂತೆ ಅಷ್ಟೇ ಆತ್ಮೀಯತೆ ಉಂಟಾಗುತ್ತಿತ್ತು. ಅವರಿಗೆ ಪರಸ್ಪರ ಮಾತುಕತೆಗಳಲ್ಲಿ ಅಪೂರ್ವವಾದ ಆನಂದವಿರುತ್ತಿತ್ತು. ಇನ್ನೊಬ್ಬರಿಗೆ ಬೇಸರ ತರುತ್ತಿದ್ದ ಲೀಲಾವತಿಯ ಏಕಪಕ್ಷವಾದ ವಿಚಾರ ಸರಣಿಗೆ ಸುರೇಂದ್ರನ ಜತೆಯಲ್ಲಿ ಮಾತನಾಡುವಾಗ ಹೆಚ್ಚಿನ ಕಳೆ ಇರುತ್ತಿತ್ತು. ತನ್ನ ಮಾತಿಗೆ ಸುರೇಂದ್ರ ನಕ್ಕರೆ ಲೀಲಾವತಿಗೆ ಎಷ್ಟೋ ಉತ್ತೇಜನ. ಅವನು ತಲೆದೂಗಿದರೆ ಇನ್ನಷ್ಟು ಹುರುಪು ಉಂಟಾಗುತ್ತಿತ್ತು. ಹೀಗಿದ್ದರೂ ಸ್ವಂತ ವಿಷಯಗಳನ್ನು ಮಾತನಾಡಲು ಅವರಿಬ್ಬರೂ ಮನಸ್ಸು ಕೊಟ್ಟಿರಲಿಲ್ಲ. ಹೆಂಗಸಾದ ಲೀಲಾವತಿಯೊಂದಿಗೆ ತನ್ನ ಮದುವೆಯ ಸುದ್ದಿಯನ್ನು ತೆಗೆಯಲು ಸುರೇಂದ್ರನಿಂದ ಸಾಧ್ಯವೇ ಇರಲಿಲ್ಲ. ಇದಕ್ಕೆ ಕಾರಣ ಲೀಲಾವತಿಯ ಅಸಾಧಾರಣ ವ್ಯಕ್ತಿತ್ವ. ಲೀಲಾವತಿ ಸಾಮಾನ್ಯ ಹೆಂಗಸಂತೆ ಅಲ್ಲ. ಅವಳಲ್ಲಿ ಅತಿಯಾದ ಲಜ್ಜೆ ನಾಚಿಕೆಗಳು ಇರಲಿಲ್ಲ. ಮಾತಿನಲ್ಲಿ ಕೊಂಕು ಇದ್ದರೂ ಹೃದಯ ಮೃದುವಾಗಿತ್ತು. ಅವಳು ಹಿಂದಿನ ಸಂಪ್ರದಾಯಗಳನ್ನು ತಳ್ಳಿದರೂ ಅವಳ ನಡತೆ ನಿಷ್ಕಳಂಕವಾಗಿತ್ತು. ಅವಳಿಗೆ ಯಾರ ಜತೆಗೆ ಬೇಕಾದರೂ ಧೈರ್ಯವಾಗಿ ಮಾತನಾಡುವ ಛಾತಿ ಇತ್ತು. ತಾನು ಹೆಣ್ಣೆಂಬ ಸಂಕೋಚ ಲವಲೇಶವಾದರೂ ಇರಲಿಲ್ಲ. ಎಷ್ಟೋ ಬಾರಿ ಅವಳ ವಿನೋದಶೀಲತೆಯಿಂದಾಗಿ ಅವಳ ಬಗ್ಗೆ ಜನ ತಪ್ಪು ತಿಳಿಯಲು ಅವಕಾಶ ಕೊಡುತ್ತಿತ್ತು. ಆದರೆ ಅವಳ ಕೊಂಕಿಲ್ಲದ ನಡವಳಿಕೆಯನ್ನು ಕಂಡವರು ಯಾರೂ ಅವಳ ಬಗ್ಗೆ ಶಂಕೆಗೊಳ್ಳುತ್ತಿರಲಿಲ್ಲ. ಅವಳ ಖಂಡಿತ ಮಾತುಗಾರಿಕೆ, ಸ್ಪಷ್ಟೋಕ್ತಿ, ಅನೇಕರನ್ನು ದ್ವೇಷದ ತನಕ ಒಯ್ದರೂ ಅವಳ ಅನೇಕ ಸದ್ಗುಣಗಳಿಗಾಗಿ ಯಾರೂ ಅವಳೊಂದಿಗೆ ಹಗೆತನ ಕಟ್ಟಿಕೊಳ್ಳುತ್ತಿರಲಿಲ್ಲ. ಲೀಲಾವತಿಯನ್ನು ಕಂಡರೆ ಅನೇಕರಿಗೆ ಒಂದು ಬಗೆಯ ಪ್ರೀತಿಗೌರವಗಳಿಗಿಂತಲೂ ಭಯಭಕ್ತಿ. ಅವಳಲ್ಲಿ ದಕ್ಷ ನಾಯಕಿಯಲ್ಲಿ ಇರಬೇಕಾದ ಗುಣಗಳಿದ್ದುವು. ಹೀಗಾಗಿ ಅವಳನ್ನು

ಎಲ್ಲರೂ ಗೌರವಿಸುತ್ತಿದ್ದರು. ತನ್ನ ವ್ಯವಹಾರದಲ್ಲಿ ಕುಶಲೆಯಾದರೂ ಸುರೇಂದ್ರನಿಗೆ ಲೀಲಾವತಿಯ ಬಗ್ಗೆ ಏನೋ ಒಂದು ದೊಡ್ಡ ಭಾವನೆ. ಆದರೂ ಅವಳನ್ನು ಕೈಹಿಡಿಯುವ ಆಸೆಯುಂಟಾಗುತ್ತಿದ್ದುದು ಅವಳ ಸರಳ ಸೌಜನ್ಯ, ಸೌಂದರ್ಯಗಳಿಗಾಗಿ. ಅವನಿಗೆ ಅವಳನ್ನು ಮದುವೆಯಾದರೆ ಅವಳನ್ನು ದೇವಿಯಾಗಿ ಪರಿಗಣಿಸಿ ಪೂಜಿಸುವ ದಾಸನ ಬಯಕೆ ಇತ್ತು. ಅವನಲ್ಲಿ ಅರ್ಪಣ ಭಾವಕ್ಕಿಂತಲೂ ಸ್ವೀಕಾರದ ಭಾವವೇ ಆನಂದದ ನೆಲೆಯಾಗಿತ್ತು. ಇಂಥವನು ಲೀಲಾವತಿ ಹೇಳಿದಂತೆ ಕುಣಿಯುವ ಕೀಲು ಬೊಂಬೆಯೇ ಹೊರತು ಲೀಲಾವತಿಯ ಗಂಡನಾಗಲು ಹೇಗೆ ಸಾಧ್ಯ? ಲೀಲಾವತಿಗೆ ಬೇಕಾಗಿದ್ದುದು ತನ್ನ ಪ್ರೀತಿಯನ್ನು ಸೂರೆಗೊಂಡು, ತನ್ನ ದೇಹ ಮನಸ್ಸುಗಳನ್ನು ತಣಿಸಬಲ್ಲ ಪ್ರಭು ಬೇಕಾಗಿತ್ತೇ ಹೊರತು ತನ್ನನ್ನು ಆರಾಧಿಸುವ ಭಕ್ತನು ಬೇಕಾಗಿರಲಿಲ್ಲ. ತನ್ನ ಪ್ರೀತಿಯ ಆಳವನ್ನು ಬಲ್ಲ ಅಂತಹ ಪ್ರೇಮಿ ದಿವಾಕರನಾಗಿದ್ದ. ತನ್ನ ದೇಹವನ್ನು ಆಳಬಲ್ಲ ಅಂತಹ ಗಂಡು ಸದಾಶಿವನಾಗಿದ್ದ. ಆದರೆ ಸುರೇಂದ್ರನಲ್ಲಿ ಅವಳಿಗೆ ಕಂಡದ್ದು ಸ್ವಾಮಿಭಾವಕ್ಕಿಂತಲೂ ದಾಸಭಾವ. ಇಂಥವನಿಗೆ ಲೀಲಾವತಿ ತನ್ನನ್ನು ತಾನೇ ಒಪ್ಪಿಸಿಕೊಳ್ಳುವಳೇ? ಸುರೇಂದ್ರನನ್ನು ಮದುವೆಯಾಗುವುದೆಂದರೆ ಮದ್ದು ತುಂಬಿದ ತುಪಾಕಿಯನ್ನು ಮಗುವಿನ ಕೈಗೆ ಕೊಟ್ಟಂತೆ. ಕೋವಿ ಹಿಡಿಯಲು ಸಮರ್ಥನಾದ ವ್ಯಕ್ತಿಯ ಕೈಗೆ ಕೋವಿ ದೊರೆತರೆ ಗುಂಡು ಗುರಿ ಮುಟ್ಟೀತು. ಆದರೆ ದುರ್ಬಲನಾದ ಮಗುವಿನ ಕೈಗೆ ಕೋವಿ ಕೊಟ್ಟರೆ ಹಾರಿಸಿದಾಗ ಗುಂಡು ಹಾರುವುದೇ ಹೊರತು ಉದ್ದೇಶ್ಯ ಸಾರ್ಥಕವಾಗಲಾರದು. ಲೀಲಾವತಿಯ ವ್ಯಕ್ತಿತ್ವ ಕತ್ತಿಯಂತೆ ಹರಿತವಾದದ್ದು. ಧೀರನ ಕೈಗೆ ಸೇರಿದರೆ ವಜ್ರಾಯುಧ! ಹೇಡಿಯ ಕೈಗೆ ಸೇರಿದರೆ ಕೆಲಸಕ್ಕೆ ಬಾರದ ಉಕ್ಕಿನ ಚೂರು! ತಾನು ಈ ಜನ್ಮದಲ್ಲಿ ಮದುವೆಯಾದರೆ ಸರಿಯಾದ ಪುರುಷನನ್ನೇ ಆಗಬೇಕು. ಇಲ್ಲವಾದರೆ ಕಡೆ ತನಕ ಹೀಗೆಯೇ ಇದ್ದು ಬಿಡಬೇಕೆಂಬುದೇ ಲೀಲಾವತಿಯ ಸಂಕಲ್ಪ. ಇಂಥ ವಿಚಾರವುಳ್ಳ ಲೀಲಾವತಿಗೆ ಸುರೇಂದ್ರ ಯೋಗ್ಯಪತಿಯಾಗಬಲ್ಲನೆ? ಈ ಪ್ರಶ್ನೆಗೆ ವಿಶ್ವನಾಥ ರಾಯರು ಲೀಲಾವತಿ ಅನುಮತಿ ಇತ್ತರೆ—ಸುರೇಂದ್ರ ಯೋಗ್ಯ ಗಂಡ

ನಾಗಬಹುದೆಂದು ಉತ್ತರ ಹೇಳಿದ್ದರು. ಸುರೇಂದ್ರನೂ, ಲೀಲಾವತಿ
ಹಾಗೂ ವಿಶ್ವನಾಥರಾಯರು ಸಮ್ಮತಿಸಿದರೆ ತಾನು ಅವಳನ್ನು ಮದುವೆ
ಯಾಗುವುದಾಗಿ ಉತ್ತರ ಕೊಟ್ಟುಕೊಂಡಿದ್ದ. ಆದರೆ ಈ ಪ್ರಶ್ನೆಗೆ
ಲೀಲಾವತಿಯ ಉತ್ತರ ಮಾತ್ರ ಇನ್ನೂ ಸಿದ್ಧವಾಗಿರಲಿಲ್ಲ.

ಹೀಗಿರುವಾಗ ಒಂದು ದಿನ ಲೀಲಾವತಿ ವಿಶ್ವನಾಥರಾಯರು
ಸುರೇಂದ್ರನ ಮನೆಗೆ ಊಟಕ್ಕೆ ಹೋಗಬೇಕಾಯಿತು. ಸುರೇಂದ್ರ ವಿಶ್ವ
ನಾಥರಾಯರು ಹಾಗೂ ಲೀಲಾವತಿಯನ್ನು ತನ್ನ ಮನೆಗೆ ಬರಬೇಕೆಂದು
ಅನೇಕ ಬಾರಿ ಕರೆದಿದ್ದರೂ ಅವರಿಬ್ಬರಿಗೂ ಸುರೇಂದ್ರನ ಮನೆಗೆ ಹೋಗುವ
ಅವಕಾಶ ಬಂದಿರಲಿಲ್ಲ. ಈ ಬಾರಿ ಸುರೇಂದ್ರ ತನ್ನ ಎರಡನೆ ಮಗಳ
ಹತ್ತು ವರ್ಷದ ಹೆಚ್ಚು ನಡಸುವಂದು ಅವರಿಬ್ಬರನ್ನು ತನ್ನ ಮನೆಗೆ ಕರೆದಿದ್ದ.
ಅಂದಿನ ಉತ್ಸವಕ್ಕೆ ಸುರೇಂದ್ರನ ಮಿತ್ರರೂ ಸಂಬಂಧಿಕರೂ ಅನೇಕರೂ
ಆಗಮಿಸಿದ್ದರು. ಸುರೇಂದ್ರ ಎಲ್ಲರನ್ನೂ ಭೋಜನದ ವೇಳೆಗೆ ಆಹ್ವಾನಿಸಿ
ದ್ದರೆ, ಲೀಲಾವತಿ ವಿಶ್ವನಾಥರಾಯರನ್ನು ಬೆಳಗಿನ ಫಲಾಹಾರಕ್ಕೇ ತಮ್ಮ
ಮನೆಗೆ ಬಂದುಬಿಡಲು ಹೇಳಿದ್ದ. ವಿಶ್ವಾಸದ ಆಣತಿಯನ್ನು ಒಪ್ಪಿ
ಅವರಿಬ್ಬರೂ ಆ ದಿನ ಹೇಳಿದ್ದ ವೇಳೆಗೆ ಮನೆಗೆ ಬಂದರು. ಅದೇನು
ಕಾರಣವೋ ಈ ಬಾರಿ ವಿಶ್ವನಾಥರಾಯರು ಮಗಳ ಸಿಂಗಾರದ ವಿಷಯ
ದಲ್ಲಿ ಆಸಕ್ತಿವಹಿಸಿ, ಅವಳು ಯಾವ ಸೀರೆ ಉಟ್ಟರೆ ಚೆನ್ನ, ಹೇಗೆ ಬಾಚಿ
ಕೊಂಡರೆ ಚೆನ್ನ, ಎಂಬೆಲ್ಲ ವಿಷಯಗಳಲ್ಲಿ ತಮ್ಮ ಸಲಹೆ ಕೊಟ್ಟಿದ್ದರು.
ತಂದೆಯ ಮನಸ್ಸು ನೋಯಿಸಬಾರದೆಂದು ಅವರು ಹೇಳಿದ ರೀತಿ
ಯಲ್ಲಿಯೇ ಶೃಂಗಾರವಾಗಿ ಸುರೇಂದ್ರನ ಮನೆಗೆ ನಡೆದಿದ್ದಳು. ಆ ಉಡುಪಿ
ನಲ್ಲಿ ಲೀಲಾವತಿ ತುಂಬಾ ಚೆಲುವೆಯಾಗಿ ಕಾಣುತ್ತಿದ್ದಳು.

ಸುರೇಂದ್ರನ ಮನೆಗೆ ಲೀಲಾವತಿ ನವಯುವತಿಯಾಗಿ ಬಂದಾಗ
ಸುರೇಂದ್ರನ ತಾಯಿಯೇ ಬಾಗಿಲಿಗೆ ಬಂದು ಅವಳನ್ನು ಆದರದಿಂದ ಬರ
ಮಾಡಿಕೊಂಡು ಒಳಗೆ ಕರೆದುಕೊಂಡು ಹೋದರು. ಸುರೇಂದ್ರ ಅವರಿಬ್ಬರ
ಪರಿಚಯವನ್ನು ತನ್ನ ತಾಯಿಗೆ ಮಾಡಿಕೊಟ್ಟ. ಸುರೇಂದ್ರನ ತಾಯಿ ಹಳೆಯ
ಕಾಲದ ಶಿಷ್ಟಾಚಾರದ ಹೆಣ್ಣು. ಆಕೆಗೆ ಲೀಲಾವತಿಯನ್ನು ಕಂಡು ಅದೇ

ನೆನಸಿತೋ ಒಮ್ಮೆಲೇ ವಿಶ್ವನಾಥರಾಯರನ್ನು ಪ್ರಶ್ನಿಸಿದ್ದರು.

"ನಿಮ್ಮ ಹುಡುಗಿಯನ್ನು ಎಲ್ಲಿಗೆ ಕೊಟ್ಟಿದೆ? ಅವರ ಯಜಮಾನರಿಗೆ ಏನು ಕೆಲಸವಿದೆ? ಎಷ್ಟು ಸಂಬಳ? ಎಷ್ಟು ಮಕ್ಕಳು?" ಇತ್ಯಾದಿ ಪ್ರಶ್ನೆಗಳನ್ನು ಒಮ್ಮೆಲೇ ಹಾಕಿ ಅಧೀರನನ್ನಾಗಿ ಮಾಡಿದರು. ಆಕೆ ಹಳೆಯ ಸಂಪ್ರದಾಯದ ವ್ಯಕ್ತಿಯಾಗಿದ್ದುದರಿಂದ ಈ ಎಲ್ಲ ವಿಷಯಗಳನ್ನು ನಿಸ್ಸಂಕೋಚವಾಗಿ ಪ್ರಶ್ನಿಸಿದ್ದರು. ಇದರಿಂದ ಸಂಕೋಚ ಉಂಟಾದದ್ದು ವಿಶ್ವನಾಥರಾಯರಿಗೇ ಹೊರತು ಆಕೆಗಲ್ಲ. ವಿಶ್ವನಾಥರಾಯರು ಏನೋ ಹೇಳಬೇಕೆಂದು ಬಾಯಿತೆರೆದರು. ಆದರೆ ಅವರ ಬಾಯಿಂದ ಹೊರಟದ್ದು ಬೇರೊಂದು ಮಾತು.

"ನೀವು ದೊಡ್ಡ ಮನಸ್ಸುಮಾಡಿ ಒಪ್ಪಿದರೆ ನಿಮ್ಮ ಮನೆಗೇ ಕೊಡಬೇಕೆಂದಿದ್ದೇನೆ."

"ಹಾಗಾದರೆ ಇನ್ನೂ ಮದುವೆ ಇಲ್ಲವೆ?" ಮುದುಕಿಗೆ ಆಶ್ಚರ್ಯವಾಯಿತು. ಸುಮಾರು ಮೂವತ್ತು ವರ್ಷ ಪ್ರಾಯದ ಹೆಂಗಸಂತೆ ತೋರುವ ಲೀಲಾವತಿಗೆ ಇನ್ನೂ ಮದುವೆ ಇಲ್ಲವೆಂದು ಅವರಿಂದ ನಂಬುವುದೇ ಕಷ್ಟವಾಯಿತು. ಆಕೆ ಮೂಗಿನ ಮೇಲೆ ಬೆರಳಿಟ್ಟು ಲೀಲಾವತಿಯ ಕಡೆ ಕುತೂಹಲ ದೃಷ್ಟಿಯಲ್ಲಿ ನೋಡಿದಾಗ ವಿಶ್ವನಾಥರಾಯರು ಹೇಳಿದರು.

"ಇದುತನಕ ಅವಳಿಗೆ ಮದುವೆಮಾಡಿಕೊಳ್ಳುವ ಆಸೆಯೇ ಇರಲಿಲ್ಲ. ಈಗ ನಿಮ್ಮ ಸುರೇಂದ್ರನನ್ನು ನೋಡಿದ ಮೇಲೆ ಮದುವೆಯಾಗುವ ಆಸೆಯಾಗಿದೆ" ಎಂದು ಹೇಳುತ್ತ ಸುರೇಂದ್ರ, ಲೀಲಾವತಿಯರ ಕಡೆ ನೋಡಿದರು. ಅವರು ಈ ವೇಳೆಗಾಗಲೇ ಆ ಸ್ಥಳದಿಂದ ಮಾಯವಾಗಿದ್ದರು. ಸುರೇಂದ್ರ ಲೀಲಾವತಿಯನ್ನು ತನ್ನ ಡ್ರಾಯಿಂಗ್‌ರೂಮಿನ ಅಂದ ಚಂದಗಳನ್ನೂ, ತನ್ನ ಲೈಬ್ರರಿ ಹಾಗೂ ವರ್ಣ ಚಿತ್ರಗಳನ್ನೂ ತೋರಿಸಲು ಕರೆದೊಯ್ದಿದ್ದ. ಅದನ್ನೆಲ್ಲವನ್ನು ನೋಡುವುದು ಮುಗಿದ ಮೇಲೆ ಮನೆಯವರೆಲ್ಲರೂ ಕೂಡಿ ಕೊಂಚ ಫಲಾಹಾರ ಸೇವಿಸಿದರು. ಆಗ ಸುರೇಂದ್ರನ ಮೂರನೆ ಹುಡುಗಿ ಅಜ್ಜಿಯನ್ನು ಹೊಸಬರು ಯಾರೆಂದು ವಿಚಾರಿಸಿಕೊಂಡಳು. ಅವರು "ಯಾರೂ ಅಲ್ಲ ನಿಮ್ಮ ಚಿಕ್ಕಮ್ಮ ಕಾಣೆ" ಎಂದು ಅಜ್ಜಿ ಲೀಲಾ

ವತಿಯ ಪರಿಚಯವನ್ನು ಸುರೇಂದ್ರನ ಮಕ್ಕಳಿಗೆ ಮಾಡಿಕೊಟ್ಟರು. ಲೀಲಾವತಿಗೆ ಸುಂದರ ಕಾಯರಾದ ಮುದ್ದಾದ ಆ ಮಕ್ಕಳನ್ನು ನೋಡಿ ಸಂತೋಷವಾಯಿತು. ಅವರನ್ನು ಬಳಿಗೆ ಕರೆದು ಅವರ ಹೆಸರುಗಳನ್ನು ಕೇಳಿದಳು. ಹಿರಿಯ ಹುಡುಗಿಯ ಹೆಸರು ಹೇಮಾವತಿ; ಕಿರಿಯವಳು ಶಾಂತ; ಅವಳ ತಂಗಿ ಇಂದ್ರಾಣಿ—ಕಡೆಯವನು ಸಣ್ಣ ಹುಡುಗ. ಇಂದು ಶಾಂತುವಿನ ಹುಟ್ಟಿದ ಹಬ್ಬ. ಅಂತಲೇ ಎಲ್ಲರಗಿಂತ ಅವಳು ಒಂದು ಕೈ ಹೆಚ್ಚಾಗಿ ಸಿಂಗರಿಸಿಕೊಂಡಿದ್ದಳು. ಅವಳು ಗತಿಸಿದ ತಾಯಿಯ ಕೈಬಳೆ, ಸರಗಳನ್ನು ಮೈತುಂಬಾ ಹೇರಿಕೊಂಡಿದ್ದಳು. ಅವಳಿಗೆ ಒಡವೆಗಳೆಂದರೆ ಏನೋ ಆಸೆ. ಆದರೆ ಅವಳಿಗೆ ತುಂಬಾ ನಾಚಿಕೆ. ಹೊಸಬರ ಮುಖ ಕಂಡೊಡನೆ ಮೂಲೆ ಹಿಡಿಯುವ ಮಾದೇವಿ. ಹಾಗೆಂದೇ ಮನೆಯಲ್ಲಿ ಎಲ್ಲರೂ ಕರೆದು ಹಾಸ್ಯಮಾಡುತ್ತಿದ್ದರು. ಮೂವರು ಹುಡುಗಿಯರ ಪೈಕಿ ಇಂದ್ರಾಣಿ ತುಂಬಾ ಗಟ್ಟಿಗಳು. ಅವಳೇ ಎಲ್ಲರಿಗಿಂತ ಮುಂಚೆ ಲೀಲಾವತಿಯ ಬಳಿಗೆ ಬಂದು ಅವಳ ಸ್ನೇಹ ಸಂಪಾದಿಸಿಕೊಂಡ ಹುಡುಗಿ. ಅವಳೇ ಲೀಲಾವತಿ ಯಾರೆಂದು ಅಜ್ಜಿಯನ್ನು ವಿಚಾರಿಸಿದ್ದುದು. ಆ ಗುಂಪಿನಿಂದ ದೂರ ನಿಂತುಕೊಂಡ ಶಾಂತುವನ್ನು ಬಳಿಗೆ ಕರೆಯುತ್ತಾ ಲೀಲಾವತಿ "ಹೌದಾ ಶಾಂತು, ನಿನಗೆ ಹುಟ್ಟಿದ ಹಬ್ಬ ಮಾಡ್ತಾರಂತೆ ನಿಜವೇ ?" ಎಂದಳು. ಈ ಮಾತು ಕೇಳಿ ಉಳಿದ ಹುಡುಗಿಯರು ಚಪ್ಪಾಳೆ ಇಟ್ಟು ನಕ್ಕರು. ಹುಟ್ಟಿದ ಹಬ್ಬವೆಂದರೆ ಚೆನ್ನಾಗಿ ಬಾಸುಂಡೆ ಬರುವಂತೆ ಹೊಡೆಯುವುದೆಂದು ನೆರೆಮನೆಯ ತುಂಟಹುಡುಗ ಅದೇತಾನೇ ವ್ಯಾಖ್ಯಾನ ಮಾಡಿದ್ದ. ಅದು ಅವರಿಗೆ ನೆನಪಾಯಿತು. ಮೊಮ್ಮಕ್ಕಳ ನಗುವನ್ನು ಕಂಡು "ಯಾಕ್ರೇ ಹಾಗೆ ನಗ್ತೀರಿ? ಏನು ಕಂಡ್ರಿ ನಗೋಕೆ ?" ಎಂದು ಗದರಿಕೊಂಡರು ಅಜ್ಜಿ.

"ಹುಟ್ಟಿದ ಹಬ್ಬವೆಂದರೆ ನಾಣಿ ಹೇಳ್ತಾನೆ—ಬೆತ್ತ ತಗೊಂಡು ನಾಲ್ಕು ಬಿಡೋದಂತೆ!" ಎಂದಳು ಇಂದ್ರಾಣಿ.

"ಥೂ ತುಂಟಿ!" ಎಂದು ಅಜ್ಜಿ ನಕ್ಕರು.

"ಚಿಕ್ಕಮ್ಮ, ನೀನು ಇಷ್ಟು ದಿನ ಎಲ್ಲಿ ಹೋಗಿದ್ದೆ ಚಿಕ್ಕಮ್ಮ" ಎಂದು ಇಂದ್ರಾಣಿ ವಿಚಾರಿಸಿಕೊಂಡಳು.

ಈ ಮಾತು ಕೇಳಿ ನಗುತ್ತಾ ಲೀಲಾವತಿ ಹೇಳಿದಳು:

"ನಿಮ್ಮ ಅಜ್ಜಿ ಊರಿಗೆ ಹೋಗಿದ್ದೆ." .

"ಅಜ್ಜಿ ಇಲ್ಲೇ ಇದ್ದಾಳೆ."

"ಇನ್ನೊಬ್ಬಜ್ಜಿ ಮನೆಗೆ ಹೋಗಿದ್ದೆ."

ಈ ವೇಳೆಗೆ ಇಂದ್ರಾಣಿಗೆ ಅಷ್ಟೇ ಸವರ ತೆಗೆದುಕೊಂಡಿದ್ದ ನಾಣಿ ಹೇಳಿದ "ಚಿಕ್ಕಮ್ಮ ಚಿಕ್ಕಮ್ಮ ನಂಗೊಂದು ರಾಜರಾಣಿ ಕಥೆ ಹೇಳು ಚಿಕ್ಕಮ್ಮ."

ಅವನಿಗೆ ಕಥೆ ಎಂದರೆ ಪ್ರೈಯಲ್ಲಾ ಕಿವಿ.

"ಆಮೇಲೆ ಹೇಳ್ತೀನಿ ಮಗು."

"ಉಹೂಂ. ನಂಗೆ ಈಗಲೇ ಹೇಳಬೇಕು."

"ಹೇಳು ಚಿಕ್ಕಮ್ಮ—ಈಗಲೇ ಹೇಳು ಚಿಕ್ಕಮ್ಮ" ಎಂದು ಇಂದ್ರಾಣಿ ದನಿಗೂಡಿಸಿದಳು. ಲೀಲಾವತಿಗೆ ಒಳ್ಳೆಯ ಪೀಕಲಾಟಕ್ಕೆ ಇಟ್ಟುಕೊಂಡಿತು. ಅವಳು ಸುರೇಂದ್ರನ ತಾಯಿಯ ಮುಖ ನೋಡಿದಳು. ಅವರು "ಏನ್ರೇ ನಿಮ್ಮ ಚಿಕ್ಕಮ್ಮನಿಗೆ ಕಾಫಿ ಕುಡಿಯೋಕೆ ಕೊಂಚ ಪುರಸತ್ತು ಕೊಡ್ತೀರೋ ಇಲ್ಲವೋ" ಎಂದು ಗದರಿಕೊಂಡರು. ಅದೇ ವೇಳೆಗೆ ಅಡಿಗೆಯವನು ಬೆಳ್ಳಿಯ ತಾಟಿನಲ್ಲಿ ಉಪ್ಪಿಟ್ಟು, ಕಾಫಿಗಳನ್ನು ತಂದಿತ್ತ. ಎಲ್ಲರೂ ಜತೆಯಲ್ಲೇ ತಿಂದರು. ಫಲಾಹಾರ ಮುಗಿದ ಮೇಲೆ ಸುರೇಂದ್ರ ಲೀಲಾವತಿ, ವಿಶ್ವನಾಥರಾಯರಿಗೆ ಮನೆಯನ್ನೆಲ್ಲಾ ತೋರಿಸಿಕೊಂಡು ಬಂದು, ತನ್ನ ಡ್ರಾಯಿಂಗ್ ರೂಂನಲ್ಲಿ ಉಳಿದ ಸ್ನೇಹಿತರಿಗಾಗಿ ಕಾಯುತ್ತಾ, ವಿಶ್ವನಾಥರಾಯರೊಂದಿಗೆ ಮಾತನಾಡುತ್ತಾ ಕುಳಿತ. ಲೀಲಾವತಿ ಸುರೇಂದ್ರನ ಲೈಬ್ರರಿಯನ್ನು ನೋಡುತ್ತಾ ಅವನ ಅಭ್ಯಾಸದ ಕೋಣೆಯಲ್ಲಿ ನಿಂತಾಗ, ಅವಳು ಒಬ್ಬಳೇ ಇರುವುದನ್ನು ನೋಡಿದ ಆ ವಾನರ ಸೈನ್ಯ ಬಂದು ಅವಳನ್ನು ಮುತ್ತಿಗೆ ಹಾಕಿತು. 'ಕಥೆ ಹೇಳು ಚಿಕ್ಕಮ್ಮ ಕಥೆ ಹೇಳು' ಎಂದು ಪೀಡಿಸಿದರು. ತಾನು ಯಾಕಾದರೂ ಈ ಮಕ್ಕಳಿಗೆ ಆಮೇಲೆ ಕಥೆ ಹೇಳ್ತೀನೆ ಎಂದು ಮಾತು ಕೊಟ್ಟೆನೋ ಎಂದು ಪರಿತಪಿಸುವಂತಾಯಿತು. ಲೀಲಾವತಿ ಅವಳು ಸುರೇಂದ್ರನ ಮನೆಯಲ್ಲಿ ಕಥೆ ಹೇಳಬೇಕಾದ ಪ್ರಮೇಯ

ಬರುವುದೆಂದು ತಿಳಿದಿದ್ದಳೆ ಅದಕ್ಕೆ ಸಿದ್ಧತೆಮಾಡಿಕೊಂಡು ಬರುತ್ತಿದ್ದಳೋ ಏನೋ. ಅಂತು ಈಗ ಲೀಲಾವತಿಗೆ ಒಳ್ಳೆಯ ಪೇಚಾಟವಾಯಿತು. ಏನೇ ಆಗಲಿ ಹುಡುಗರನ್ನುಸಮಾಧಾನಪಡಿಸಲು, ತನ್ನನ್ನು ಪ್ರೀತಿಯಿಂದ ಚಿಕ್ಕಮ್ಮ ನೆಂದು ಕರೆಯುತ್ತಿರುವ ಮಕ್ಕಳ ಗೌರವವನ್ನು ಉಳಿಸಿಕೊಳ್ಳಲು ಯಾವು ದಾದರೊಂದು ಕಥೆ ಹೇಳಲೇ ಬೇಕಾಗಿತ್ತು. ಆದರೆ ಅವಳಿಗೆ ಯಾವ ಕಥೆ ಯನ್ನು ಹೇಳಬೇಕು, ಎಲ್ಲಿಂದ ಆರಂಭಿಸಬೇಕೆನ್ನುವುದು ಒಂದು ಸಮಸ್ಯೆ ಯಾಯಿತು. ಹುಡುಗರಿಗೆ ರಾಜಾರಾಣಿಯ ಕಥೆಯ ವಿನಾ ಬೇರೆ ಕಥೆ ಬೇಕಿರಲಿಲ್ಲ. ಯಾವ ಕಥೆ ಹೇಳುವುದು ಎಂದು ಆಲೋಚಿಸುತ್ತಾ ಕುಳಿತ ವಳು, ಸಮಯೋಚಿತವಾಗಿ ತನ್ನ ಊಹೆಗೆ ಹೊಳೆದ ಯಾವುದೋ ಒಂದು ಕಥೆಯನ್ನು ಆರಂಭಿಸಿಯೇ ಬಿಟ್ಟಳು.

ಹುಡುಗರು ಸದ್ದಿಲ್ಲದೆ ಆಲಿಸುತ್ತಾ ಕುಳಿತರು. ಲೀಲಾವತಿ ಹೇಳಿದಳು:

" ಒಂದೂರಿನಲ್ಲಿ ಒಬ್ಬ ರಾಣಿ ಇದ್ದಳು. ಅವಳಿಗೆ ಇನ್ನೂ ಮದುವೆ ಯಾಗಿರಲಿಲ್ಲ."

ಇಂದ್ರಾಣಿಗೆ ಯಾಕೋ ಈ ಕಥೆ ಸರಿಯಾಗಿ ಆರಂಭವಾಗಿಲ್ಲವೆಂದು ಅನಿಸಿತು. ಅವಳಿಗೆ ಸಾಮಾನ್ಯವಾಗಿ ಒಂದೂರಿನಲ್ಲಿ ಒಬ್ಬ ರಾಜನಿದ್ದ ಎಂದು ಆರಂಭವಾಗಬೇಕಾದ ಕಥೆ ಇಂದು ರಾಣಿಯಿಂದ ಆರಂಭವಾಗುತ್ತಿದೆ ಯಲ್ಲಾ ಎಂದು ಆಶ್ಚರ್ಯ. ಅವಳು ಆಶ್ಚರ್ಯವ್ಯಕ್ತಪಡಿಸುತ್ತಾ ನಡುವೆ ಪ್ರಶ್ನಿಸಿದಳು.

" ಆ ರಾಣಿಯ ಊರು ಹೇಳಲೇ ಇಲ್ಲ ! "

" ಹೌದು ಮರೆತೆ. ಆ ರಾಣಿಯ ಊರು ಆವಂತಿ ಅಂತ. ಆ ರಾಣಿ ಗಿನ್ನೂ ಮದುವೆಯಾಗಿರಲಿಲ್ಲ."

ಮತ್ತೆ ನಾಣಿ ಬಾಯಿ ಹಾಕಿದ.

" ಆ ರಾಣಿಯ ಹೆಸರು ಹೇಳಲೇ ಇಲ್ಲ ? "

" ರಾಣಿಯ ಹೆಸರೇ ? " ದೀರ್ಘವಾಗಿ ಆಲೋಚಿಸುತ್ತಾ ಲೀಲಾವತಿ ಹೇಳಿದಳು " ಹೂಂ....ರಾಣಿಯ ಹೆಸರು ಲೀಲಾ ಅಂತ."

" ಏನು ? ಲೀಲಾ ಅಂತಲೇ ? ಅಷ್ಟು ದೊಡ್ಡ ರಾಣಿಗೆ ಇಷ್ಟು ಸಣ್ಣ

ಹೆಸರೇ ?" ಇಂದ್ರಾಣಿ ಪ್ರಶ್ನಿಸಿದಳು.

"ಇಲ್ಲ—ಅವಳಿಗೆ ಇಟ್ಟಿದ್ದ ಹೆಸರು ಲೀಲಾವತಿ ಅಂತ. ಆದರೆ ಅವಳ ತಂದೆ ಮುದ್ದಿಗೆ ಲೀಲಾ ಅಂತ ಕರೀತಿದ್ದ, ಇರಲಿ. ಕಥೆ ಕೇಳಿ— ರಾಣಿಯ ಹೆಸರು ಲೀಲಾ ಅಂತ. ಅವಳಿಗಿನ್ನೂ ಮದುವೆ ಇರಲಿಲ್ಲ. ಅವಳನ್ನು ಮದುವೆಯಾಗಬೇಕೂಂತ ಪಕ್ಕದ ರಾಜ್ಯದ ರಾಜಕುಮಾರ ರಾಣಿಯ ರಾಜ್ಯಕ್ಕೆ ತನ್ನ ಮಂತ್ರಿಯನ್ನು ಕಳುಹಿಸಿದ.

"ರಾಜಕುಮಾರನ ಹೆಸರು ?" ಇಂದ್ರಾಣಿ ಪ್ರಶ್ನಿಸಿದಳು.

"ಸುರೇಂದ್ರನಾಥ ಅಂತ."

"ಅದು ಅಣ್ಣಯ್ಯನ ಹೆಸರು !" ಎಂದ ನಾಣಿ.

"ಸುರೇಂದ್ರನಾಥ ಬೇಡದಿದ್ದರೆ ಹೋಗಲಿ....ಸುರೇಂದ್ರಸಿಂಹ."

"ಹೂಂ...."

"ನೀವು ಮಧ್ಯೆ ಮಧ್ಯೆ ಪ್ರಶ್ನೆ ಕೇಳದೆ ಇದ್ದರೆ ನಾನು ಕಥೆ ಹೇಳ್ತೀನಿ. ಇಲ್ಲದೆ ಇದ್ದರೆ ನಿಲ್ಲಿಸಿ ಬಿಡ್ತೇನೆ ನೋಡಿ."

"ಇಲ್ಲ ಚಿಕ್ಕಮ್ಮ ಪ್ರಶ್ನೆ ಕೇಳೋಲ್ಲ" ಎಂದು ಗೋಗರೆದರು.

"ಸುರೇಂದ್ರಸಿಂಹನಿಗೆ ಲೀಲಾವತಿಯನ್ನು ಮದುವೆ ಆಗಬೇಕೂಂತ ಆಸೆ ಆಯಿತು. ಅವನು ಮಂತ್ರಿ ಕೈಲಿ ಕಾಗದ ಬರೆದುಕೊಟ್ಟು ಕಳುಹಿಸಿದ. ಅದರಲ್ಲಿ ನಿನ್ನ ಮಗಳು ಲೀಲಾವತೀನ ನನಗೆ ಮದುವೆ ಮಾಡಿಕೊಡು ಎಂದು ಬರೆದಿದ್ದ. ಈ ಕಾಗದ ನೋಡಿ ರಾಣಿ ಅಪ್ಪನಿಗೆ ತುಂಬಾ ಸಂತೋಷವಾಯಿತು. ಆದರೆ ಲೀಲಾವತಿಗೆ ರೇಗಿಹೋಯಿತು.

'ಯಾಕಮ್ಮ ಲೀಲಾ ನಿಂಗೆ ಅವನನ್ನು ಮದುವೆ ಆಗೋಕೆ ಇಷ್ಟವಿಲ್ಲವೆ ?' ಎಂದು ಅವರಪ್ಪ ಕೇಳಿದರು.

"ಆಗ ಲೀಲಾವತಿ ಅಂದಳು 'ನಾನು ಕ್ಷತ್ರಿಯವಂಶದಲ್ಲಿ ಹುಟ್ಟಿದವಳು ಅಪ್ಪ. ನನ್ನನ್ನು ಕ್ಷತ್ರಿಯೋಚಿತವಾಗಿ ಕೈಹಿಡಿದರೆ ಮದುವೆಯಾಗುತ್ತೇನೆ. ಅಂದರೆ ಆ ರಾಜಕುಮಾರ ನಮ್ಮ ಶತ್ರುಗಳ ಮೇಲೆ ಯುದ್ಧಕ್ಕೆ ಹೋಗಿ ಅವರನ್ನ ಸೋಲಿಸಿ, ಜಯದ ಮಾಲೆಯೊಂದಿಗೆ ಬಂದರೆ ನಾನು ಅವನ ಕೊರಳಿಗೆ ಹಾರ ಹಾಕಿ ಸ್ವಯಂವರ ಮಾಡಿಕೊಳ್ಳುತ್ತೇನೆ. ಹೀಗೆ ಶೌರ್ಯ,

ಸಾಹಸ ತೋರಿಸದೆ ಸುಮ್ಮನೆ ಮದುವೆಯಾಗು ಎಂದು ಹೇಳಿದರೆ ನಾನು ಮದುವೆಯಾಗುವುದಿಲ್ಲ ' ಎಂದು ಹೇಳಿದಳು.

"ಭಲಾ ಹುಡುಗಿ, ಎಂದುಕೊಂಡು ರಾಣಿಯ ತಂದೆ ಅದೇ ರೀತಿಯಾಗಿ ಕಾಗದ ಬರೆದು ಮಂತ್ರಿಯ ಕೈಲಿ ಕೊಟ್ಟು ಕಳುಹಿಸಿದ. ಈ ಕಾಗದ ನೋಡಿಕೊಂಡು ಸುರೇಂದ್ರನಾಥ–ಅಲ್ಲ ಸುರೇಂದ್ರಸಿಂಹ ರಾಣಿಯ ಶತ್ರುಗಳ ಮೇಲೆ ದಂಡೆತ್ತಿ ಹೋದ...." ಎಂದು ಹೇಳಿ ಹಠಾತ್ತನೆ ನಿಲ್ಲಿಸಿಬಿಟ್ಟಳು. ರೂಮಿನ ಒಳಗೆ ಯಾರೋ ಬಂದಂತಾದುದರಿಂದ ತನ್ನ ಕಥೆಯನ್ನು ಮಧ್ಯದಲ್ಲಿ ನಿಲ್ಲಿಸಿ ಅತ್ತ ನೋಡಿದಳು. ಅಲ್ಲಿ ಯಾರೂ ಇರಲಿಲ್ಲ. ಬಾಗಿಲಿನ ಪರದೆ ಗಾಳಿಗೆ ಸುಮ್ಮನೆ ಅತ್ತಿತ್ತ ಚಲಿಸುತ್ತಿತ್ತು.

" ಮುಂದೆ ಏನಾಯಿತು? ಯುದ್ಧದಲ್ಲಿ ಯಾರು ಗೆದ್ದರು?" ಇಂದ್ರಾಣಿ ಪ್ರಶ್ನಿಸಿದಳು.

" ನಂಗೆ ಗೊತ್ತಿಲ್ಲ, ನಂಗೆ ಗೊತ್ತಿರೋ ಕಥೆ ಇಷ್ಟೇ. ಬಹುಶಃ ಯುದ್ಧದಲ್ಲಿ ರಾಜಕುಮಾರ ಗೆದ್ದಿದ್ದರೂ ಗೆದ್ದಿರಬಹುದು...."

" ಅಯ್ಯೋ ಇಷ್ಟೇನೆ ಕಥೆ! ನಿಂಗೆ ಕಥೆ ಹೇಳೋಕ್ಕೆ ಬರೊಲ್ಲ. ನಮ್ಮ ಅಜ್ಜಿ ಎಂತೆಂಥ ಕಥೆ ಹೇಳ್ತಾಳೆ! ನಿಂಗೆ ಒಂದೂ ಬರೊಲ್ಲ" ಎಂದು ನಾಣಿ ತನ್ನ ಅಸಮ್ಮತಿ ಸೂಚಿಸಿದ.

" ಹೋಗಲಿ ರಾಜ ರಾಣಿಗೆ ಮದುವೆ ಆಯಿತಾ ? " ಇಂದ್ರಾಣಿ ಪ್ರಶ್ನಿಸಿದಳು.

" ಅದೂ ನಂಗೆ ಗೊತ್ತಿಲ್ಲ. ಬಹುಶಃ ಮದುವೆ ಆಗಿದ್ದರೂ ಆಗಿರಬಹುದು. ಇಲ್ಲದಿದ್ದರೂ ಇರಬಹುದು...."

"ಮದುವೆ ಮಾಡೋಣ ಚಿಕ್ಕಮ್ಮ....ರಾಜಕುಮಾರನನ್ನು ಯುದ್ಧಕ್ಕೆ ಕಳುಹಿಸಿ ಮದುವೆ ಮಾಡದೆ ಇದ್ದರೆ ಕಥೆ ಸರಿಹೋಗೊಲ್ಲ" ಎಂದ ನಾಣಿ.

" ಮದುವೆ ಮಾಡೋಣ ಚಿಕ್ಕಮ್ಮ. " ಎಂದಳು ಇಂದ್ರಾಣಿ.

ಅವರ ಭಾವನೆಯಲ್ಲಿ ರಾಜ ರಾಣಿಯರಿಗೆ ಮದುವೆ ಮಾಡುವುದು ಬಿಡುವುದು ಎಲ್ಲ ಲೀಲಾವತಿಯ ಕೈಯಲ್ಲಿಯೇ ಇರುವಂತೆ ಕಂಡಿತ್ತೋ ಏನೋ.

"ಹಾಗೇ ಆಗಲಿ. ಎಲ್ಲಿ ರಾಜ ರಾಣಿಗೆ ಮದುವೆ ಮಾಡೋಣ ಅಂತ ಅನ್ನೋರೆಲ್ಲ ಕೈ ಎತ್ತಿ" ಲೀಲಾವತಿ ಓಟಿಗೆ ಹಾಕಿದಳು.

"ಎಲ್ಲರೂ ಕೈ ಎತ್ತಿದರು.

"ಒಂದು, ಎರಡು, ಮೂರು,........"

"ನಾಲ್ಕು!" ಹಿಂದಿನಿಂದ ದೊಡ್ಡ ಧ್ವನಿ ಬಂತು. ಎಲ್ಲಗೂ ಅತ್ತ ನೋಡಿದರು. ಸುರೇಂದ್ರ ಲೀಲಾವತಿಯ ಹಿಂದೆ ನಿಂತಿದ್ದ. ಅವನೂ ಮಕ್ಕಳೊಂದಿಗೆ ಮಗುವಾಗಿ ಕೈ ಎತ್ತಿದ್ದ.

"ನನ್ನ ಓಟನ್ನು ಎಣಿಸಿಕೊಳ್ಳಿ ಲೀಲಾವತಿ!" ಎಂದು ನಗುತ್ತ ಹೇಳಿದ.

ಈ ಮಾತನ್ನು ಕೇಳಿದ ಮಕ್ಕಳಿಗೆ ಕಥೆಯಲ್ಲಿ ಬಂದ ಲೀಲಾವತಿ ಸುರೇಂದ್ರ—ಬೇರಾರೂ ಅಲ್ಲದೆ–ತಮ್ಮ ಚಿಕ್ಕಮ್ಮ ಮತ್ತು ಅಣ್ಣಯ್ಯ ಇವರೇ ಎಂದು ತಿಳಿದುಹೋಯಿತು.

"ಚಿಕ್ಕಮ್ಮ ಲೀಲಾವತಿ..... ಅಣ್ಣಯ್ಯ ಸುರೇಂದ್ರಸಿಂಹ.... ಸರಿ ಹೋಯಿತು." ಎಂದು ಇಂದ್ರಾಣಿ ಕೈ ಚಪ್ಪಾಳೆ ಇಟ್ಟು ನಕ್ಕಳು.

"ಚಿಕ್ಕಮ್ಮಂಗೂ ಅಣ್ಣಯ್ಯಂಗೂ ಮದುವೆ" ಎಂದು ತುಂಟ ನಾಣಿ ರಾಗವಾಗಿ ಹಾಡಲಾರಂಭಿಸಿದ. ಉಳಿದ ಮಕ್ಕಳು ಈ ಹಾಡಿಗೆ ತಾಳ ಕುಟ್ಟಲಾರಂಭಿಸಿದರು. ಇವರಿಬ್ಬರನ್ನು ಸಮಾಧಾನಪಡಿಸಲು ಲೀಲಾವತಿ ಸುರೇಂದ್ರರು ಆ ಸ್ಥಳದಿಂದ ಕಣ್ಮರೆಯಾಗಬೇಕಾಯಿತು. ದೇವರ ದಯೆ ಯಿಂದ ಅಲ್ಲಿಗೆ ಸುರೇಂದ್ರನ ತಾಯಿ ಬಂದು, ಹುಡುಗರು ಮಾಡುತ್ತಿದ್ದ ಗದ್ದಲವನ್ನು ಕಂಡು,

"ಈ ಕೋತಿಗಳಿಗೆ ಹೊಸಬರು ಇಲ್ಲ, ಹಳಬರು ಇಲ್ಲ. ಎಷ್ಟು ಇವರ ಗಲಾಟೆ!" ಎಂದು ರೇಗಿಕೊಂಡರು. ಆಗ ಹುಡುಗರ ಗದ್ದಲದ ಸದ್ದಡಗಿತು.

ಊಟದ ವೇಳೆಗೆ ಆಹ್ವಾನಿತ ಅತಿಥಿಗಳೆಲ್ಲರೂ ಬಂದರು. ಎಲ್ಲರಿಗೂ ಪರಸ್ಪರ ಪರಿಚಯವಾದ ಮೇಲೆ ಊಟದ ಸಿದ್ಧತೆ ನಡೆಯಿತು.

ಸೊಗಸಾದ ಊಟ ಕಂಠ ಪೂರ್ತಿಯಾಗಿ ಹೊಡೆದ ಮೇಲೆ ಅತಿಥಿ ಗಳು ಕೊಂಚ ಕಾಲ ವಿಶ್ರಾಂತಿ ತೆಗೆದುಕೊಂಡು ಅನಂತರ ತಮ್ಮ ಮನೆಗಳಿಗೆ

ಹೊರಟುಹೋದರು. ಲೀಲಾವತಿ ಮನೆಗೆ ಹೊರಡುವ ಮಾತು ಹೇಳಿದಾಗ, ಸುರೇಂದ್ರನ ತಾಯಿ ಅವಳನ್ನು ಸಂಜೆಯ ಆರತಕ್ಷತೆಗೆ ಬಲವಂತವಾಗಿ ಉಳಿಸಿಕೊಂಡರು. ಸಂಜೆಯ ಕಾರ್ಯಕ್ರಮವೆಲ್ಲ ಮುಗಿದ ಮೇಲೂ ಲೀಲಾವತಿಯನ್ನು ಬರಿ ಹೊಟ್ಟೆಯಲ್ಲಿ ಕಳುಹಿಸಲಿಲ್ಲ. ತಂದೆಮಕ್ಕಳಿಬ್ಬರಿಗೂ ಪುಷ್ಕಳವಾದ ಊಟ ಹಾಕಿ, ತಮ್ಮ ಕಾರಿನಲ್ಲಿ ಅವರ ಮನೆಗೆ ಬಿಟ್ಟು ಬರಲು ಸುರೇಂದ್ರನಿಗೆ ಹೇಳಿದರು. ಮನೆಗೆ ಹೋಗುವಾಗ ಲೀಲಾವತಿ ಸುರೇಂದ್ರನ ತಾಯಿಗೆ ನಮಸ್ಕರಿಸಿದಳು. "ದೀರ್ಘ ಸುಮಂಗಲೀ ಭವ!" ಎನ್ನುವ ಆಶೀರ್ವಚನ ಅವರ ಬಾಯಿಂದ ಹೊರಬಿತ್ತು. ಮದುವೆಯಾಗಲೇ ಬಾರದೆಂದಿದ್ದ ಲೀಲಾವತಿಗೆ ಎಂತಹ ವಿಚಿತ್ರ ಆಶೀರ್ವಾದ! ಆ ಮುದುಕಿ ಬಹುಶಃ ನಾಳಿನ ಕನಸನ್ನು ಇಂದೇ ಕಾಣುತ್ತಿದ್ದಳೋ ಏನೋ. ಅಂತೂ ಈ ಮಾತು ಲೀಲಾವತಿಗೆ ವಿಚಿತ್ರವಾಗಿ ಕಂಡಿತು.

೧೫

ಲೀಲಾವತಿ ಆ ಸುದ್ದಿಯನ್ನು ಮೊದಲು ನಂಬಲಿಲ್ಲ. ವರ್ಷದ ಆರಂಭದಲ್ಲಿ ಇಲ್ಲದಿದ್ದ ಆ ಒಡಕು ಸುದ್ದಿ ಈಗ ವರ್ಷದ ಮಧ್ಯೆ ಏಕೆ ಹುಟ್ಟಿಕೊಂಡಿತೆಂದು ಲೀಲಾವತಿ ಆ ಸುದ್ದಿಯನ್ನು ನಂಬದಾದಳು. ಆದರೆ ಆ ಸುದ್ದಿ ಅವಳ ಕಿವಿಗೆ ಬೀಳುವ ಮುನ್ನವೇ ಕರ್ಣಾಕರ್ಣಿತವಾಗಿ ಅವಳ ಸಹೋದ್ಯೋಗಿಗಳೆಲ್ಲರಿಗೂ ತಿಳಿದಿತ್ತು. ಆ ದಿನ ಲೀಲಾವತಿ ಕಾಲೇಜಿಗೆ ಬರುವಾಗ ಅವಳ ಸಹದ್ಯೋಗಿ ಮಿತ್ರೆಯೊರ್ವಳು ಪ್ರಶ್ನಿಸಿದಳು.

"ಲೀಲಾವತಿ ಹೌದೇನು? ನಿನಗೆ ಬೆಂಗಳೂರಿಗೆ ಟ್ರಾನ್ಸ್‌ಫರ್ ಆಗಿದೆಯಂತೆ?"

ಈ ಮಾತು ಕೇಳಿ ಲೀಲಾವತಿಗೇ ಆಶ್ಚರ್ಯವಾಗದೇ ಇರಲಿಲ್ಲ.

"ಇದೇನಮ್ಮ ಹೀಗೆನ್ನುತ್ತಿ—ಯಾರು ಹೇಳಿದರು ನಿಂಗೆ ನನಗೆ ಟ್ರಾನ್ಸ್‌ಫರ್ ಅಂತ?"

"ಯಾಕೆ ನಿಂಗೆ ಈ ವಿಷಯ ಗೊತ್ತಿಲ್ಲವೆ? ಗೊತ್ತಿದೆ ಅಂತ ಇದ್ದೆ ನಾನು. ಈ ಬೆಳಿಗ್ಗೆ ಟಪಾಲಿನಲ್ಲಿ ನಿನ್ನ ಟ್ರಾನ್ಸ್‌ಫರ್ ಆರ್ಡರ್ ಬಂತಂತೆ. ಹಾಗಂತ ಮಿಸ್ ಕ್ಯಾಥರೀನ್ ಹೇಳಿದಳು. ನಾನು ಮೊದಲು ನಂಬಲೇ ಇಲ್ಲ. ಆಮೇಲೆ ಪ್ರಿನ್ಸಿಪಾಲ್ ಅವರನ್ನು ಕಂಡಿದ್ದಾಗ ಅವರೇ ಈ ಮಾತು ಹೇಳಿದರು. ಆಗಲೇ ನಂಬಿಕೆಯಾಗಿದ್ದ ನಿನಗೆ ಇನ್ನೂ ಈ ವಿಷಯ ತಿಳಿದಿಲ್ಲವೇ?" ಎಂದು ಷಾಕ್ ಹೊಡೆಸಿದಳು ಆ ಸ್ನೇಹಿತೆ.

ಆ ದಿನ ಲೀಲಾವತಿ ಮನೆಯಿಂದ ಕಾಲೇಜಿಗೆ ಬಂದಾಗ ಹೊತ್ತಾಗಿದ್ದುದರಿಂದ "ಸ್ಟಾಫ್ ರೂಮಿಗೆ ಹೋಗದೆ ನೇರ ತರಗತಿಗೇ ಹೋಗಿ ಇದೀಗತಾನೇ ಸ್ಟಾಫ್‌ರೂಮಿಗೆ ಬರುತ್ತಿದ್ದಳು. ಅವಳಿಗೆ ತನಗೆ ವರ್ಗವಾಗಿರುವ ಸುದ್ದಿ ಒಂದೂ ತಿಳಿದಿರಲಿಲ್ಲ. ಹಿಂದೊಮ್ಮೆ ವರ್ಷದ ಆದಿಯಲ್ಲಿ ವರ್ಗವಾಗಲಿರುವ ಪ್ರಾಧ್ಯಾಪಕರ ಪಟ್ಟಿಯಲ್ಲಿ ಲೀಲಾವತಿಯ ಹೆಸರೂ ಇತ್ತು. ಅವಳು ಮೈಸೂರಿನ ಮಹಾರಾಣಿ ಕಾಲೇಜಿನಲ್ಲಿ ಐದಾರು ವರ್ಷಗಳಿಂದ ಪಟ್ಟಾಗಿದ್ದುದರಿಂದ ಅಲ್ಲಿಂದ ಅವಳನ್ನು ಎತ್ತಿ ಬೆಂಗಳೂರು

ಕಾಲೇಜಿಗೆ ಒಗೆಯಬೇಕೆಂದು ಮೇಲಧಿಕಾರಿಗಳು ಇದ್ದಾಗ ಲೀಲಾವತಿ ಅಧಿಕಾರಿವಲಯದಲ್ಲಿ ತನ್ನ ವರ್ಚಸ್ಸನ್ನು ಬೀರಿ, ವರ್ಗವನ್ನು ಮುಂದಕ್ಕೆ ಹಾಕಿಸಿ ಬೀಸುವ ದೊಣ್ಣೆಯಿಂದ ತಪ್ಪಿಸಿಕೊಂಡಿದ್ದಳು. ಆದರೆ ಇಷ್ಟು ಬೇಗನೆ ತನ್ನ ವಿಷಯ ಮತ್ತೆ ಸೆನೆಟಿನಲ್ಲಿ ಚರ್ಚೆಗೆ ಬಂದು, ತನ್ನನ್ನು ಬೆಂಗಳೂರಿಗೆ ವರ್ಗಾಯಿಸುವರೆಂದು ಅವಳೆಂದೂ ಕನಸುಮನಸಿನಲ್ಲಿಯೂ ತಿಳಿದಿರಲಿಲ್ಲ. ಅವಳಿಗೆ ತನ್ನ ಗೆಳತಿ ಹೇಳಿದ ಸುದ್ದಿಯಿಂದ ಕೊಂಚ ಗಾಬರಿಯೇ ಆಯಿತು. ದೇವರೇ ಈ ಸುದ್ದಿಯನ್ನು ಸುಳ್ಳುಮಾಡಿಸು ಎಂದು ಪ್ರಾರ್ಥಿಸುತ್ತಲೇ ಪ್ರಿನ್ಸಿಪಾಲರ ಚೇಂಬರ್ಸ್ ಪ್ರವೇಶಿಸಿದಳು. ಪ್ರಿನ್ಸಿಪಾಲರು ಲೀಲಾವತಿಯನ್ನು ಆದರದಿಂದ ಬರಮಾಡಿಕೊಂಡು ಬಹಳ ಸಂಕೋಚದಿಂದ ಅವಳಿಗೆ ಟ್ರಾನ್ಸ್‌ಫರ್ ಆಗಿರುವ ವಿಷಯ ತಿಳಿಸಿದರು. ಅವರಿಗಂತೂ ಲೀಲಾವತಿಯನ್ನು ವರ್ಷದ ಮಧ್ಯೆ ಬಿಟ್ಟುಕೊಡಲು ಇಷ್ಟವೇ ಇರಲಿಲ್ಲ; ಆಕೆಯೂ ಸೆನೆಟ್‌ನಲ್ಲಿ ಸದಸ್ಯಳಾಗಿದ್ದು ಲೀಲಾವತಿಯ ವರ್ಗದ ವಿಷಯ ಬಂದಾಗ ಅದನ್ನು ವಿರೋಧಿಸಿ ಮಾತನಾಡಿದ್ದರು. ಆದರೆ ಬೆಂಗಳೂರು ಕಾಲೇಜಿನಲ್ಲಿ ಇಂಗ್ಲಿಷ್ ಅಧ್ಯಾಪಕಿಯಾಗಿದ್ದ ಪುಷ್ಪ ಮದುವೆಯಾಗಿ, ಕೆಲಸಕ್ಕೆ ರಾಜಿನಾಮೆ ಇತ್ತು ಗಂಡನ ಮನೆಯಾದ ಡೆಲ್ಲಿ ಸೇರಿದ್ದುದರಿಂದ—ಮೊದಲೇ ಮಹಾರಾಣಿ ಕಾಲೇಜಿನಲ್ಲಿ ಇಂಗ್ಲಿಷ್ ಡಿಪಾರ್ಟ್‌ಮೆಂಟಿನಲ್ಲಿ ಕಡಮೆ ಅಧ್ಯಾಪಕಿಯರಿದ್ದರು—ಈಗ ಅಲ್ಲಿನ ವಿದ್ಯಾರ್ಥಿನಿಯರಿಗೆ ಪಾಠಪ್ರವಚನಗಳಿಗೆ ತೊಂದರೆಯಾಗಿ ಮೈಸೂರು ಕಾಲೇಜಿನಿಂದ ಬೇರೆ ಯಾರನ್ನಾದರೂ ಕೂಡಲೇ ಕಳುಹಿಸಿಕೊಡಬೇಕೆಂದು ಅಲ್ಲಿನ ಪ್ರಿನ್ಸಿಪಾಲಳು ವೈಸ್‌ಚಾನ್ಸೆಲರಿಗೆ ಬರೆದಿದ್ದರು. ಅದರ ಫಲವಾಗಿಯೇ ಲೀಲಾವತಿಗೆ 'ಎತ್ತಂಗಡಿ' ಆದದ್ದು. ಅವಳು ಮೈಸೂರಿನಲ್ಲಿ ಅನೇಕ ವರ್ಷಗಳಿಂದ ಪಟ್ಟಾಗಿ ಇದ್ದುದರಿಂದ ವರ್ಗದ ಶನಿ ಅವಳ ಮೇಲೆ ಕೂತುಕೊಂಡಿತ್ತು.

ಬೇರೊಂದು ಹೊತ್ತಿನಲ್ಲಾಗಿದ್ದರೆ ಈ ವರ್ಗದ ವಿಷಯವನ್ನು ಲೀಲಾವತಿ ಅಷ್ಟು ಹಚ್ಚಿಕೊಳ್ಳುತ್ತಿರಲಿಲ್ಲವೆಂದು ತೋರುತ್ತದೆ. ಆದರೆ ಇದೇ ಸಮಯದಲ್ಲಿ ತಮ್ಮ ಹಳೆಯ ಖಾಹಿಲೆಯಿಂದ ಹೃದ್ರೋಗ ಹಾಗೂ ರಕ್ತದ ಒತ್ತಡದಿಂದ, ವಿಶ್ವನಾಥರಾಯರು ಹಾಸಿಗೆ ಹಿಡಿದುಬಿಟ್ಟದರು. ತಿಂಗ

ಳಿಂದಲೂ ಮೇಲೆ ಎದ್ದಿರಲಿಲ್ಲ. ದಿನದಿನಕ್ಕೆ ಅವರ ದೇಹದ ಸ್ಥಿತಿ ಕೆಡುತ್ತಲೇ ಹೋಗಿತ್ತು. ಇಂಥಹ ಸ್ಥಿತಿಯಲ್ಲಿರುವ ತಂದೆಯನ್ನು ಹೀಗೆ ಬಿಟ್ಟು ಹೋಗು ವಂತೆ ಇರಲಿಲ್ಲ. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಏನುಮಾಡಬೇಕೆಂಬುದು ಹೊಳೆಯದೆ ಪ್ರಿನ್ಸಿಪಾಲರನ್ನೇ ಶರಣು ಬಂದಳು. ಅವರು ಈ ವಿಷಯದಲ್ಲಿ ಈಗಾಗಲೇ ಆರ್ಡರುಗಳನ್ನು ಜಾರಿಮಾಡಿ ಬಿಟ್ಟಿರುವುದರಿಂದ ಈ ಬಗೆ ಬೇರೇನೂ ಮಾಡಲು ಸಾಧ್ಯವಿಲ್ಲವೆಂದೂ, ಲೀಲಾವತಿಗೆ ಬೆಂಗಳೂರಿಗೆ ಹೋಗಲು ಇಷ್ಟವಿಲ್ಲವಾದರೆ ಅವಳು ರಜಕ್ಕೆ ಬರೆದುಹಾಕಬೇಕೆಂದೂ— ಇಲ್ಲದೆ ಇದ್ದರೆ ಬೆಂಗಳೂರು ಕಾಲೇಜಿಗೆ ಹೋಗಲೇಬೇಕೆಂದೂ ತಿಳಿಸಿದರು. ಈಗ ಸದ್ಯದ ಸ್ಥಿತಿಯಲ್ಲಿ ಲೀಲಾವತಿ ರಜಕ್ಕೆ ಬರೆದು ಮನೆಯಲ್ಲಿ ಇದ್ದರೂ ಮುಂದಾದರೂ ವರ್ಗದ ಶನಿ ತಪ್ಪಿಸಿಕೊಳ್ಳಲು ಎಲ್ಲಿ ಸಾಧ್ಯ. ಏನೇ ಆಗಲಿ, ಅದನ್ನು ಸೆಟ್ ಅಸೈಡ್ ಮಾಡಿಸಲು ಪ್ರಯತ್ನಿಸಬೇಕೆಂದು ಅನ್ನಿಸಿ, ಪ್ರಿನ್ಸಿ ಪಾಲರ ಸಲಹೆ ಕೇಳಿದಳು.

"ನಾನು ನಿನ್ನನ್ನು ಇದೇ ಕಾಲೇಜಿನಲ್ಲಿ ಉಳಿಸಿಕೊಳ್ಳೋಕೆ ಎಷ್ಟೋ ಪ್ರಯತ್ನಿಸಿದೆ. ಆದರೆ ಪ್ರೊ. ಕಪನೀಪತಿರಾಯರ ದೆಸೆಯಿಂದ ಸಾಧ್ಯವಾಗದೆ ಹೋಯಿತು. ಅವರು ನಿನ್ನ ಟ್ರಾನ್ಸ್‌ಫರ್ ಬಗ್ಗೆ ಪಟ್ಟು ಹಿಡಿದುದರಿಂದ ಇನ್ನು ಯಾರಿಗೋ ಹೊರಿಸಬಹುದಾಗಿದ್ದ ಮೂಟೆ ನಿನ್ನ ತಲೆಗೆ ಬಂತು. ಇಟ್ ಈಸ್ ಯುವರ್ ಮಿಸ್ ಫಾರ್‌ಚೂನ್ (ನಿನ್ನ ದುರದೃಷ್ಟ)" ಎಂದರು ಆಕೆ.

"ಈಗಲೂ ನೀನು ತುಂಬಾ ಇನ್‌ಫ್ಲೂಯೆನ್ಸ್ ಮಾಡೋದಾದ್ರೆ ಟ್ರಾನ್ಸ್‌ಫರ್ ಸೆಟ್ ಅಸೈಡ್ ಆದರೂ ಆದೀತು. ನೋಡು ಆ ಪ್ರೊಫೆಸರ್ ಕಪನೀಪತಿರಾಯರು ಇದ್ದಾರಲ್ಲ. ಅವರನ್ನು ಹಿಡಿದರೆ ನಿನ್ನ ಕೆಲಸ ಆಗುತ್ತೆ. ಅವರಿಗೂ ವೈಸ್ ಚಾನ್ಸೆಲರಿಗೂ ತುಂಬಾ ಕೇವಲ. ಅವರೇನಾದರೂ ನಿನ್ನ ವಿಷಯದಲ್ಲಿ ಮನಸ್ಸುಮಾಡಿದರೆ ನಿನ್ನ ಟ್ರಾನ್ಸ್‌ಫರ್ ಅನ್ನು ಕ್ಯಾನ್ಸೆಲ್ ಮಾಡಿಸುತ್ತಾರೆ. ಅಷ್ಟು ಆಗದೆ ಹೋದರೂ ಸದ್ಯಕ್ಕೆ ಸೆಟ್ ಆಸೈಡ್ ಆದರೂ ಮಾಡಿಸಬಲ್ಲರು. ಸಾಧ್ಯವಾದರೆ ಪ್ರಯತ್ನಿಸಿ ನೋಡು. ಆಫ್ ಟರ್ ಆಲ್ ಟ್ರೈಯಲ್ ಕಾಸ್ಟ್ಸ್ ನಥಿಂಗ್ (ಪ್ರಯತ್ನಮಾಡುವುದರಿಂದ ಏನೂ

ನಷ್ಟವಲ್ಲ)" ಎಂದರು. ಈ ಸಲಹೆ ಸೂಕ್ತವಾಗಿ ಕಂಡು ಲೀಲಾವತಿ ಆ ಪ್ರೊಫೆಸರ್ ಕಪನೀಪತಿರಾಯರನ್ನು ನೋಡಲು ಅವರ ಮನೆಗೆ ಹೊರಟಳು.

ಲೀಲಾವತಿ ಕಾಲೇಜಿಗೆ ಮನೆಯಿಂದ ಬರುವಾಗ ಇದ್ದ ಉಲ್ಲಾಸ ನಗುಮುಖ ಈಗ ಕಾಲೇಜನಿಂದ ಹೋಗುವಾಗ ಇರಲಿಲ್ಲ. ಅವಳು ಹೊಸ ದೊಂದು ಚಿಂತೆಯ ಸುಳಿಯಲ್ಲಿ ಸಿಲುಕಿದ್ದಳು. ಅವಳಿಗೆ ತನ್ನ ತಂದೆಯನ್ನು ನೋಡಿಕೊಳ್ಳುವ ಜವಾಬ್ದಾರಿಯೊಂದು ಇಲ್ಲದೆ ಇದ್ದರೆ ಅವಳು ಎಲ್ಲಿಗೆಂದರೆ ಅಲ್ಲಿಗೆ ಹೊರಟುಬಿಡುತ್ತಿದ್ದಳು. ಆದರೆ ಅವಳು ಈಗ ಹಿಂದಿನಂತೆ ಒಂಟಿ ಗಿತ್ತಿಯಲ್ಲ. ಅವಳ ತಂದೆಯ ಆರೋಗ್ಯವನ್ನು ನೋಡಿಕೊಳ್ಳುವ ಜವಾಬ್ದಾರಿ ಅವಳ ಹೆಗಲ ಮೇಲೆ ಇತ್ತು. ಅವರು ಈ ಕೆಲವು ತಿಂಗಳಿಂದ ತಮ್ಮ ಹಳೆಯ ಕಾಹಿಲೆಯಿಂದ ನರಳುತ್ತಿದ್ದರು. ನಂದಿಯಲ್ಲಿ ಒಂದು ಸ್ಥಿಮಿತಕ್ಕೆ ಬಂದಿದ್ದ ಅವರ ದೇಹಸ್ಥಿತಿ ಮೈಸೂರಿಗೆ ಹಿಂದಿರುಗುತ್ತಲು ಮೊದಲಿನಂತೆ ಉಳಿಯಲಿಲ್ಲ. ಅವರಿಗೆ ಹಠಾತ್ತನೆ ಅಶಕ್ತಿ ತಲೆದೋರಿ ಯಾವ ಕೆಲಸ ವನ್ನು ಮಾಡಲೂ ನಿರಾಸಕ್ತಿ ಉಂಟಾಗಿತ್ತು. ಅವರ ಮನೆಯ ಹಿಂದೆಯೇ ಅವರಿಗೆ ಬೇಕಾಗಿದ್ದ ಸುಮಿತ್ರೆ ಇದ್ದುದರಿಂದ ದೇಹಸ್ಥಿತಿ ಕೊಂಚ ಹೆಚ್ಚು ಕಡಿಮೆಯಾದರೆ ಸಾಕು, ಕೂಡಲೇ ವೈದ್ಯಕೀಯ ನೆರವು ಸಿಕ್ಕುತ್ತಿತ್ತು. ಈ ಅನುಕೂಲ ಬೇರೆಡೆಯಲ್ಲಿ ಅವರಿಗೆ ದೊರೆಯುತ್ತಿರಲಿಲ್ಲ. ಸುಮಿತ್ರೆ ವಿಶ್ವನಾಥರಾಯರನ್ನು ಮಗಳಿಗೂ ಹೆಚ್ಚಾಗಿ ವಿಚಾರಿಸಿಕೊಳ್ಳುತ್ತಿದ್ದರು. ಅವಳು ಇಂಜೆಕ್ಷನ್ ಆಗಲೀ, ಔಷಧಿಯಾಗಲೀ ಕೊಡುವುದಿದ್ದರೆ ಲೀಲಾ ವತಿಗಾಗಿ ಕಾಯುತ್ತಿರಲಿಲ್ಲ. ವಿಶ್ವನಾಥರಾಯರ ಆರೋಗ್ಯ ತನಗೆ ಸೇರಿ ದ್ದೆಂದು ಅವಳು ತಿಳಿದಿದ್ದಳು.

ಲೀಲಾವತಿಗೂ ತಂದೆಯನ್ನು ಬಿಟ್ಟು ಇನ್ನೊಂದು ಕಡೆಗೆ ಹೋಗುವು ದೆಂದರೆ ಅವಳಿಂದ ಆಗದ ಕೆಲಸ. ತಂದೆಯ ಮನಃಶಾಂತಿ ಕದಡದೆ ಇರ ಬೇಕಾದರೆ ತಾನು ಅವರ ಎದುರಿಗೆ ಇರಲೇ ಬೇಕು. ಲೀಲಾವತಿಯೂ ಉತ್ಸಾಹಶಾಲಿಯಾಗಿರಬೇಕಾದರೆ ತಂದೆ ವಿಶ್ವನಾಥರಾಯರು ಜತೆಯಲ್ಲಿರ ಬೇಕು. ಇದನ್ನು ವಿಶ್ವನಾಥರಾಯರೂ ಬಲ್ಲರು. ಅಂತಲೇ ಅವರು ಲೀಲಾ ವತಿಯನ್ನು ಎಡೆಬಿಡುತ್ತಿರಲಿಲ್ಲ. ಅವರಿಗೆ ಈಚಿನ ದಿನಗಳಲ್ಲಿ ತಮ್ಮ

ರಕ್ತದ ಒತ್ತಡದ ಕಾಹಿಲೆ ಮರುಕೊಳಿಸಲು ಆರಂಭಿಸಿದ ಮೇಲೆ ಲೀಲಾವತಿಯ ವಿಷಯದಲ್ಲಿ ಈ ಮೊದಲು ಇರದಿದ್ದ ಕಾತರತೆ ಉಂಟಾಗಿತ್ತು. ತಾನು ಯಾವ ಘಳಿಗೆಯಲ್ಲಿ ಕಣ್ಣು ಮುಚ್ಚಿಕೊಳ್ಳುವೆನೋ ತನ್ನನಂತರ ಲೀಲಾವತಿಯನ್ನು ನೋಡಿಕೊಳ್ಳುವವರು ಯಾರು? ಅವಳಿಗೆ ಯಾರು ದಿಕ್ಕು? ಎಂಬೀ ಪ್ರಶ್ನೆಗಳಿಗೆ ಉತ್ತರವಾಗಿ ಲೀಲಾವತಿಯನ್ನು ಯಾವನಾದರೂ ಅನುರೂಪನಾದ ವ್ಯಕ್ತಿಗೆ ಮದುವೆಮಾಡಿ ತಾವು ನಿಶ್ಚಿಂತೆಯಿಂದ ಸಾಯಬೇಕೆಂದು ಅವರ ಆಸೆ. ಇದನ್ನು ಅವರ ಮಗಳ ಕೂಡ ಬಾಯಿಬಿಟ್ಟು ಹೇಳಲಾರದೆ ಅವಳಿಗೆ ಪರೋಕ್ಷವಾಗಿ ತಮ್ಮ ಮನಸ್ಸಿನ ಆಸೆ ತಿಳಿಯುವಂತೆ ಮಾಡಿದ್ದರು. ಸುರೇಂದ್ರನ ಪರಿಚಯವಾದಲಾಗಾಯಿತು ವಿಶ್ವನಾಥ ರಾಯರಿಗೆ ಅವನ ಮೇಲೆ ಒಂದು ಕಣ್ಣು. ಅವನು ಹೇಗೂ ವಿಧುರ. ತಮ್ಮ ಸ್ವಜನ. ಕುಲ ಗೋತ್ರ ನೋಡುವಂತೆ ಇಲ್ಲ. ಅವನಿಗೆ ಲೀಲಾವತಿಯನ್ನು ಕಂಡರೆ ಪ್ರಾಣ. ಅವಳನ್ನು ತುಂಬಾ ಸುಖವಾಗಿ ಇಟ್ಟುಕೊಳ್ಳುತ್ತಾನೆನ್ನಲು ಸಂಶಯವಿಲ್ಲ, ಎಂಬುದೇ ವಿಚಾರಗಳು ಅವರ ತಲೆಯಲ್ಲಿ ಸುಳಿದು ಸುರೇಂದ್ರನಲ್ಲಿ ಭಾವೀ ಅಳಿಯನನ್ನು ಕಾಣಲು ಯತ್ನಿಸಿದ್ದರು. ಅವರು ಸುರೇಂದ್ರನ ಮನೆಗೆ ಹೋಗಿ ಬರುತ್ತಿದ್ದುದು ಅವರ ಮನೆಯ ಸ್ಥಿತಿಗತಿ ತಿಳಿಯಲೋಸುಗವೇ. ಅವರಿಗೆ ಎಲ್ಲ ರೀತಿಯಲ್ಲಿ ಸುರೇಂದ್ರ ತಮ್ಮ ಲೀಲಾವತಿಗೆ ಯೋಗ್ಯವರನೆಂಬುದು ದೃಢವಾದೊಡನೆಯೇ, ಈ ವಿಷಯ ಪ್ರಸ್ತಾಪ ಸುರೇಂದ್ರನೊಡನೆ ಮಾಡಿ ಅವನ ಅನುಮತಿಯನ್ನು ದೊರಕಿಸಿಕೊಂಡಿದ್ದರು. ಇನ್ನು ಉಳಿದದ್ದು ಲೀಲಾವತಿಯ ಅನುಮತಿ. ಅದೇ ಕಷ್ಟ! ಒಂದು ದಿನ ವಿಶ್ವನಾಥರಾಯರು ಅಶಕ್ತಿಯಿಂದ ಹಾಸಿಗೆ ಹಿಡಿದು ಮಲಗಿದ್ದಾಗ ಮಗಳೊಡನೆ ಅದೂ ಇದೂ ಮಾತನಾಡುತ್ತ ತಾವು ಹೇಳಬೇಕೆಂದಿದ್ದ ವಿಷಯಕ್ಕೆ ಬಂದರು. ತಮ್ಮ ಮನಸ್ಸಿನಲ್ಲಿ ಇರುವ ಎಲ್ಲ ವಿಷಯವನ್ನೂ ಕುಲಂಕಷವಾಗಿ ತಿಳಿಸಿ, ಲೀಲಾವತಿಯ ಬಾಯಿಂದ ಏನು ಬರುವುದೋ ಎಂದು ಕಾದು ಕುಳಿತರು. ಲೀಲಾವತಿ ಈಗ ಗೊಂದಲದಲ್ಲಿ ಸಿಕ್ಕಿ ಬಿದ್ದಳು. ಆಗಲಿ ಎನ್ನಲಾರಳು—ಬೇಡ ಎನ್ನಲಾರಳು. ತಂದೆಯ ಆ ಸ್ಥಿತಿಯಲ್ಲಿ ಆಗದು ಎಂದು ಹೇಳಿದರೆ, ತಾನೇ ಹೃದ್ರೋಗದಿಂದ ನರಳುವ

ತಂದೆಗೆ ಕೈಯ್ಯಾರ ವಿಷವಿಟ್ಟಂತೆ. ಆಗಲಿ ಎಂದರೆ ತಾನು ಕಾಯಾ ವಾಚಾ ಮನಸಾ ಇಷ್ಟಪಡದೆ ಇದ್ದ ಮದುವೆಗೆ ಒಪ್ಪಿಗೆ ಕೊಟ್ಟಂತೆ. ಇದರಿಂದ ತನ್ನ ಸರ್ವಸ್ವದ ಬಲಿದಾನ. ಇವುಗಳಲ್ಲಿ ಯಾವುದನ್ನುಅವಳು ಆರಿಸಿಕೊಳ್ಳಬೇಕು? ಲೀಲಾವತಿಗೆ ಈ ಸಮಸ್ಯೆಯಿಂದ ಪಾರಾಗುವ ದಾರಿ ತೋರಲಿಲ್ಲ. ಅವಳು ತಂದೆಯ ಕ್ಷೀಣಿಸುತ್ತಿದ್ದ ಆರೋಗ್ಯವನ್ನು ನೆನೆದು ಅವರ ಮನಸ್ಸಿಗೆ ನೋವುಂಟುಮಾಡಲಾರದೆ ಮದುವೆಗೆ ತನ್ನ ಒಪ್ಪಿಗೆ ಕೊಟ್ಟಳು. ಸುರೇಂದ್ರನನ್ನು ಕೈಹಿಡಿಯಲು ಒಪ್ಪಿದಳು. ಇನ್ನೇನು ಅವರಿಬ್ಬರ ಮದುವೆ ಮುಂದಿನ ತಿಂಗಳಲ್ಲಿ ನಡೆಯಬೇಕು ಎನ್ನುವಾಗ ವಿಶ್ವನಾಥರಾಯರ ದೇಹಸ್ಥಿತಿ ತುಂಬಾ ಉಲ್ಬಣಕ್ಕೆ ಇಟ್ಟುಕೊಂಡಿತು. ಅವರು ಆರೋಗ್ಯವಾದ ಮೇಲೆ ಮದುವೆಯ ಮಾತು ಎಂದು ಸದ್ಯಕ್ಕೆ ಈ ಮಾತನ್ನು ಅನಿಶ್ಚಿತವಾಗಿ ಮುಂದಕ್ಕೆ ಹಾಕಲಾಗಿತ್ತು. ಗೃಹಕೃತ್ಯದ ಸಂಗತಿ ಹೀಗಿರುವಾಗ ಲೀಲಾವತಿಯ ವರ್ಗದ ಭೂತ ಬೇರೆ ಕಾಣಿಸಿಕೊಂಡಿತ್ತು.

ಲೀಲಾವತಿ ಮನೆಗೆ ಬಂದವಳೇ ಮಂಕಾಗಿ ಕುಳಿತುಬಿಟ್ಟಳು. ವಿಶ್ವನಾಥರಾಯರು ಎಷ್ಟು ವಿಚಾರಿಸಿದರೂ ಅವಳು ತನ್ನ ವರ್ಗದ ವಿಷಯವನ್ನು ಹೊರಗೆಡವಲಿಲ್ಲ. "ಯಾಕೋ ಬೇಜಾರಾಗಿದೆ" ಎಂದು ಮಾತು ಹಾರಿಸಿಬಿಟ್ಟಳು. ಹೇಗಾದರೂ ಮಾಡಿ ತನ್ನ ವರ್ಗವನ್ನು ಸದ್ಯಕ್ಕೆ ರದ್ದುಗೊಳಿಸಬೇಕು, ಎಂದು ನಿರ್ಧರಿಸಿ ಪ್ರೊಫೆಸರ್ ಕಪನೀಪತಿರಾಯರನ್ನು ಕಾಣಲು ಹೊರಟಳು.

ಲೀಲಾವತಿಗೆ ಪ್ರೊಫೆಸರ್ ಕಪನೀಪತಿರಾಯರ ಪರಿಚಯ ಸುಮಾರಾಗಿತ್ತು. ಹಿಂದೆ ಮಹಾರಾಣಿ ಕಾಲೇಜಿನ ಯೂನಿಯನ್ ಆಶ್ರಯದಲ್ಲಿ ಒಂದು ಸಾರ್ವಜನಿಕ ಚರ್ಚಾಕೂಟ ನಡೆದಿತ್ತು. ಅದರಲ್ಲಿ ಲೀಲಾವತಿ ಮತ್ತು ಕಪನೀಪತಿರಾಯರು ತಮ್ಮ ತಮ್ಮ ಕಾಲೇಜುಗಳನ್ನು ಪ್ರತಿನಿಧಿಸಿದ್ದರು. ಆ ದಿನದ ಚರ್ಚೆಯ ವಿಷಯ "ಭಾರತದ ಸ್ತ್ರೀ ಜನೋದ್ಧಾರ ಸ್ತ್ರೀಯರ ಆರ್ಥಿಕ, ಸಾಮಾಜಿಕ ಸ್ವಾತಂತ್ರ್ಯದಿಂದ ಮಾತ್ರವೇ ಸಾಧ್ಯ." ಲೀಲಾವತಿ ಈ ವಿಷಯದ ಪರವಾಗಿ ಮಾತನಾಡಿದ್ದಳು. ಇದನ್ನು ವಿರೋಧಿಸಿ ಕಪನೀಪತಿರಾಯರು ಮಾತನಾಡಿದ್ದರು. ಆ ದಿನ ಕಪನೀಪತಿರಾಯರು

ತಮ್ಮ ಭಾಷಣದಲ್ಲಿ ಮಂಡಿಸಿದ್ದ ವಿಷಯ ಅವರ ಸಂಕುಚಿತ ದೃಷ್ಟಿಯ ಸಂಕೇತವಾಗಿತ್ತು. ಹೆಣ್ಣು ಹುಟ್ಟಿರುವುದು ಗಂಡಿನ ಸುಖಕ್ಕೆಂದೂ, ಹೆಣ್ಣಿಗೆ ಸ್ವಾತಂತ್ರ್ಯ ಕೊಟ್ಟರೆ ಸಮಾಜದ ವ್ಯವಸ್ಥೆ ತಲೆಕೆಳಗಾಗುವುದೆಂದೂ, ಹೆಣ್ಣಿನಿಂದಲೇ ಹೆಣ್ಣಿಗಾಗಿಯೇ ಜಗತ್ತಿನಲ್ಲಿ ಅನೇಕ ಮಹಾ ಯುದ್ಧಗಳು ಸಂಭವಿಸಿತೆಂದೂ ಹೆಣ್ಣಿಗೆ ಅವಳು ಬಯಸುವ ಸ್ವಾತಂತ್ರ್ಯ ಕೊಟ್ಟರೆ ಅವಳಿಂದ ಜಗತ್ಕಲ್ಯಾಣವಾಗುವ ಬದಲು ಜಗತ್ಪ್ರಳಯವಾಗುವುದೆಂದೂ ಹೆಣ್ಣು ಓದು ಬರಹಗಳಲ್ಲೂ ಲಲಿತಕಲೆಗಳಲ್ಲೂ ಮುಂದುವರಿದು, ಅದನ್ನು ಗಂಡಿನ ಪ್ರೀತ್ಯಾದರ ಸೌಖ್ಯಗಳಿಗಾಗಿ ವಿನಿಯೋಗಿಸಿ ಜೀವನ ಸಾರ್ಥಕಗೊಳಿಸಬೇಕೆಂದೂ ಹೇಳಿದರು. ಆ ದಿನ ಅವರು ಭಾಷಣ ಮಾಡುವಾಗ ಹಲವಾರು ಬಾರಿ ಹೆಣ್ಣು ಹುಡುಗಿಯರಿಂದ " ಶೇಮ್! " ಎಂದು ಹೊಗಳಿಸಿಕೊಂಡರು. ಕಪನೀಪತಿರಾಯರ ವಿಚಾರ ವೈಖರಿಯನ್ನು ಕೇಳಿ ಹೆಣ್ಣಿನ ರೋಷವೇ ಸಿಡಿಯಿತೆಂಬಂತೆ ಲೀಲಾವತಿಯ ಭಾಷಣವೆಲ್ಲಾ ಅವರ ವಿಚಾರ ಸರಣಿಯ ಮೂರ್ಖತನವನ್ನು ಎತ್ತಿ ತೋರಿಸುವುದರಲ್ಲಿಯೇ ಮೀಸಲಾಯಿತು. ಅವಳು ನೆರೆದವರೆಲ್ಲರಿಗೆ ಕಪನೀಪತಿರಾಯರು ಒಬ್ಬ ಮೂರ್ಖರೆಂಬಂತೆ ಮಾಡಿಬಿಟ್ಟಿದ್ದಳು.

ಆ ದಿನದ ಲೀಲಾವತಿಯ ಮಾತಿನ ಚಕಮುಕಿ ಕಪನೀಪತಿರಾಯರಿಗೆ ತನ್ನ ಕಾವು ಕೊಡದೆ ಇರಲಿಲ್ಲ. ಅವರು ಲೀಲಾವತಿಯ ರೂಪದಿಂದ ಎಷ್ಟು ಆಕರ್ಷಿತರಾಗಿದ್ದರೋ ಅವಳ ವಿಚಾರ ವೈಖರಿ, ವಾಗ್ಮಿತೆಗಳಿಗಾಗಿ ಅಷ್ಟೇ ಆಕರ್ಷಿತರಾದರು. ಅವಳನ್ನು ಅವರು ನಿಂದಿಸುವ ಬದಲು ಅವಳು ಭಾಷಣ ಮುಗಿಸಿ ಮನೆಗೆ ಹೋಗುವಾಗ ತನ್ನ ಮೆಚ್ಚಿಗೆಯನ್ನು ತೋರಿಸಿ, ಅವಳನ್ನು ತನ್ನ ಕಾರಿನಲ್ಲೇ ಅವಳ ಮನೆಗೆ ಕರೆತಂದು ಬಿಡುವುದಾಗಿ ಹೇಳಿದರು. ಆದರೆ ಇದನ್ನು ಲೀಲಾವತಿ ಬೇಕೆಂದೇ ನಿರಾಕರಿಸಿದ್ದಳು. ಆ ಲಾಗಾಯಿತು ಲೀಲಾವತಿಗೆ ಪ್ರೊಫೆಸರ್ ಕಪನೀಪತಿರಾಯರೆಂದರೆ ಮೈ ಎಲ್ಲಾ ಉರಿದುಹೋಗುತ್ತಿತ್ತು. ಇಂಥ ವ್ಯಕ್ತಿಯ ಬಳಿಗೆ ತಾನು ಹೋಗಬೇಕಾಯಿತೇ ಎಂದು ಲೀಲಾವತಿ ತನ್ನ ವಿಧಿಯನ್ನು ಹಳಿದುಕೊಂಡು ಅವರ ಮನೆಗೆ ಹೊರಟಳು. ಲೀಲಾವತಿ ಕಪನೀಪತಿರಾಯರ ಮನೆಗೆ ಬಂದಾಗ ಕಪನೀಪತಿ

ರಾಯರು ಆಗತಾನೇ ಕಾಲೇಜು ಮುಗಿಸಿಕೊಂಡು ಮನೆಗೆ ಬಂದು ಚಹ ಪಾನ ಮಾಡುತ್ತಾ ಕುಳಿತಿದ್ದರು. ಲೀಲಾವತಿ ಅಂಜುತ್ತಲೇ ಮನೆಯ ಕಾಂಪೌಂಡನ್ನು ಪ್ರವೇಶಿಸಿ ಜವಾನನ ಮೂಲಕ ತಾನು ಬಂದಿರುವ ವಿಷಯವನ್ನು ತಿಳಿಸಿದಳು. ಜವಾನ ಲೀಲಾವತಿಗೆ ಕೂತುಕೊಳ್ಳಲು ಕುರ್ಚಿಯನ್ನು ತೋರಿಸಿ ಮಹಡಿಯ ಮೇಲೆ ಇದ್ದ ಕಪನೀಪತಿಯವರನ್ನು ಕರೆತರಲು ಹೊರಟ. ತನ್ನನ್ನು ಯಾರು ಸಂಜೆ ಹುಡುಕಿಕೊಂಡು ಬಂದಿದ್ದಾರೆ ಎಂದು ನೋಡಲು ಕೂಡಲೇ ಕಪನೀಪತಿರಾಯರು ಕೆಳಗೆ ಇಳಿದು ಬಂದರು. ಲೀಲಾವತಿ ಅವರನ್ನು ನೋಡುತ್ತಲೇ "ನಮಸ್ತೆ" ಎಂದಳು. ಪ್ರೊಫೆಸರರು ಪ್ರತಿವಂದನೆ ಮಾಡಿ, ನಸುನಗುತ್ತಾ ಲೀಲಾವತಿಯನ್ನು ಕೂತುಕೊಳ್ಳಲು ಹೇಳಿ ತಾವೂ ಇನ್ನೊಂದು ಕುರ್ಚಿಯಲ್ಲಿ ಕೂತರು. ಲೀಲಾವತಿ ತನ್ನ ಪರಿಚಯ ಹೇಳಿದಳು. "ಓ ಐಸೀ ಯು ಆರ್ ಲೀಲಾ ಹು ಸ್ಪೋಕ್ ಸೊ ಬ್ರಿಲಿಯಂಟ್‌ಲಿ ದಟ್ ಡೇ (ಆ ದಿನ ಅಷ್ಟು ಸೊಗಸಾಗಿ ಮಾತನಾಡಿದ ಲೀಲಾ ನೀವೇನೇ....)" ಎಂದು ಮುಖವನ್ನು ಅರಳಿಸಿದರು.

"ಎಸ್ ಐ ಯಾಮ್ ಲೀಲಾವತಿ ಹು ಸ್ಪೋಕ್ ದಟ್ ಡೇ.... ಇನ್ನೂ ನೀವು ಅದನ್ನು ಜ್ಞಾಪಕದಲ್ಲಿ ಇಟ್ಟುಕೊಂಡಿದ್ದೀರಲ್ಲ—ಬಹಳ ಸಂತೋಷ."

"ಎಷ್ಟು ಸೊಗಸಾಗಿ ಮಾತನಾಡಿದಿರಿ ನೀವು. ಇಟ್ ವಾಸ್ ವಂಡರ್‌ಫುಲ್! ಇಟ್ ವಿಲ್ ಬಿ ಮೈ ಪ್ಲೆಜರ್ ಟು ಸೀ ಯು ಟಾಕ್ (ನೀವು ಮಾತನಾಡುವುದನ್ನು ನೋಡುವುದೇ ಒಂದು ಸೊಗಸು)" ಎಂದು ಶ್ಲಾಘಿಸಿದರು. ಅನಿರೀಕ್ಷಿತವಾಗಿ ಬಂದ ಈ ಹೊಗಳಿಕೆಯಿಂದ ಲೀಲಾವತಿ ಕ್ಷಣಕಾಲ ಅಧೀರಳಾಗದೆ ಇರಲಿಲ್ಲ. ಇದು ನಾಚಿಕೆಯಾಗಿ ಪರಿವರ್ತಿತವಾಗಿ ಅವಳ ಮುಖಕ್ಕೆ ಅಪೂರ್ವ ಶೋಭೆಯನ್ನು ಕೊಟ್ಟಿತು.

ಅನಂತರ ಕ್ಷೇಮ ಸಮಾಚಾರದ ವಿಷಯ ಪ್ರಸ್ತಾಪಿಸಿ, ತಾನು ಬಂದ ಕಾರಣ ತಿಳಿಸಿ, ಹೇಗಾದರೂ ಮಾಡಿ ತನ್ನ ವರ್ಗವನ್ನು ರದ್ದುಪಡಿಸಿಕೊಡಬೇಕೆಂದು ಪ್ರಾರ್ಥಿಸಿದಳು. ಕಪನೀಪತಿರಾಯರು ಲೀಲಾವತಿ ಹೇಳುವುದನ್ನೆಲ್ಲ ಸಮಾಧಾನ ಚಿತ್ತದಿಂದ ಕೇಳಿ ಈ ವಿಷಯ ತಮ್ಮ ಕೈಮೀರಿದೆ

ಎಂದೂ, ಆದರೂ ಲೀಲಾವತಿಗಾಗಿ ತಾವು ಪ್ರಯತ್ನಿಸುವುದಾಗಿಯೂ ತನ್ನನ್ನು ಮರುದಿನ ಸಂಜೆಯ ವೇಳೆಗೆ ಬಂದು ನೋಡಿದರೆ ಯಾವುದನ್ನೂ ತಿಳಿಸುವುದಾಗಿಯೂ ಹೇಳಿದರು.

"ನನ್ನಿಂದಾದಷ್ಟು ಪ್ರಯತ್ನಿಸುತ್ತೇನೆ. ಇಷ್ಟರ ಮೇಲೆ ನಿಮ್ಮ ಅದೃಷ್ಟ." ಎಂದು ಹೇಳಿ ಲೀಲಾವತಿಗೆ ಬಲವಂತವಾಗಿ ಕಾಫಿ ಕೊಟ್ಟು ಅವಳನ್ನು ನಗುಮುಖದಲ್ಲಿ ಬೀಳ್ಕೊಟ್ಟರು. ಅವರು ತನ್ನನ್ನು ನಡಸಿಕೊಂಡ ರೀತಿಯಿಂದ ಲೀಲಾವತಿಗೆ ಬಹಳ ಸಮಾಧಾನವಾಗಿತ್ತು. ಅವಳು ಅವರ ಮನೆಯನ್ನು ಪ್ರವೇಶಿಸುವಾಗ ಹೇಗೋ ಏನೋ ಎಂದು ಅಂಜುತ್ತಲೇ ಕಾಲಿಟ್ಟಿದ್ದಳು. ಈಗ ಹೋಗುವಾಗ ಒಂದು ಬಗೆಯ ಸಮಾಧಾನ ಉಂಟಾಗಿತ್ತು. ಕಪನೀಪತಿರಾಯರು ತಮ್ಮಿಂದಾದಷ್ಟು ಪ್ರಯತ್ನಿಸುವುದಾಗಿ ಹೇಳಿದ್ದುದು ಮಾತ್ರವಲ್ಲ. ತೊಂಬತ್ತೊಂಬತ್ತು ಪಾಲು ವರ್ಗವನ್ನು ರದ್ದು ಪಡಿಸಿಕೊಡುವುದಾಗಿ ಭರವಸೆ ಕೊಟ್ಟಿದ್ದರು. ಇದರಿಂದಾಗಿ ಅವಳ ಮನಸ್ಸಿಗೆ ಕವಿದಿದ್ದ ಎಲ್ಲ ಮೋಡಗಳೂ ಚೆದರಿ ಮನಸ್ಸು ನಿರ್ಮಲವಾಯಿತು. ತಾನು ಪ್ರೊಫೆಸರರ ಬಗ್ಗೆ ತಳೆದಿದ್ದ ಪೂರ್ವ ಅಭಿಪ್ರಾಯಕ್ಕಾಗಿ ತನ್ನನ್ನೇ ನಿಂದಿಸಿಕೊಳ್ಳದೆ ಇರಲಿಲ್ಲ. ಅವರ ವಿಚಾರ ಹೇಗೇ ಇರಲಿ, ಅವರು ತಮ್ಮ ಮನೆಗೆ ಬಂದ ಅತಿಥಿಗಳನ್ನು ಬಹಳ ನಯವಿನಯಗಳಿಂದ ನೋಡಿಕೊಳ್ಳುವ ಸದ್ಗೃಹಸ್ಥರೆಂದು ತಿಳಿದಳು. ಪ್ರೊಫೆಸರು ಲೀಲಾವತಿಯನ್ನು ಕಳುಹಿಸಿಕೊಡಲು ಕಾಂಪೌಂಡಿನ ತನಕ ಬಂದಿದ್ದು, ಅವಳು ರಸ್ತೆಗೆ ಬಂದೊಡನೆಯೇ "ಡೋಂಟ್ ಫೈಲ್ ಟು ಮೀಟ್ ಮಿ ಟುಮಾರೋ." (ನಾಳೆ ನನ್ನನ್ನು ನೋಡಲು ಮರೆಯಬೇಡಿ) ಎಂದು ಒತ್ತಿ ಹೇಳಿದರು. ತನ್ನ ವಿಷಯದಲ್ಲಿ ಇಷ್ಟು ಆಸಕ್ತಿ ವ್ಯಕ್ತಪಡಿಸಿದ ಪ್ರೊಫೆಸರರ ಬಗ್ಗೆ ಕೃತಜ್ಞತೆಯನ್ನು ಸೂಚಿಸುತ್ತಾ ಲೀಲಾವತಿ ತನ್ನ ಮನೆಗೆ ಹೊರಟಳು.

ಅವಳಿಗೆ ಎಂದಿಗೆ ನಾಳೆ ಸಂಜೆ ಬಂದೀತು ಎನ್ನುವ ಉದ್ವೇಗ. ಪ್ರೊಫೆಸರರಿಗೂ ಇದರ ನೂರ್ಮಡಿ ಕುತೂಹಲ ಉದ್ವೇಗಗಳು ಇತ್ತೆಂಮ ಲೀಲಾವತಿಗೆ ಆ ಕ್ಷಣದಲ್ಲಿ ಅರಿವಾಗಲಿಲ್ಲ. ತನ್ನ ವಿಷಯದಲ್ಲಿ ಪ್ರೊಫೆಸರರು ಯಾರ ವಿಷಯದಲ್ಲಿಯೂ ತೋರಿಸದಿದ್ದ ಆಸಕ್ತಿಯನ್ನು ಪಶ್ಚಾತ್ತನೆ

ತೋರಿಸಿ, ತನ್ನನ್ನು ಹಿಂದೆಂದೂ ಸರಿಯಾಗಿ ನೋಡಿರದಿದ್ದರೂ ಬಹಳ ಕಾಲದಿಂದ ಬಲ್ಲವರಂತೆ ನಡಸಿಕೊಂಡಿದ್ದುದೇಕೆಂದು ಅವಳ ಮುಗ್ಧ ಮನಸ್ಸಿಗೆ ಹೊಳೆಯದೆ ಹೋಯಿತು. ಅವಳು ಪ್ರೊಫೆಸರರು ಹೇಳಿದ್ದಂತೆ ಮೂರನೆಯ ದಿನ ಸಂಜೆ ಪ್ರೊಫೆಸರರ ಮನೆಗೆ ಬಂದಳು.

ಆ ದಿನ ಪ್ರೊಫೆಸರ್ ಕಪನೀಪತಿಯವರು ತಾವು ಹೇಳಿದ್ದ ಹೊತ್ತಿನಲ್ಲಿ ಬೇಕೆಂದೇ ಮನೆಯಲ್ಲಿ ಇರಲಿಲ್ಲ. ತಾವು ಕೊಂಚ ಹೊತ್ತಿನಲ್ಲಿಯೇ ಬಂದು ಬಿಡುವುದಾಗಿಯೂ, ತಮ್ಮನ್ನು ಹುಡುಕಿಕೊಂಡು ಬಂದ ಲೀಲಾವತಿ ತಮಗಾಗಿ ಕಾಯಬೇಕೆಂದೂ, ಆಳಿನ ಕೈಲಿ ಹೇಳಿ ಹೊರಗೆ ಹೋಗಿದ್ದರು. ಅವರು ಮನೆಗೆ ಬರುವ ವೇಳೆಗೆ ಸಂಜೆ ಸಂದು ರಾತ್ರಿ ಎಂಟು ಗಂಟೆಯಾಗಿತ್ತು. ಅಂದು ಪ್ರೊಫೆಸರ್ ಅವರಿಗೆ ಬೇರೆ ಕೆಲಸವಿರದೆ ಇದ್ದರೂ ಲೀಲಾವತಿಯನ್ನು ಬೇಕೆಂದೇ ಅಲ್ಲಿಯ ತನಕ ಕಾಯಿಸಿದ್ದರು. ಅವರ ಮನಸ್ಸಿನ ಆಲೋಚನೆಗಳೇ ಬೇರೆಯಾಗಿದ್ದುವು. ಅವುಗಳನ್ನು ಲವಲೇಶ ತಿಳಿಯದೆ ಇದ್ದ ಲೀಲಾವತಿ ಬಹುಶಃ ತನ್ನ ಕೆಲಸ ಎಲ್ಲೋ ಆಗಿಲ್ಲವೆಂದು ಕಾಣುತ್ತೆ. ಅದೇ ಕೆಲಸದಲ್ಲಿ ಅವರು ತೊಡಗಿ ಮನೆಗೆ ಬರುವುದು ಹೊತ್ತಾಗಿದೆ, ಎಂದು ಆಲೋಚಿಸುತ್ತಾ ಕುಳಿತಿದ್ದಳು. ಏನೇ ಆಗಲಿ, ಎಷ್ಟು ಹೊತ್ತೇ ಆಗಲಿ, ಇಂದು ಅವರನ್ನು ಕೂಡ ತನ್ನ ವರ್ಗದ ವಿಷಯವನ್ನು ತಿಳಿದುಕೊಂಡೇ ಹೋಗಬೇಕೆಂದು ಅವಳು ಕೌತುಕವಾಗಿದ್ದಳು.

ಸುಮಾರು ಎಂಟರ ಸಮಯದಲ್ಲಿ ಕಪನೀಪತಿರಾಯರು ಲಗುಬಗೆಯಿಂದ ಮನೆಗೆ ಬಂದರು. ಬಂದವರೇ ತಮಗಾಗಿ ಕಾದು ಕುಳಿತಿದ್ದ ಲೀಲಾವತಿಯನ್ನು ನೋಡಿ,

"ಐ ಯೂಮ್ ಸಾರಿ, ಐ ಮೇಡ್ ಯು ವೈಟ್ ಫಾರ್ ಎ ಲಾಂಗ್ ಟೈಂ." (ನಿಮ್ಮನ್ನು ಬಹಳ ಕಾಲ ಕಾಯಿಸಿಬಿಟ್ಟೆ) ಏನು ಮಾಡುವುದು ರಿಜಿಸ್ಟ್ರಾರರು ಸಂಜೆಯ ತನಕ ಸಿಕ್ಕಲಿಲ್ಲ. ಅವರಿಗೆ ಬೆಂಗಳೂರು ಕ್ಯಾಂಪು ಬಿದ್ದುಬಿಟ್ಟು, ಈಗತಾನೇ ಬೆಂಗಳೂರಿನಿಂದ ಹಿಂತಿರುಗಿ ಬಂದರು. ನಾನು ಅವರಿಗಾಗಿ ಕಾಯುತ್ತಲಿದ್ದೆ. ನಿಮಗೆ ಬನ್ನಿ ಎಂದು ಹೇಳಿಬಿಟ್ಟ ಮೇಲೆ ಬರಿಗೈಯಲ್ಲಿ ಹಿಂದಿರುಗಬಾರದೆಂದು........"

" ಹಾಗಾದರೆ ಏನು ಮಾಡಿಕೊಂಡು ಬಂದಿರಿ ? "

"ಆ ವಿಷಯ ಆಮೇಲೆ ಹೇಳ್ತೀನಿ ' ಪ್ಲೀಸ್ ಓನ್ಲಿ ಒನ್ ಮಿನೀಟ್ ' —ಬಂದುಬಿಟ್ಟೆ "—ಎಂದು ಬಟ್ಟೆ ಬದಲಿಸಿ ಬರಲು ಮಹಡಿಯ ಮೇಲೆ ಹೊರಟರು.

ಅವರು ಮತ್ತೆ ಬರುವ ತನಕ ಯಾವುದನ್ನೂ ತಿಳಿಯದೆ ಕುಳಿತಿರ ಲಾರದೆ " ಹೋಗಲಿ ಹಣ್ಣೋ ಕಾಯೋ—ಇದಿಷ್ಟೆ ಹೇಳಿ " ಎಂದಳು.

" ನಾನು ಕೈ ಹಾಕಿದ ಮೇಲೆ ಹಣ್ಣಾಗದೆ ಕಾಯೆ ? " ಎಂದು ಹೇಳುತ್ತ ಕಪನೀಪತಿಯವರು ಮಹಡಿಯನ್ನು ಹತ್ತಿ ಹೊರಟು ಹೋದರು.

ಲೀಲಾವತಿಗೆ ಎದೆಯ ಬಡಿತವನ್ನು ತಡೆಯಲು ಆಗಲಿಲ್ಲ. ಅವಳು ಮೈಯೆಲ್ಲಾ ಕಿವಿಯಾಗಿಸಿಕೊಂಡು ಎಂದಿಗೆ ಕಪನೀಪತಿಯವರು ಬರುತ್ತಾರೆ, ಎಲ್ಲ ವಿಷಯ ತಿಳಿಸುತ್ತಾರೆ, ಎಂದು ಕಾದು ಕುಳಿತಳು. ಒಂದೊಂದು ನಿಮಿಷವೂ ಅವಳಿಗೆ ಒಂದೊಂದು ಯುಗದಂತೆ ಕಂಡಿತು. ಅವಳು ಹೀಗೆ ಉತ್ಸುಕತೆಯಿಂದ ಇರುವಾಗ್ಗೆ ಕಪನೀಪತಿರಾಯರು ಲೀಲಾವತಿಗೆ ಮೇಲಕ್ಕೆ ಬರಲು ಹೇಳಿ ಕಳುಹಿಸಿದರು. ಲೀಲಾವತಿ ಒಂದು ಕ್ಷಣ ಮಹಡಿಯ ಮೇಲಕ್ಕೆ ಹೋಗಲೋ ಬೇಡವೋ ಎಂದು ಆಲೋಚಿಸಿದಳು. ತನ್ನನ್ನು ಮೇಲೆ ಬರಲು ಹೇಳುವ ಬದಲು ತಾನೇ ಕೆಳಗೆ ಇಳಿದು ಬಂದಿದ್ದರೆ ಚೆನ್ನಾ ಗಿತ್ತೆಂದು ಅಂದುಕೊಂಡು ಕ್ಷಣಕಾಲ ಸುಮ್ಮನೆ ಇದ್ದು, ತನ್ನ ಕಾತರ ಭಾವ ವನ್ನು ಅದುಮಿ ಹಿಡಿಯಲಾರದೆ, ಜವಾನನನ್ನು ಅನುಸರಿಸಿ ಮೇಲಕ್ಕೆ ಹೊರ ಟಳು.

ಪ್ರೊಫೆಸರರ ಮನೆ ದೊಡ್ಡದಂತಹ ಬಂಗಲೆಯಾಗಿದ್ದರೂ ಅದರಲ್ಲಿ ಯಾರೂ ವಾಸಿಸುತ್ತಿಲ್ಲವೇನೋ ಎನ್ನುವಂತೆ ನಿಶ್ಶಬ್ದವಾಗಿತ್ತು. ಆದರೆ ಎಲ್ಲ ರೂಮಿನಲ್ಲಿ ದೀಪ ಉರಿಯುತ್ತಿದ್ದುವು. ಒಮ್ಮೊಮ್ಮೆ ಮನೆಯ ಸ್ತಬ್ಧತೆ ಯನ್ನು ಕದಡಲು ಅಡಿಗೆಯ ಮನೆಯ ಕಡೆಯಿಂದ ಬರುತ್ತಿದ್ದ ಪಾತ್ರೆಗಳ ಸದ್ದು, ವರಾಂಡದಲ್ಲಿ ತನ್ನ ಹಾಸಿಗೆಯ ಮೇಲೆ ಮಲಗಿರುತ್ತಿದ್ದ ನಾಯಿಯ ಬಗುಳುವಿಕೆ, ಇವು ಉಳಿದು ಬೇರೆ ಶಬ್ದವಿರಲಿಲ್ಲ. ಈ ಗಂಭೀರ ವಾತಾ ವರಣ ಲೀಲಾವತಿಯ ಮನಸ್ಸಿನಲ್ಲಿ ಇದುವರೆಗೆ ಬರದೇ ಇದ್ದ ಅನೇಕ

ಸಂಶಯಗಳಿಗೆ ಕಾರಣವಾಯಿತು.

ಪ್ರೊಫೆಸರರ ಮನೆಯಲ್ಲಿ ಇದ್ದವರೆಂದರೆ ಮೂರು ಜನ. ಕಪನೀಪತಿ ರಾಯರು, ಅವರ ಆಳು ಮತ್ತು ಅವರ ಅಡಿಗೆಯವಳು. ಇವರನ್ನು ಬಿಟ್ಟರೆ ಪ್ರೊಫೆಸರರ ಪ್ರೀತಿ ಪಾತ್ರವಾದ ಬೆಕ್ಕು, ನಾಯಿಗಳು ಮನೆಯಲ್ಲಿದ್ದ ಜೀವಂತ ಪ್ರಾಣಿಗಳು. ಆಳು ಪ್ರೊಫೆಸರರ ಬಟ್ಟೆಬರೆ, ಮನೆಯ ಒಳಗಿನ ಹೊರಗಿನ ಎಲ್ಲ ಕೆಲಸಗಳನ್ನೂ ನೋಡಿಕೊಳ್ಳುತ್ತಿದ್ದ. ಅಡಿಗೆಯವಳು ಮನೆಯ ಅಡಿಗೆ ಕೆಲಸ ನೋಡಿಕೊಳ್ಳುವುದರ ಜತೆಗೆ, ಕಪನೀಪತಿರಾಯರ ಕಷ್ಟ ಸುಖಗಳನ್ನೂ ವಿಚಾರಿಸಿಕೊಳ್ಳುತ್ತಿದ್ದಳು. ಒಂದು ರೀತಿಯಾಗಿ ನೋಡಿದರೆ ಕಪನೀಪತಿರಾಯರ ಸಂಸಾರ ಆಕೆಯ ಸಂಸಾರವೇ. ಆಕೆಗೆ ಕಪನೀಪತಿರಾಯರನ್ನು ಬಿಟ್ಟರೆ ಬೇರೆ ಸಮೀಪದ ಬಂಧುಗಳಿರಲಿಲ್ಲ. ಕಪನೀಪತಿರಾಯರಿಗೆ ಮದುವೆಯಾಗಿದ್ದ ಸಹಧರ್ಮಿಣಿ ಇದ್ದರೂ ಅವರವರಲ್ಲಿ ವೈಮನಸ್ಸು ತಲೆದೋರಿ ಆಕೆ ತನ್ನ ತವರುಮನೆಗೆ ಹಿಂತಿರುಗಿ ನಾಲ್ಕೈದು ವರ್ಷಗಳಿಂದ ಗಂಡನ ಮನೆಗೆ ಬಂದಿರಲಿಲ್ಲ. ಅವರ ವೈಮನಸ್ಸಿಗೆ ಈ ಅಡಿಗೆಯವಳೇ ಕಾರಣ. ಮುಚ್ಚಟೆಯಾಗಿ ಸಂಸಾರ ಮಾಡಿಕೊಂಡಿದ್ದ ಗಂಡ ಹೆಂಡಿರಲ್ಲಿ ಅವಳು ಮನಸ್ತಾಪವನ್ನು ತಂದು ಹಾಕಿ, ಅವರ ಸಂಸಾರವನ್ನು ಹಾಳುಮಾಡಿದ್ದಳು. ಪ್ರೊಫೆಸರ್ ಕಪನೀಪತಿರಾಯರ ಹೆಂಡತಿ ಅವರಂತೆಯೇ ವಿದ್ಯಾವತಿ. ಆಕೆಯ ತಂದೆ ಹಾಗೂ ಕಪನೀಪತಿರಾಯರ ತಂದೆ ಮದರಾಸಿನಲ್ಲಿ ಒಟ್ಟಿಗೆ ವ್ಯಾಸಂಗಮಾಡಿ ಒಟ್ಟಿಗೆ ಅಡ್ವೊಕೇಟ್ ಆಗಿದ್ದರು. ಆ ಸ್ನೇಹ ಕಾಲಕ್ರಮದಲ್ಲಿ ಸಂಬಂಧವಾಗಿ ಮಾರ್ಪಟ್ಟಿತ್ತು. ಆಕೆ ಗಂಡನ ಮನೆಗೆ ಬಂದು ನಾಲ್ಕಾರು ವರ್ಷ ಗಂಡನ ಜತೆಯಲ್ಲಿ ಸಂಸಾರ ಮಾಡಿಕೊಂಡಿದ್ದಳು. ಆಕೆಗೆ ಗಂಡನ ಕೂಡ ಸಂಸಾರ ಮಾಡಿಕೊಂಡಿರುವುದು ಮುಳ್ಳಿನ ಮೇಲೆ ನಡೆದಂತೆ ಎಂಬ ಅರಿವು ಉಂಟಾಗಿತ್ತು. ಅವನ ವಿಪರೀತ ಬಗೆಯ ದಾಂಪತ್ಯ ಜೀವನದಲ್ಲಿ ಅವನ ಕಾಮದ ಸಾಟೋಟಿಗೆ ತಕ್ಕ ಕುದುರೆಯಾಗಲಾರದೆ ಆಕೆ ತುಂಬಾ ಹಣ್ಣಾದಳು. ಇದರ ಪರಿಣಾಮವಾಗಿ ಮನೆಯ ಕೆಲಸಗಳನ್ನು ಮಾಡಲೂ ಕೈಲಾಗದೆ, ಸದಾ ಬೇನೆಯಿಂದ ನರಳುವುದೇ ಆಕೆಯ ಕಥೆಯಾಯಿತು. ಇದನ್ನು

ನೋಡಲಾರದೆ ಕಪನೀಪತಿರಾಯರು ತಮ್ಮ ಮನೆಯಲ್ಲಿ ಒಬ್ಬ ಅಡಿಗೆಯವಳನ್ನು ಇಟ್ಟುಕೊಂಡರು. ಆಕೆ ಮನೆಗೆ ಬಂದದ್ದೇ ಅವರ ಸಂಸಾರಕ್ಕೆ ಧೂಮಕೇತು ಹೊಕ್ಕಂತೆ ಆಯಿತು. ಅವಳು ತುಂಬಿದ ಸಂಸಾರಕ್ಕೆ ರಾಹುವಿನಂತೆ ಆದಳು. ಅವಳು ಹೆಸರಿಗೆ ಅಡಿಗೆಯವಳು. ರೂಪಿನಲ್ಲೂ ವಯಸ್ಸಿನಲ್ಲೂ ಹಾವಭಾವಗಳಲ್ಲಿಯೂ ಹಾಗೆಂದು ಹೇಳುವಂತಿಲ್ಲ. ಅವಳು ಮಿಲಿಟರಿಯ 'ಕ್ಯಾಂಪೊಂದರಲ್ಲಿ ಅಡಿಗೆ ಮಾಡಿಕೊಂಡು ಇದ್ದಳಂತೆ. ಕ್ಯಾಂಪು ಬೇರೆ ಕಡೆಗೆ ಬದಲಾಯಿಸಿದ ಮೇಲೆ ಅವಳು ಮಿಲಿಟರಿಯ ಜತೆಯಲ್ಲಿ ಹೋಗಲಾರದೆ ಅವಳ ಪರಿಚಯದ ಮೇಸ್ತ್ರಿಗೆ ಗಂಟುಬಿದ್ದಿದ್ದಳು. ಅವನಿಗೆ ಇವಳನ್ನು ಸಾಕುವ ಚೈತನ್ಯವಿಲ್ಲದೆ ಅವಳಿಗೆ ಸರಿದೂಗುವ ವ್ಯಕ್ತಿಯನ್ನೇ ಹುಡುಕಿ ಕೊಟ್ಟಿದ್ದ. ಕಪನೀಪತಿರಾಯರ ಮನೆ ರಿಪೇರಿಗೆಂದು ಬಂದಿದ್ದ ಮೇಸ್ತ್ರಿ ಹೋಗುವಾಗ ಅವರ ಮನೆಯನ್ನು ಮುರಿದೇ ಹೋದ. ಹೋಗುವಾಗ–ಅಡಿಗೆಯವಳನ್ನು ಕಪನೀಪತಿರಾಯರ ಮನೆಯಲ್ಲಿ ಪ್ರತಿಷ್ಠಾಪಿಸಿ ಹೋಗಿದ್ದ.

ಅವಳು ತನ್ನ ರೂಪ ಯೌವನ ಇವಕ್ಕೆ ಮಿಗಿಲಾದ ರಸಿಕತೆ, ಚತುರತೆಗಳಿಂದ ಬಹು ಬೇಗನೆ ಪ್ರೊಫೆಸರರ ಕೃಪೆಗೆ ಬಿದ್ದಳು. ಅವಳು ಮನೆಯ ಅಡಿಗೆ ಕೆಲಸ ಮಾಡಿಕೊಂಡಿರುವುದರ ಜತೆಗೆ ಪ್ರೊಫೆಸರರ ಆಪ್ತ ಕಾರ್ಯದರ್ಶಿನಿಯಂತೆ ಅವರ ಎಲ್ಲ ಕೆಲಸಗಳನ್ನೂ ಮಾಡಲು ತೊಡಗಿದ ಮೇಲೆ ಮನೆಯಾಕೆಗೆ ಇದೆಲ್ಲೋ ಕೆಟ್ಟ ಗ್ರಹವೆಂದು ತಿಳಿಯಿತು. ಆದರೆ ಈ ವೇಳೆಗಾಗಲೇ ಅವಳ ಹಾಗೂ, ಕಪನೀಪತಿರಾಯರ ಸಂಬಂಧ ಆಕೆಯಿಂದ ಬೇರ್ಪಡಿಸಲಾಗದಷ್ಟು ಗಾಢವಾಗಿ ಬೆಳೆದಿತ್ತು. ಆಕೆ ಗಂಡನಿಗೆ ಹೇಳುವ ರೀತಿಯಲ್ಲಿ ಹೇಳಿ ನೋಡಿ, ಬೇರೇನೂ ಮಾಡಲು ತೋಚವೆ ತನ್ನ ತವರು ಮನೆಗೆ ಹೊರಟುಹೋದಳು. ಇದರಿಂದ ತೂಕಡಿಸುತ್ತಿದ್ದವನಿಗೆ ಹಾಸಿಗೆ ಹಾಸಿ ಮಲಗಿಸಿದಂತೆ ಆಯಿತು. ಆಕೆ ಅತ್ತ ಹೊರಟು ಹೋದ ಮೇಲೆ ಇತ್ತ ಕಪನೀಪತಿಯವರ ಮಾರ್ಗ ನಿಷ್ಕಂಟಕವಾಯಿತು. ಅವರು ಈಗ ರಾಜಾರೋಷವಾಗಿ ಅಡಿಗೆಯವಳ ಜತೆಯಲ್ಲಿ ತಮ್ಮ ಶೃಂಗಾರಕ್ಕೆ ತೊಡಗಿದ್ದರು–ಅವಳ ಸೇವೆ ಶುಶ್ರೂಷೆಗಳಲ್ಲಿ ಅವಳು ಅಡಿಗೆಯವಳೆನ್ನುವುದನ್ನು ಮರೆತು ತನ್ನ ಭೋಗದ ಹೆಣ್ಣಾಗಿ ಮಾಡಿಕೊಂಡಿದ್ದರು. ತಮ್ಮ ಹೆಂಡತಿಯ ಬೆಲೆ

ಬಾಳುವ ಒಡವೆ ವಸ್ತುಗಳು ಅವಳ ಪಾಲಾದುವು. ಈ ವಿಷಯ ಅವರ ಪತ್ನಿಗೆ ತಿಳಿದಾಗ, ತಂದೆಯ ಮೂಲಕ ಗಂಡನಿಗೆ ಬುದ್ಧಿ ಹೇಳಿಸಲು ಹೋಗಿ ಕೊಚ್ಚೆಯ ಮೇಲೆ ಕಲ್ಲು ಒಗೆದಂತೆ ಆಯಿತು. ಅವರವರ ನಡುವೆ ಇದ್ದ ಎಲ್ಲ ವಿಶ್ವಾಸಗಳೂ ಕೆಟ್ಟು, ಮಾವ ಅಳಿಯನ ನಡುವೆ ಬಿಸಿಬಿಸಿ ಮಾತು ನಡೆದು ಕಡೆಗೆ ಅವರಿಬ್ಬರ ದಾಂಪತ್ಯ ವಿಚ್ಛೇದನೆಯಲ್ಲಿ ಆ ಸಂಬಂಧ ಕೊನೆಗೊಂಡಿತ್ತು. ಇದಾದ ಮೇಲೆ ಪ್ರೊಫೆಸರರ ದಾರಿ ಇನ್ನಷ್ಟು ಸರಳವಾಯಿತು. ಅವರು ಮತ್ತೆ ಮದುವೆಯಾಗುವ ಗೋಜಿಗೆ ಹೋಗದೆ ಆ ಅಡಿಗೆಯವಳ ಜತೆಯಲ್ಲಿ ಸುಖವಾಗಿ ಸಂಸಾರಮಾಡಿಕೊಂಡು ಇದ್ದುಬಿಟ್ಟರು. ಇಷ್ಟೆಲ್ಲ ಪೂರ್ವಕಥೆ ಇದ್ದೂ ಕಪನೀಪತಿರಾಯರನ್ನು ಲೀಲಾವತಿ ನೋಡಲು ಹೋದದ್ದೇ ತಪ್ಪು. ಅವನು ಬೀಸಿದ್ದ ಬಲೆಗೆ ಬಲಿಯಾಗಿ ಎಂಟರ ತನಕ ಅವರ ಮನೆಯಲ್ಲಿ ಇದ್ದದ್ದೇ ತಪ್ಪು. ಈಗ ಅವರ ಇಷ್ಟದಂತೆ ಅವರ ರೂಮಿನಲ್ಲಿ ಅವರನ್ನು ಕಾಣಲು ಹೊರಟಿದ್ದಳು. ಮುಗ್ಧೆಯಾದ ಲೀಲಾವತಿ ತಾನು ಎಂತಹ ಹುತ್ತದಲ್ಲಿ ಕಾಲಿಡುತ್ತಿರುವಳೆಂದು ತಿಳಿಯದೆ, ಕಪನೀಪತಿರಾಯರ ಕುಹಕವಾದ ನಡವಳಿಕೆಯನ್ನು ನಿಜವೆಂದು ಭ್ರಮಿಸಿ, ಮೋಸ ಹೋಗಿದ್ದಳು.

ಲೀಲಾವತಿಯನ್ನು ಕಾಣುತ್ತಲೇ ಕಪನೀಪತಿರಾಯರು ವಿಶ್ವಾಸದಿಂದ ಅಲ್ಲಿದ್ದ ಸೋಫಾದ ಮೇಲೆ ಕುಳ್ಳಿರಿಸಿದರು. ಲೀಲಾವತಿಗೆ ಅಲ್ಲಿಗೆ ಬರುತ್ತಿದ್ದಂತೆ ಯಾಕೋ ದುಶ್ಶಕುನಗಳಾದುವು. ಬಲಗಣ್ಣು ಅದುರಿತು. ಇವುಗಳಲ್ಲಿ ನಂಬಿಕೆ ಇರದಿದ್ದರೂ ಅವುಗಳು ಶಕುನಗಳೆಂದು ತಿಳಿದಿದ್ದುವು. ಅವಳು ಅಂಜುತ್ತಾ, ಅಳಕುತ್ತಾ ಸೋಫಾದ ಮೇಲೆ ಕುಳಿತುಕೊಂಡು ಪ್ರೊಫೆಸರ ಮುಖವನ್ನು ನೋಡುವ ಧೈರ್ಯವಾಗದೆ ಎತ್ತಲೋ ನೋಡಿದಳು. ಅದು ಕಪನೀಪತಿರಾಯರ ವ್ಯಾಸಂಗದ ಹಾಗೂ ಮಲಗುವ ಕೋಣೆ. ಅಲ್ಲಿ ಸೊಳ್ಳೆ ಪರದೆಯನ್ನು ಇಳಿಬಿಟ್ಟಿದ್ದ ಒಂದು ಭಾರಿ ಮಂಚ. ಅದರ ಬದಿಯಲ್ಲೇ ಒಂದು ಬರೆಯುವ ಮೇಜು—ಕುರ್ಚಿ. ಅದರ ಸನಿಯದಲ್ಲೇ ಕೈಗೆ ಎಟುಕುವಂತೆ ಸುಸಜ್ಜಿತವಾದ ಎರಡು ಬೀರುಗಳ ತುಂಬಾ ಪುಸ್ತಕಗಳು. ಅವನ್ನು ನೋಡುತ್ತಿದ್ದಂತೆ ಲೀಲಾವತಿಗೆ ತನ್ನ ಲೈಬ್ರರಿಯ ನೆನ

ಪಾಯಿತು. ಬೇರೊಂದು ಹೊತ್ತಿನಲ್ಲಾಗಿದ್ದರೆ ಅವರ ಲೈಬ್ರರಿಯಲ್ಲಿ ಯಾವ ಯಾವ ಅಮೂಲ್ಯವಾದ ಪುಸ್ತಕಗಳಿವೆ ಎಂದು ಹುಡುಕಿನೋಡುತ್ತಿದ್ದಳೋ ಏನೋ. ಆದರೆ ಈಗ ಅವಳಿಗೆ ಅವುಗಳೊಂದೂ ಬೇಕಿರಲಿಲ್ಲ. ಅವಳಿಗೆ ಬೇಕಾಗಿದ್ದುದು ತನ್ನ ವರ್ಗದ ವಿಷಯವೇನಾಯಿತೆಂದು ತಿಳಿಯುವುದು.

ಪ್ರೊಫೆಸರ್ ಕಪನೀಪತಿಯವರು ಲೀಲಾವತಿಯನ್ನು ಇನ್ನು ಹೆಚ್ಚು ಕಾಲ ಕಾಯಿಸುತ್ತಾ ಕುಳ್ಳಿರಿಸಲು ಮನವಾಗದೆ, ನೇರ ವಿಷಯ ಪ್ರಸ್ತಾಪಕ್ಕೆ ಬಂದರು.

ತಾವು ಆ ದಿನವೆಲ್ಲ ಲೀಲಾವತಿಯ ಕೆಲಸದಲ್ಲಿಯೇ ತಮ್ಮ ಕಾಲವನ್ನೆಲ್ಲ ಕಳೆದರೆಂದೂ, ಲೀಲಾವತಿಯ ವರ್ಗವನ್ನು ರದ್ದುಗೊಳಿಸಲು ಹೆಡ್ ಕ್ಲಾರ್ಕ್‌ನಿಂದ ಹಿಡಿದು ವೈಸ್‌ಚಾನ್ಸೆಲರ್ ವರೆಗೆ ಸಂಬಂಧಿಸಿದ ಎಲ್ಲ ಅಧಿಕಾರಿಗಳನ್ನು ಅದೇ ಕೆಲಸವಾಗಿ ಕಂಡು, ಮಾಡಿದ್ದ ವರ್ಗವನ್ನು ರದ್ದುಗೊಳಿಸುವ ಪ್ರಯತ್ನದಲ್ಲಿ ಯಶಸ್ವಿಯಾದರೆಂದೂ ಶುಭ ಸುದ್ದಿ ತಿಳಿಸಿದರು. ಈ ಮಾತನ್ನು ಕೇಳಿ ಲೀಲಾವತಿ ತನ್ನ ಕಿವಿಯನ್ನು ತಾನೇ ನಂಬದಾದಳು. ಕೇವಲ ಇಪ್ಪತ್ತು ತಾಸುಗಳ ಹಿಂದೆ ತನಗೆ ಬೆಂಗಳೂರಿಗೆ ವರ್ಗ. ಈಗ ಮತ್ತೆ ತನ್ನನ್ನು ಮೈಸೂರಿನ ಕಾಲೇಜಿನಲ್ಲೇ ರೆಸ್ಟೋರ್ ಮಾಡಿದ್ದಾರೆ-ಕಪನೀಪತಿರಾಯರು ಎಂತಹ ಅಸಾಧ್ಯವನ್ನು ಸಾಧಿಸಿದ್ದಾರೆ ಎಂದು ಅವರ ಬಗ್ಗೆ ತುಂಬಾ ಅಭಿಮಾನ ಉಂಟಾಯಿತು. ಆ ಹೊತ್ತಿನಲ್ಲಿ ಅವರು ಲೀಲಾವತಿಗೆ ಪವಾಡ ಪುರುಷರಂತೆ ಕಾಣಿಸಿದರು. ಅವರನ್ನೇ ಎವೆಯಿಕ್ಕದೆ ನೋಡುತ್ತ ಕುಳಿತಿದ್ದ ಲೀಲಾವತಿಗೆ ಕಪನೀಪತಿರಾಯರು ತಮ್ಮ ಕಿಸೆಯಿಂದ ಒಂದು ಕಾಗದವನ್ನು ತೆಗೆದು ತೋರಿಸಿದರು. ಲೀಲಾವತಿ ತಾತ್ಕಾಲಿಕವಾಗಿ ತನ್ನ ಕೆಲಸದ ಮೇಲೆಯೇ ಇರತಕ್ಕದ್ದೆಂದೂ, ಅವಳ ವರ್ಗದ ವಿಷಯ ಮುಂದೆ ಪರ್ಯಾಲೋಚಿಸಿ ನಿರ್ಧರಿಸಲಾಗುವುದೆಂದೂ ತಿಳಿಸಿದ್ದ ರಿಜಿಸ್ಟ್ರಾರ್ರ ಆಜ್ಞಾಪತ್ರ ಅದು. ಇದನ್ನು ನೋಡುತ್ತಲೇ ಬಾಲೆಯ ಚಪಲದಿಂದ ಲೀಲಾವತಿ ಎದ್ದು ಹೋಗಿ ಕಪನೀಪತಿರಾಯರ ಕೈಯಿಂದ ಅದನ್ನು ಕಿತ್ತು ಕೊಳ್ಳಲೆತ್ನಿಸಿದಳು. ಆಗ ಕಪನೀಪತಿರಾಯರು ಹಠಾತ್ತನೆ ಆರ್ಡರನ್ನು ಅವಳ ಕೈಗೆ ಕೊಡದೆ ಲೀಲಾವತಿಯನ್ನು ಸತಾಯಿಸಿ, ಅನಂತರ

ಕೈಗಿತ್ತು ಆನಂದಿಸಿದರು. ಅವರವರಲ್ಲಿ ಅಷ್ಟು ಸಲಿಗೆ ಏರ್ಪಟ್ಟ ಮೇಲೆ ಕಪನೀಪತಿರಾಯರೆಂದರು.

"ಇನು ಕೇವಲ ಟೆಂಪರರಿ ಮೆಷರ್ ಮುಂದೆ ಸೆಟ್ಲ್ಡ್ ಆರ್ಡರು ಕಳುಹಿಸಿಕೊಡುತ್ತಾರೆ. ಅಲ್ಲಿಯ ತನಕ ನಿಮ್ಮನ್ನು ಡಿಸ್ಟರ್ಬ ಮಾಡದೆ ಇರಲಿ ಅಂತ ಇದನ್ನು ಬರೆಸಿಕೊಂಡು ಬಂದೆ."

"ತುಂಬಾ ಥ್ಯಾಂಕ್ಸ್. ನನಗಾಗಿ ನೀವು ತುಂಬಾ ಶ್ರಮವಹಿಸಿದ್ದೀರಿ. ನಿಮ್ಮ ಋಣವನ್ನು ನಾನು ಯಾವ ರೀತಿಯಲ್ಲಿ ತೀರಿಸಬೇಕೋ ನನಗೆ ತಿಳಿಯದಾಗಿದೆ." ಎಂದಳು ಕೃತಜ್ಞತಾ ಪೂರ್ವಕವಾಗಿ ನೋಡುತ್ತ.

ಇದೇ ತಕ್ಕ ಸಮಯವೆಂದು ಪ್ರೊಫೆಸರ್ ಕಪನೀಪತಿಯವರು ಬಾಯಿ ಬಿಟ್ಟರು. ಆ ದಿನ ಮಹಾರಾಣಿ ಕಾಲೇಜಿನಲ್ಲಿ ಲೀಲಾವತಿಯನ್ನು ನೋಡಿ, ಅವಳ ಭಾಷಣವನ್ನು ಕೇಳಿ ಮನಸ್ಸಿನಲ್ಲಿ ಮಂಡಿಗೆ ತಿಂದಿದ್ದ ಕಪನೀಪತಿ ರಾಯರಿಗೆ ಈ ದಿನ ಆ ಮಂಡಿಗೆಯನ್ನು ಪ್ರತ್ಯಕ್ಷವಾಗಿ ತಿನ್ನುವ ಸುಯೋಗ ಒದಗಿತ್ತು. ಅವರು ಲೀಲಾವತಿಯನ್ನು ಹಸಿದ ಕಂಗಳಿಂದ, ಕಾಮೋದ್ದೀಪ್ತ ನೋಟದಲ್ಲಿ ನೋಡುತ್ತಾ ಹೇಳಿದರು.

"ನಿಮಗಾಗಿ ನಾನು ಪಟ್ಟ ಶ್ರಮ ಎಷ್ಟೆಂಬುದನ್ನು ನೀವು ಅರಿಯಲಾರಿರಿ. ಇದಕ್ಕಾಗಿ ನೀವೆಷ್ಟು ಕೃತಜ್ಞತೆ ಸೂಚಿಸಿದರೂ ಅದು ಅಲ್ಪವೆ! ಆವರೆ ಅದೇನು ಕಾರಣವೋ ನಿಮ್ಮನ್ನು ನೋಡಿದಲಾಗಾಯಿತು, ನಿಮ್ಮ ಮಾತನ್ನು ಕೇಳಿದಲಾಗಾಯಿತು, ಈ ಕೆಲಸವನ್ನು ಏನೇ ಆಗಲಿ—ಸಾಧಿಸಿ ಕೊಡಬೇಕೆಂದು ನಿರ್ಧರಿಸಿದೆ. ಮುಖ್ಯ ನಿಮ್ಮ ಅದೃಷ್ಟ. ನನ್ನ ಪ್ರಯತ್ನ ಯಶಸ್ವಿಯಾಯಿತು. ನನ್ನ ಶ್ರಮಕ್ಕೆ ನೀವು ಕೊಡುವ ಬೆಲೆ ಏನು?" ಎಂದರು.

ಈ ಮಾತನ್ನು ಲೀಲಾವತಿ ಅರ್ಥಮಾಡಿಕೊಳ್ಳಲಿಲ್ಲ.

"ನಿಮ್ಮ ಶ್ರಮಕ್ಕೆ ನಾನು ಏನು ತಾನೇ ಪ್ರತಿಫಲವಾಗಿ ಕೊಡಬಲ್ಲೆ. ನನ್ನ ಹಾಗು ನನ್ನ ತಂದೆಯ ಕೃತಜ್ಞತೆಗಳನ್ನು ತೋರಿಸುವುದೆಷ್ಟೋ ಅಷ್ಟೇ ನನ್ನಿಂದಾಗುವ ಕೆಲಸ. ಇದಕ್ಕೂ ಹೆಚ್ಚಿಗೆ ನನ್ನಿಂದೇನು ಸಾಧ್ಯ?"

"ನನ್ನೀ ಶ್ರಮಕ್ಕೆ ನೀವು ಕೊಡುವ ಬೆಲೆ ಇಷ್ಟೆಯೇ. ನಾನು ನಿಮ

ಗಾಗಿ ಇಷ್ಟೆಲ್ಲ—ಅನ್ನ ನೀರಿಗೆ ಹೋಗದೆ—ಕಷ್ಟಪಟ್ಟದ್ದು ನಿಮ್ಮ ಮಾತಿನ ಕೃತಜ್ಞತೆಗಾಗಿ ಅಲ್ಲ."

ಈ ಮಾತು ಕೇಳಿ ಒಮ್ಮೆಲೇ ಚಕಿತಳಾದಳು ಲೀಲಾವತಿ. ಅವಳು ಕಪನೀಪತಿರಾಯರನ್ನು ಒಮ್ಮೆ ತೀಕ್ಷ್ಣವಾಗಿ ನೋಡಿದಳು. ಕಪನೀಪತಿ ರಾಯರು ಆ ನೋಟದಿಂದ ಉತ್ತೇಜಿತರಾದಂತೆ ಹೇಳಿದರು.

"ನಾನು ನಿಮಗಾಗಿ ಇಷ್ಟೆಲ್ಲ ಕಷ್ಟಪಟ್ಟದ್ದು ಏಕೆಂದು ನಾನೇ ಬಾಯಿ ಬಿಟ್ಟು ಹೇಳಬೇಕೆ? ನಿಮ್ಮ ವಿಷಯದಲ್ಲಿ ನನಗಿರುವ ಆಸಕ್ತಿ ಎಂತಹದೆಂದು ಬಹುಶಃ ನಿಮಗೆ ಈ ವೇಳೆಗೆ ತಿಳಿದಿರಬಹುದು. ಅಲ್ಲವೆ?"

ಈ ಮಾತು ಕೇಳಿ ಲೀಲಾವತಿಯ ಸಂದೇಹ ಸ್ಫುಟವಾಯಿತು. ಅವಳು ಅವಾಕ್ಕಾಗಿ ಪ್ರೊಫೆಸರನ್ನೇ ನೋಡುತ್ತ ಕುಳಿತಳು. ಅವಳಿಗೆ ಆ ಕ್ಷಣದಲ್ಲಿ ತಾನೆಲ್ಲಿದ್ದೇನೆ, ಏನು ಮಾಡುತ್ತಿದ್ದೇನೆ ಎಂಬುದೇ ಮರೆತು ಹೋಯಿತು. ಅವಳನ್ನು ಮತ್ತೆ ಎಚ್ಚರಗೊಳಿಸಿದುದೆಂದರೆ ಕಪನೀಪತಿ ರಾಯರ ಮಾತು.

"ಲೀಲಾವತಿ, ಸುಮ್ಮನೆ ಮಾತು ಬೆಳೆಸಿ ಪ್ರಯೋಜನವಿಲ್ಲ. ನನ್ನ ಮನಸ್ಸಿನ ಆಸೆ ಏನಿದೆ ಎಂದು ನೀನು ತಿಳಿದಿರುವೆ. ಇದು ನಿನ್ನ ದೃಷ್ಟಿಯಲ್ಲಿ ಕೆಟ್ಟ ಆಸೆಯಾಗಿ ಕಾಣಬಹುದು. ನಿನಗಾಗಿ ಇಷ್ಟೆಲ್ಲ ಕಷ್ಟಪಟ್ಟ ನಾನು ನಿನ್ನಿಂದ ಇಷ್ಟು ಪ್ರತಿಫಲ ಅಪೇಕ್ಷಿಸುವುದು ತಪ್ಪೆ?....ನಿನ್ನ ನನ್ನ ಪರಿಚಯ ಇಂದಿನದಲ್ಲ. ಅಂದು ಕಾಲೇಜಿನಲ್ಲಿ ನೀನು ನನ್ನನ್ನು ವಿರೋಧಿಸಿ ಮಾತ ನಾಡಿದಾಗಲೇ ನಿನಗೆ ನಾನು ಮರುಳಾಗಿಬಿಟ್ಟೆ. ಆ ದಿನದಿಂದ ಈ ತನಕ ನಿನಗಾಗಿ ಎಷ್ಟು ಬಾರಿ ಹಂಬಲಿಸಿರುವೆನೆಂಬುದು ಬಹುಶಃ ನಿನಗೆ ಗೊತ್ತಿರ ಲಾರದು. ನಾನು ನಿನಗೆ ಗೊತ್ತಿಲ್ಲದೆ ಇದ್ದರೂ ನಿನ್ನ ಎಲ್ಲ ವಿಷಯವನ್ನೂ ನಾನು ತಿಳಿದುಕೊಂಡಿದ್ದೇನೆ. ನಿನಗೆ ವಿವಾಹ ಪದ್ಧತಿಯಲ್ಲಿ ನಂಬಿಕೆ ಇಲ್ಲ ವೆಂಬುದನ್ನು ನಾನು ಬಲ್ಲೆ. ಕಾಮ ಪ್ರೇಮಗಳ ಬಗ್ಗೆ ನಿನಗಿರುವ ಅಭಿ ಪ್ರಾಯವನ್ನು ನಾನು ನಿನ್ನ ಸ್ನೇಹಿತರಿಂದ ತಿಳಿದುಕೊಂಡಿರುವೆ. ನಿನ್ನ ಭಾಗಕ್ಕೆ ತುಚ್ಛವಲ್ಲದ ಕಾಮ—ನನ್ನ ಭಾಗಕ್ಕೆ ತುಚ್ಛವಲ್ಲ! ಹಸಿವು ನೀರಡಿಕೆಗಳಂತೆ, ಅದೂ ಒಂದು ಪಶು ಸಹಜ ಪ್ರವರ್ತಿ. ಅಂತಲೇ

ಈ ವಿಷಯದಲ್ಲಿ ನಿನ್ನೊಂದಿಗೆ ಇಷ್ಟು ಬಿಚ್ಚು ಮನಸ್ಸಿನಿಂದ ನಾನು ಪ್ರಸ್ತಾಪಿಸುತ್ತಿರುವುದು. ನೀನು ರೂಪವತಿ, ಮೇಲಾಗಿ ಯುವತಿ. ಎಲ್ಲರಂತೆ ನಿನಗೂ ವಿಷಯಸುಖಾಪೇಕ್ಷೆ ಇದೆ. ರಾಗದ್ವೇಷಗಳಿಂದ ನೀನು ಬಿಡುಗಡೆ ಹೊಂದಿಲ್ಲ. ಸಂಯಮದ ಮಾತು ಬರಬಹುದು. ಈ ವಯಸ್ಸಿನಲ್ಲಿ ಸಂಯಮ ಸಾಧ್ಯವೆ? ಒಂದು ವೇಳೆ ಸಾಧ್ಯವಾದರೂ ಇದರಿಂದ ಸಾರ್ಥಕ ವೇನು? ಹೂ ಅರಳಿರುವಾಗ ಅದರ ವಾಸನೆಯನ್ನು ಸವಿದು ಸುಖಿಸುವುದನ್ನು ಬಿಟ್ಟು ಅದು ಒಣಗಿ ನೆಲಕ್ಕೆ ಉರುಳಿದ ಮೇಲೆ ಅದರಿಂದ ಏನು ಪ್ರಯೋಜನ? ಆಲೋಚಿಸು. ಇದುವರೆಗೆ ನೀನು ಸಂಯಮದಿಂದಲೇ ಇರುವೆ. ಪುರುಷ ಸಂಪರ್ಕದಿಂದ ದೂರ ಇರುವೆ ಇದರಿಂದ ನೀನು ಸುಖವಾಗಿರುವೆಯಾ ಆಲೋಚಿಸು?....” ಎಂದರು.

ಲೀಲಾವತಿಗೆ ಅವರ ಎಲ್ಲ ಮಾತು ಕೇಳಿ ಆಶ್ಚರ್ಯದ ಮೇಲೆ ಆಶ್ಚರ್ಯ. ಕಪನೀಪತಿರಾಯರು ತನ್ನ ಬಗ್ಗೆ ಎಷ್ಟೊಂದು ವಿಷಯ ಸಂಗ್ರಹಿಸಿಕೊಂಡಿದ್ದಾರೆ ಎಂದು ಅಚ್ಚರಿಪಟ್ಟಳು. ಅವಳ ಹೃದಯಾಂತರಾಳದಲ್ಲಿ ಬಹಳ ಕಾಲದಿಂದ ಅಡಗಿದ್ದ ಕಾಮಾಗ್ನಿಗೆ ಕಪನೀಪತಿರಾಯರ ಮಾತುಗಳು ಗಾಳಿ ಹಾಕಿದ್ದುವು. ಅದು ಭುಗಿಲ್ ಎಂದು ಹತ್ತಿಕೊಂಡಿತ್ತು. ಅವಳು ವಿಚಾರ ಮಾಡಿದಳು. ತಾನು ಸಂಯಮದಿಂದ ಇದ್ದೂ ನಿಜವಾಗಿಯೂ ಸುಖವಾಗಿಲ್ಲ? ಅಂತಲೇ ಆ ದಿನ ಸದಾಶಿವನಿಗೆ ತನ್ನನ್ನು ಅರ್ಪಿಸಿಕೊಳ್ಳಲು ಹೋದುದು. ಆದರೆ ಸದಾಶಿವ ಅಂದು ಅವಳಿಗೆ ದಕ್ಕದೆ ಹೋದ. ಅವನು ಅವಳನ್ನು ತಿರಸ್ಕರಿಸಿಬಿಟ್ಟ! ಇದರಿಂದ ಲೀಲಾವತಿಯ ಹೆಮ್ಮೆಗೆ ಬಲವಾದ ಪೆಟ್ಟು ಬಿದ್ದಂತಾಯಿತು. ಅವಳ ಕಾಮ ಅತೃಪ್ತ ಕಾವು–ಹಲವು ರೀತಿಯಲ್ಲಿ ಕೆರಳಿ ನಿಂತಿತ್ತು. ಆದರೆ ಅದನ್ನು ಹಿಂಗಿಸಿಕೊಳ್ಳಲು ಅವಳಿಗೆ ಸರಿಯಾದ ಅವಕಾಶ ಬಂದಿರಲಿಲ್ಲ. ಪುರುಷರ ಬಳಿಗೆ ಹೋಗಿ ಅವರಿಂದ ಮತ್ತೆ ಅವಮಾನಿತಳಾಗುವುದರಲ್ಲಿ ಇಷ್ಟವಿಲ್ಲದೆ ತನ್ನ ಅತೃಪ್ತ ಬಯಕೆಗಳನ್ನು ಹೃದಾಯಾಂತರಾಳದಲ್ಲಿ ಗೋರಿ ಮಾಡಲೆತ್ನಿಸಿದ್ದಳು. ಅವಳು ತಾತ್ಕಾಲಿಕವಾಗಿ ಈ ಪ್ರಯತ್ನದಲ್ಲಿ ಯಶಸ್ವಿಯಾಗಿದ್ದಂತೆ ಕಂಡರೂ–ಈಗ ಕಪನೀಪತಿರಾಯರು ಹೇಳಿದ್ದ ಮಾತುಗಳು ಅವಳನ್ನು ಮತ್ತೆ ಅತೃಪ್ತ ಕಾಮದ ಅಗ್ನಿ

ಕುಂಡದಲ್ಲಿ ಕೆಡವಿತು. ಅವಳೂ ಕಪನೀಪತಿರಾಯರ ವಿಚಾರ ಸರಣಿಯಲ್ಲಿ ಹಿಂದೆ ವಿಚಾರ ಮಾಡಿದ್ದುದರಿಂದ, ಅಪರಿಚಿತ ವ್ಯಕ್ತಿಯಾದ ಕಪನೀಪತಿ ರಾಯರು ನಿರ್ಲಜ್ಜರಾಗಿ ತನ್ನೊಡನೆ ಇಷ್ಟು ಬಿಚ್ಚುಮನಸ್ಸಿನಿಂದ ಮಾತನಾಡುವಾಗ ಅವರನ್ನು ಎದುರಿಸುವ ಕೆಚ್ಚೆದೆಯಾಗಲೀ, ಧೈರ್ಯವಾಗಲೀ ಅವಳಲ್ಲಿ ಇರದೆ ಹೋಯಿತು. ಅವಳು ಸಹಜವಾಗಿಯೇ ಕಪನೀಪತಿರಾಯರ ವಿಚಾರ ಸರಣಿಗೆ ಸೋತಳು. ಆದರೂ ಇಷ್ಟು ಕಾಲದ ತನಕ ಅವಳಲ್ಲಿ ಬೆಳೆದು ಬಂದಿದ್ದ ಮನಸ್ಸಾಕ್ಷಿಯಾದ ವಿವೇಕ ಲೀಲಾವತಿ ಇಷ್ಟು ಬೇಗನೆ ಸಂಯಮಗೆಡಲು ಅವಕಾಶ ಕೊಡಲಿಲ್ಲ. ಅದು ಲೀಲಾವತಿಯನ್ನು ತರಾಟಿಗೆ ತೆಗೆದುಕೊಂಡಿತು.

" ಯಾವುದೋ ಕ್ಷುಲ್ಲಕ ಕಾರಣಕ್ಕಾಗಿ ನಿನ್ನ ಶೀಲವನ್ನು ಇಂದು ಯಾವನೋ ಅಪರಿಚಿತನಿಗೆ ಬಲಿಗೊಡುತ್ತಿರುವೆ. ಇದುವರೆಗೆ ಅಮೂಲ್ಯವೆಂದು ಕಾಪಾಡಿಕೊಂಡು ಬಂದಿರುವ ಶೀಲವನ್ನು ಗುರುತು ಪರಿಚಯವಿಲ್ಲದ ವಿಷಯ ಲಂಪಟ ಗಂಡಿಗೆ ಸೂರೆಗೊಡುತ್ತಿರುವೆ. ನಿನ್ನ ಪವಿತ್ರವಾದ ದೇಹವನ್ನು ಅಪವಿತ್ರಗೊಳಿಸುತ್ತಿರುವೆ. ಎಚ್ಚರ ಎಚ್ಚರ ! " ಎಂದು ಅದು ಲೀಲಾವತಿಯನ್ನು ಮೂದಲಿಸಿತು.

" ಕ್ಷುಲ್ಲಕ ಕಾರಣಕ್ಕಾಗಿ ಪವಿತ್ರ ದೇಹವನ್ನು ಅಪವಿತ್ರಗೊಳಿಸುವುದೇ ? ಆಹ್ಹಾ ಹ್ಹಾ... ಆ ದಿನದ ನಾಟಕ ನೆನಪು ಮಾಡಿಕೋ. ಅಂದು ನೀನು ಯಾವ ಮಹತ್ತರ ಕಾರಣಕ್ಕಾಗಿ ನಿನ್ನ ದೇಹವನ್ನು ಸದಾಶಿವನಿಗೆ ಒಪ್ಪಿಸಲು ಹೊರಟಿದ್ದೆ. ? "

—ಎಂದು ಅವಳ ಅವಿವೇಕ ಪ್ರಶ್ನಿಸಿತು.

" ಅಂದಿನ ವರ್ತನೆಯೂ ಒಂದು ರೀತಿಯಾಗಿ ಸಲ್ಲದ ವರ್ತನೆಯೇ. ಆದರೆ ಅದರಲ್ಲಿ ಸ್ವಾರ್ಥವಿತ್ತು. ಭಕ್ತ ದೇವರಿಗೆ ಭಕ್ತಿಯಿಂದ ಹೂವರ್ಪಿಸುವಂತೆ ಲೀಲಾವತಿ ತನ್ನ ಕಾಮದೇವನಿಗೆ ತನ್ನನ್ನು ಅರ್ಪಿಸಿಕೊಳ್ಳಲು ಹೊರಟಿದ್ದಳು. "

" ಇಂದು ಅದೇ ಲೀಲಾವತಿ ತನಗಾಗಿ ಕಷ್ಟಪಟ್ಟು ದುಡಿದ ವ್ಯಕ್ತಿಗೆ ಉಪಕಾರಕ್ಕೆ ಪ್ರತಿಫಲವಾಗಿ ತನ್ನ ದೇಹವನ್ನು ಅರ್ಪಿಸುತ್ತಿದ್ದಾಳೆ. ಇದ

ರಲ್ಲಿ ಯಾರು ಶ್ರೇಷ್ಠರು?"

"ಹಾಗಾದರೆ ಸದಾಶಿವ—ಕಪನೀಪತಿ ಇವರಿಬ್ಬರೂ ಒಂದೇನೇ?"

"ಲೀಲಾವತಿಯ ದೃಷ್ಟಿಯಲ್ಲಿ ಇಬ್ಬರೂ ಪುರುಷರು."

"ಸದಾಶಿವ ಲೀಲಾವತಿಯ ಕಾಮಪೂಜೆಗೆ ಅರ್ಹನಾದ ಆದರ್ಶ ಪುರುಷ. ಇಂಥವನೊಂದಿಗೆ ಕಾಮುಕನಾದ ಕಪನೀಪತಿಯನ್ನು ಹೋಲಿಸುವುದೇ?"

"ಈಗ ಭಾವನೆ ಮುಖ್ಯವಲ್ಲ. ಲೀಲಾವತಿಗೆ ಬೇಕಾಗಿರುವುದು ಅವಳ ಅತೃಪ್ತ ಬಯಕೆಗಳು ಸಂತೃಪ್ತಿಗೊಳ್ಳುವುದು. ಇದಕ್ಕೆ ಯಾರಾದರೇನು?"

"ಕಪನೀಪತಿಯಿಂದ ಲೀಲಾವತಿಯ ಬಯಕೆ ಹಿಂಗುವುದೇ?" ಮನಸ್ಸಿಗೆ ಹಿತವನ್ನು ಉಂಟುಮಾಡದ ಕಪನೀಪತಿ ದೇಹಕ್ಕೆ ಸುಖ ಕೊಟ್ಟಾನೆ?"

"ಈ ಪ್ರಶ್ನೆಗೆ ಲೀಲಾವತಿಯೇ ಉತ್ತರ ಹೇಳಿದ್ದಾಳೆ. ಅವಳು ಕಪನೀಪತಿಯನ್ನು ನೋಡಲು ಅಷ್ಟೇಕೆ ಹೆದರಬೇಕು, ಲಜ್ಜೆ ನಾಚಿಕೆಗಳಿಂದ ಕುಗ್ಗಬೇಕು? ಲೀಲಾವತಿ ಏಕೆ ಕಪನೀಪತಿಯನ್ನು ನೋಡುತ್ತಲೂ ತನ್ನ ಸೀರೆಯ ಸೆರಗಿನ ಮೇಲೆ ಗಮನ ಹರಿಸಬೇಕು? ನಿಜ ಹೇಳುತ್ತೇನೆ ಕೇಳು. ಕಪನೀಪತಿ ನೋಡಲು ಸದಾಶಿವನಂತೆ ಮನ್ಮಥನಲ್ಲದೆ ಇರಬಹುದು. ಆದರೆ ಅವರಲ್ಲಿ ಲೀಲಾವತಿಯ ಹೃದಯದಲ್ಲಿ ಹುದುಗಿರುವ ಸ್ತ್ರೀತ್ವವನ್ನು ಕೆರಳಿಸುವ ಸಾಮರ್ಥ್ಯವಿದೆ. ಅವಳ ಸುಪ್ತವಾದ ಬಯಕೆಗಳನ್ನು ಹೊಡೆದೆಬ್ಬಿಸಿ ಅವಕ್ಕೆ ತುಪ್ಪ ಸುರಿದು, ಭುಗಿಲನೆ ಹೊತ್ತಿಸುವ ಚೈತನ್ಯ ಅವನ ಕಣ್ಣುಗಳಿಗೆ ಇವೆ; ಅವನ ತುಟಿಗಳಿಗೆ ಇವೆ; ಅವನ ಬಾಹುಗಳಿಗೆ ಇವೆ. ಸುಮ್ಮನೆ ವ್ಯರ್ಥ ಪ್ರಲಾಪದಿಂದ ಪ್ರಯೋಜನವಿಲ್ಲ. ಬಾಯಾರಿ ಬಳಲಿರುವ ವ್ಯಕ್ತಿಗೆ ನೀರು ಉಣಿಸಲು ಕೊಟ್ಟಾಗ ಅದನ್ನು ಕಾಲಿನಿಂದ ಒದೆಯುವುದು ಮೂರ್ಖತನವೇ ಸರಿ. ಒಮ್ಮೆ ಬರುವ ಅವಕಾಶ ಮತ್ತೊಮ್ಮೆ ಬರದೆ ಹೋಗಬಹುದು. ಬಂದ ಅವಕಾಶವನ್ನು ಸದುಪಯೋಗಪಡಿಸಿಕೊಳ್ಳುವುದು ಬುದ್ಧಿವಂತರ ಲಕ್ಷಣ!" ಹೀಗೆ ಲೀಲಾವತಿಯ ತಲೆಯಲ್ಲಿ ಪ್ರಚಂಡ

ಹೋರಾಟವೇ ನಡೆಯಿತು. ಜಗತ್ತಿನಲ್ಲಿ ಮೊದಲು ಅಧರ್ಮಕ್ಕೇ ಗೆಲುವಾಗುವಂತೆ, ಅವಿವೇಕವೇ ಈಗ ಜಯಶಾಲಿಯಾಗಿ, ಲೀಲಾವತಿಯ ವಿಚಾರದ ಕಣ್ಣನ್ನು ಮುಚ್ಚಿ, ಅವಳನ್ನು ತನ್ನ ವಶಕ್ಕೆ ತೆಗೆದುಕೊಂಡಿತು. ಲೀಲಾವತಿ ಮರುಮಾತನಾಡದೆ ಒಮ್ಮೆ ಕಪನೀಪತಿರಾಯರನ್ನು ನೋಡಿದಳು. ಆ ನೋಟದಲ್ಲಿ ತನಗೆ ಬೇಕಾಗಿದ್ದ ಉತ್ತರ ಕಪನೀಪತಿರಾಯರಿಗೆ ಸಿಕ್ಕಿತೇನೋ. ಅವರು ಬಂದವರೇ ಲೀಲಾವತಿಯನ್ನು ತಮ್ಮ ಎರಡು ತೋಳುಗಳಲ್ಲಿ ಎತ್ತಿಕೊಂಡು ಅವಳನ್ನು ಹಣ್ಣನ್ನು ಹಿಸುಕುವಂತೆ ಹಿಸುಕಿದರು. ಈ ಅಪ್ಪುಗೆಯಿಂದ ಲೀಲಾವತಿಯ ಅಂಗಾಂಗಗಳಲ್ಲಿ ಬೆಂಕಿ ಹೊತ್ತಿಕೊಂಡಂತಾಗಿ ಅದರ ಬೇಗೆಯನ್ನು ಸಹಿಸಲಾರದೆ ಲೀಲಾವತಿ ಮೈ ಬೆವತು ಕ್ಷಣ ಕಾಲದಲ್ಲಿ ಮೇಣದಂತೆ ಮೃದುವಾದಳು. ಅವಳಿಗೆ ಕಪನೀಪತಿರಾಯರ ಅಪ್ಪುಗೆ ಅಪೂರ್ವ ರೀತಿಯ ಅನಿರ್ವಚನೀಯವಾದ ಆನಂದವನ್ನು ಉಂಟುಮಾಡಿತು. ಅವಳು ದಣಿದವಳೆಂಬಂತೆ ಕಪನೀಪತಿರಾಯರ ತೋಳಿನಲ್ಲಿ ಮಲಗಿ ಇಹ ಜಗತ್ತನ್ನೇ ಮರೆತಳು.

## ೧೬

ಮನುಷ್ಯರ ಆಸೆಗಳೆಲ್ಲವೂ ಹೀಗೆಯೇ. ಅವರು ಬಯಸುವುದೊಂದು, ದೈವ ನಡಸುವುದೊಂದು. ವಿಶ್ವನಾಥರಾಯರು, ಸುರೇಂದ್ರ ಇಚ್ಛೆಪಟ್ಟಾಗ ಲೀಲಾವತಿಯ ಮನುವೆ ನಡಸಿಬಿಟ್ಟಿದ್ದರೆ ಅದರ ರೀತಿಯೇ ಬೇರೆಯಾಗಿರುತ್ತಿತ್ತು. ಆದರೆ ವಿಶ್ವನಾಥರಾಯರ ದೇಹಾರೋಗ್ಯ ಅವರಿಬ್ಬರ ಮದುವೆಗೆ ಅಡ್ಡ ಬಂತು. ಅವರ ಆರೋಗ್ಯ ಇಂದು ಉತ್ತಮಗೊಳ್ಳುತ್ತದೆ, ನಾಳೆ ಉತ್ತಮಗೊಳುತ್ತದೆ ಎಂದು ಅನೇಕ ತಿಂಗಳುಗಳು ತಳ್ಳುತ್ತಾ ಹೋಗಿ ಸುರೇಂದ್ರ ಲೀಲಾವತಿಯರ ವಿವಾಹ ಎಲ್ಲರ ಬಾಯಲ್ಲಿ ಇದ್ದ ಮಾತಾಗಿ ಕಾರ್ಯರೂಪಕ್ಕೆ ಬಾರದೆ ಉಳಿಯಿತು. ಲೀಲಾವತಿ ತನ್ನ ತಂದೆಯ ಆರೋಗ್ಯ ಗುಣವಾಗದ ಹೊರತು ಮದುವೆಗೆ ಪ್ರಯತ್ನಿಸಬಾರದೆಂದು ಮದುವೆಯ ಬಗ್ಗೆ ಅಷ್ಟಾಗಿ ಆಸಕ್ತಿವಹಿಸಲಿಲ್ಲ. ಇದೇ ಅವಳ ಪಾಲಿನ ದೌರ್ಭಾಗ್ಯ. ಸುರೇಂದ್ರ ಮದುವೆಯ ಹುಮ್ಮಸ್ಸಿನಲ್ಲಿ ಇದ್ದಾಗ ಲೀಲಾವತಿ ಅವನನ್ನು ಮದುವೆಯಾಗಿದ್ದರೆ ಲೀಲಾವತಿಯ ಜೀವನ ಸುಗಮವಾಗುತ್ತಿತ್ತು. ಆದರೆ ಅವಳು ಮಾಡಿದ ದುಡುಕು ಅವಳ ಕಾಲ್ತೊಡಕಾಯಿತು.

ಸದ್ಯಕ್ಕೆ ಲೀಲಾವತಿಯ ಎರಡು ಚಿಂತೆಗಳು ಪರಿಹಾರವಾಗಿದ್ದುವು. ವಿಶ್ವನಾಥರಾಯರ ದೇಹಸ್ಥಿತಿ ಕೊಂಚ ಸುಧಾರಿಸಿತ್ತು. ಅವಳ ವರ್ಗದ ವಿಷಯ ನಿರ್ಧಾರವಾಗಿ ಅವಳ ವರ್ಗ ರದ್ದಾಗಿತ್ತು. ಇದಕ್ಕಾಗಿ ಅವಳು ಕೊಟ್ಟ ಬೆಲೆ ಅಲ್ಪವೆ? ಆ ಸಮಯದಲ್ಲಿ ತಾನು ಮಾಡುತ್ತಿರುವ ಕೆಲಸ ಕ್ಷುಲ್ಲಕವಾದದ್ದು, ತಾನು ಕೊಡುತ್ತಿರುವ ಬೆಲೆ ಅಲ್ಪವಾದದ್ದು ಎಂದು ಲೀಲಾವತಿ ತಿಳಿದಿದ್ದಳು. ಯಾಕೆಂದರೆ ಕಾಮದ ಬಗ್ಗೆ ಅವಳಿಗಿದ್ದ ಅಭಿಪ್ರಾಯ ಅಂತಹದು. ಅದಕ್ಕೆ ಅಂತಹ ಪ್ರಾಮುಖ್ಯತೆಯನ್ನು ಅವಳು ಕೊಟ್ಟಿರಲಿಲ್ಲವೆಂದೇ ಆ ದಿನ ಲೀಲಾವತಿ ತನ್ನ ಶೀಲವನ್ನು ಸೂರೆಗೊಟ್ಟದ್ದು. ಹೆಣ್ಣಿನ ಬಗ್ಗೆ ಅವಳಿಗೆ ಇದ್ದ ತಿಳಿವಳಿಕೆ, ಲೈಂಗಿಕವ್ಯಾಪಾರದ ಬಗ್ಗೆ ಅವಳಿಗಿದ್ದ ಮೌಢ್ಯ ಇವು ಅವಳ ಆ ಬಗೆಯ ಅಭಿಪ್ರಾಯಕ್ಕೆ ಪುಷ್ಟಿ ಕೊಟ್ಟಿದ್ದುವು. ಅವಳು ಆ ದಿನದ ತನ್ನ ವರ್ತನೆಯನ್ನು ಅಷ್ಟಾಗಿ ಮನಸ್ಸಿಗೆ ಹಚ್ಚಿಕೊಂಡಿರ

ಲಿಲ್ಲ. ಲೈಂಗಿಕ ಸುಖಕ್ಕಾಗಿ ಹಾತೊರೆಯುತ್ತಿದ್ದ ಲೀಲಾವತಿಯ ದೇಹಕ್ಕೆ ಪ್ರಣಯ ಕಲೆಯಲ್ಲಿ ನಿಷ್ಣಾತರಾಗಿದ್ದ ಕಪನೀಪತಿರಾಯರು ಅವಳ ನಿರೀಕ್ಷೆಗೂ ಮೀರಿದ ಸುಖ ತೃಪ್ತಿಗಳನ್ನು ಕೊಟ್ಟಿದ್ದರು. ಅವರು ಗಂಡಿನಂತೆ ಬೆಳೆದಿದ್ದ ಲೀಲಾವತಿಯನ್ನು ಹೆಣ್ಣಾಗಿ ಪರಿವರ್ತಿಸಿ ಅವಳಿಗೆ ಹೆಣ್ತನದ ಸುಖವೇನೆಂಬುದನ್ನು ಮೊದಲ ಬಾರಿಗೆ ಪರಿಚಯ ಮಾಡಿಕೊಟ್ಟಿದ್ದರು. ಇದಕ್ಕಾಗಿ ಅವಳು ಪ್ರೊಫೆಸರ್ ಅವರಿಗೆ ಕೃತಜ್ಞಳಾಗಿಯೇ ಇದ್ದಳು! ಕಾಮವೇ ಬೇರೆ, ಪ್ರೇಮವೇ ಬೇರೆ, ದೇಹಕ್ಕೆ ಸಂಬಂಧಿಸಿದುದು ಕಾಮ, ಹೃದಯಕ್ಕೆ ಸಂಬಂಧಿಸಿದುದು ಪ್ರೇಮ ಎಂಬುದಾಗಿ ಕೃತಕವಾದ ವಿಭಜನೆ ಮಾಡಿದ್ದ ಲೀಲಾವತಿಗೆ ತಾನು ಮಾಡಿದ್ದ ಕೆಲಸ ತಪ್ಪಾಗಿ ಕಾಣಲಿಲ್ಲ. ತಾನು ತನ್ನ ವಯೋಧರ್ಮಕ್ಕೆ ಅನುಗುಣವಾದ ಆಸೆಯನ್ನು ತೃಪ್ತಗೊಳಿಸಿಕೊಂಡಿದ್ದಳು. ಇದರಲ್ಲಿ ಅಂತಹ ಮಹತ್ವದ ಅಂಶವಿಲ್ಲವೆಂದು ಅವಳು ಭಾವಿಸಿದ್ದಳು. ಆದರೆ ಅವಳ ದೇಹ ಅವಳ ಭಾವನೆಗೆ ತಕ್ಕಂತೆ ಕುಣಿಯದೆ ಹೋಯಿತು. ಅದಕ್ಕೆ ಆ ದಿನ ಹೊಸ ಅನುಭವವಾಗಿತ್ತು. ಬಾಲ್ಯದಿಂದಲೂ ಗಂಡಿನಂತೆ ಬೆಳೆದಿದ್ದ ಲೀಲಾವತಿಯ ಹೆಣ್ತನದ ಕಣ್ಣು ತೆರೆದಿತ್ತು. ಅದಕ್ಕೆ ಎತ್ತ ತಿರುಗಿದತ್ತ ಚೆಲುವಿನ ನೋಟಗಳೇ ಕಂಡುವು. ಈ ಹಿಗ್ಗಿನಲ್ಲಿ ಅವಳು ಇರುವಾಗ ಅವಳ ಹಿಗ್ಗನ್ನೆಲ್ಲ ಕುಗ್ಗಿಸುವಂತಹ ಸಂಗತಿಯೊಂದು ಹಠಾತ್ತನೆ ಕಾಣಿಸಿಕೊಂಡಿತು. ಆ ತಿಂಗಳು ಲೀಲಾವತಿ ಎಂದಿನಂತೆ ಬಹಿಷ್ಠೆಯಾಗಲಿಲ್ಲ. ಲೀಲಾವತಿ ಈ ವಿಷಯವನ್ನು ಉಪೇಕ್ಷೆಮಾಡಿಬಿಟ್ಟಳು. ಯಾಕೋ ತಡವಾಯಿತು ಎಂದು ಕೊಂಡು ನಿರ್ಲಕ್ಷಿಸಿ ಬಿಟ್ಟಳು. ಇನ್ನೊಂದು ತಿಂಗಳೂ ಕಳೆಯಿತು. ಆಗ ಲೀಲಾವತಿಗೆ ಮೊಟ್ಟಮೊದಲ ಬಾರಿ ಹೆದರಿಕೆಯಾಯಿತು. ತಾನೇಕೆ ಎಂದಿನಂತೆ ಬಹಿಷ್ಠೆಯಾಗುತ್ತಿಲ್ಲ? ತಾನು ಬಹಿಷ್ಠೆಯಾಗದಿರುವುದಕ್ಕೂ ಆ ದಿನ ಕಪನೀಪತಿರಾಯರ ಮನೆಯಲ್ಲಿ ನಡೆದ ಕೃತ್ಯಕ್ಕೂ ಸಂಬಂಧವೇನಾದರೂ ಇದ್ದೀತೆ? ಎಂದು ಆಲೋಚಿಸುವಂತೆ ಆಯಿತು. ಇವೆರಡಕ್ಕೂ ಸಂಬಂಧ ಕಲ್ಪಿಸುವಷ್ಟು ಹೆಣ್ತನದ ಸಾಮಾನ್ಯ ತಿಳಿವಳಿಕೆ ಗಂಡಾಗಿ ಬೆಳೆದಿದ್ದ ಲೀಲಾವತಿಗೆ ಇರಲಿಲ್ಲ. ಅವಳು ಸ್ವೈರ ವೃತ್ತಿಯಲ್ಲಿದ್ದ ಅನೇಕ ಹೆಂಗಸರನ್ನು

ನೋಡಿದ್ದಳು. ಲೈಂಗಿಕ ವಿಷಯಗಳಲ್ಲಿ ಬೇಜವಾಬ್ದಾರಿಯಿಂದ ವರ್ತಿಸುವ ಅನೇಕ ಮಹಿಳೆಯರನ್ನು ಕಣ್ಣಾರ ಕಂಡಿದ್ದಳು. ಅವರೆಲ್ಲರಿಗೆ ತಮ್ಮ ಪಾಪ ಜೀವನದ ಫಲವಾಗಿ ಒಮ್ಮೆಯೂ ಸಂತಾನ ಲಾಭವಾಗಿರಲಿಲ್ಲ. ಇದರಿಂದ ಲೀಲಾವತಿ ಲೈಂಗಿಕ ಸುಖಕ್ಕೂ ಸಂತಾನ ಲಾಭಕ್ಕೂ ಅಷ್ಟಾಗಿ ಸಂಬಂಧವಿಲ್ಲವೆಂದೂ ಸಂತಾನಲಾಭ ಆಕಸ್ಮಿಕವೆಂದೂ ತಿಳಿಯುವಂತೆ ಆಗಿತ್ತು. ಈ ಬಗೆಯ ಅಜ್ಞಾನವಿದ್ದುದರಿಂದಲೇ ಆ ದಿನ ಲೀಲಾವತಿ ಕಪನೀಪತಿರಾಯರ ತೋಳಿಗೆ ತನ್ನನ್ನು ಸುಲಭವಾಗಿ ಒಪ್ಪಿಸಿಕೊಂಡದ್ದು. ತಾನು ಮಾಡಲಿರುವ ಕೃತ್ಯದ ಹೊಟ್ಟೆಯಿಂದ ವಿಷ ಜಂತುಗಳು ಹುಟ್ಟುವುವೆಂದು ಅವಳಿಗೆ ತಿಳಿದಿದ್ದರೆ ಅವಳು ಅಷ್ಟೊಂದು ದುಡುಕುತ್ತಿರಲಿಲ್ಲವೆಂದು ತೋರುತ್ತವೆ. ಏನೇ ಇರಲಿ. ಅಂದಿನ ಲೀಲಾವತಿಯ ದುಡುಕಿಗೆ ಇಂದು ಪ್ರಾಯಶ್ಚಿತ್ತ ಅನುಭವಿಸಬೇಕಾದ ಹೊತ್ತು ಬಂದಿತ್ತು. ಈ ವಿಷಯವನ್ನು ನೆನೆದೇ ಹೆದರಿ ಕುಳಿತಳು ಲೀಲಾವತಿ. ತಾನು ಒಂದೇ ಒಂದು ಬಾರಿ ಪುರುಷಸಂಪರ್ಕ ಬೆಳೆಸಿದ ಮಾತ್ರಕ್ಕೆ ಅದು ತನಗೆ ಶಾಪವಾಗುತ್ತದೆ ಎಂದು ಅವಳು ತಿಳಿದಿರಲಿಲ್ಲ. ಈ ವಿಷಯ ತಿಳಿದಾಗ, ತಾನು ಹೊರಗಾಗದೆ ಇರುವುದರ ಕಾರಣ ಕಪನೀಪತಿಯವರೊಂದಿಗೆ ತಾನು ಬೆಳೆಸಿದ್ದ ದೇಹಸಂಪರ್ಕವೆಂದು ತಿಳಿದ ಮೇಲೆ ಅವಳಿಗೆ ಆಕಾಶವೇ ಬಂದು ತಲೆಯ ಮೇಲೆ ಬಿದ್ದಂತೆ ತೋರಿತು. ಏನು ಮಾಡಬೇಕೆಂದು ತೋಚದೆ ಹೋಯಿತು. ಅವಳು ಈ ಬಗೆಯ ಅನಿಶ್ಚಿತ ಮನಸ್ಸಿನಲ್ಲಿ ಇರುವಾಗಲೇ ಮತ್ತೊಂದು ತಿಂಗಳೂ ಕಳೆಯಿತು. ಈಗಂತೂ ಲೀಲಾವತಿಗೆ ತಾನು ಗರ್ಭಿಣಿ ಎಂಬ ಸಂಗತಿ ಖಚಿತವಾಯಿತು. ಅವಳು ಈ ಮಧ್ಯೆ ಓದಿಕೊಂಡಿದ್ದ ಲೈಂಗಿಕ ಶಾಸ್ತ್ರಕ್ಕೆ ಸಂಬಂಧಿಸಿದ ಪುಸ್ತಕಗಳಿಂದ ತನ್ನ ಸ್ಥಿತಿ ಎಂತಹದೆಂದು ತಿಳಿದಿತ್ತು. ಈ ತಿಳಿವಳಿಕೆ ಬರುವ ವೇಳೆಗೆ ಅವಳು ತಾಯಿತನದ ಜವಾಬ್ದಾರಿಯನ್ನು ಸುಲಭವಾಗಿ ನಿವಾರಿಸಿಕೊಳ್ಳುವ ಪ್ರಯತ್ನ ಮಾಡಲಾಗದ ಸ್ಥಿತಿಯಲ್ಲಿ ಇದ್ದಳು. ಅವಳಿಗೆ ಏನಾದರೂ ಮಾಡಿ ತನ್ನ ಹೊಟ್ಟೆಯಲ್ಲಿನ ಪಿಂಡದ ಕಥೆ ಮುಗಿಸಿಬಿಡುವ ಆಸೆಯಾಯಿತು. ಆದರೆ ಇದನ್ನು ಇನ್ನೊಬ್ಬರಿಗೆ ಹೇಳಿ ಅವರ ನೆರವನ್ನು ಪಡೆದುಕೊಳ್ಳಲು ಅವಳಿಗೆ ಸಂಕೋಚ, ಮೇಲಾಗಿ ಹೆದರಿಕೆ. ಇದರಿಂದ ತನ್ನ

ದೇಹಕ್ಕೆ ಕೇಡುಂಟಾದರೆ ಗತಿ? ಈ ಹೆದರಿಕೆಯಲ್ಲಿ ಅವಳಿರುವಾಗಲೇ ಲೀಲಾವತಿ ಗರ್ಭವತಿಯಾಗಿ ಮೂರು ತುಂಬಿ ನಾಲ್ಕನೆಯ ತಿಂಗಳಿಗೆ ಬಿದ್ದಿತ್ತು. ಇದುತನಕ ತನ್ನ ಸ್ಥಿತಿಯನ್ನು ಗೋಪ್ಯವಾಗಿ ಇರಿಸಿದ್ದಂತೆ ಇನ್ನುಮೇಲೆ ಇರಿಸುವುದು ಕಷ್ಟವಾಯಿತು. ಲೀಲಾವತಿಗೆ ಕಾಲೇಜಿಗೆ ಹೋಗಲು ಅಂಜಿಕೆಯಾಯಿತು. ತನ್ನ ಸ್ಥಿತಿ ತನ್ನ ಸಹೋದ್ಯೋಗಿಗಳಿಗೆ ತಿಳಿದುಬಿಟ್ಟರೆ ಇದರಿಂದ ತುಂಬಾ ಅವಮಾನವಾಗುವುದೆಂದೂ ಅವಳು ಹೆದರಿದಳು. ಕಾಲೇಜಿಗೆ ಹೋಗದೆ ಮನೆಯಲ್ಲಿ ಇರಲು ಅವಳಿಂದ ಆಗದೆ ಹೋಯಿತು. ಮನೆಯಲ್ಲಿದ್ದ ಮೇಲೆ ಡಾಕ್ಟರಾದ ಸುಮಿತ್ರೆಯ ದೃಷ್ಟಿಯಿಂದ ತನ್ನ ದೇಹಸ್ಥಿತಿಯನ್ನು ಬಚ್ಚಿಡುವುದು ಹೇಗೆ ಸಾಧ್ಯ? ಆದರೂ ತನಗೆ ಮೈಯಲ್ಲಿ ಸರಿ ಇಲ್ಲವೆಂದು ಸೋಗುಹಾಕಿ ಸದಾ ಕಾಲ ಹಾಸಿಗೆಯ ಮೇಲೆ ಮಲಗಿ ಇರುತ್ತಿದ್ದಳು. ತನ್ನ ಜತೆಗೆ ಇನ್ನಿಬ್ಬರು ಇರುವುದನ್ನು ಅವಳು ಸಹಿಸುತ್ತಿರಲಿಲ್ಲ. ಅವಳು ಸದಾ ಕಾಲ ಏನನ್ನೋ ಕುರಿತು ಚಿಂತಿಸುತ್ತಿದ್ದಳು. ತನಗೆ ಬಂದಿರುವ ಈ ಗಂಡಾಂತರದಿಂದ ತಾನು ಬಿಡುಗಡೆ ಹೊಂದುವ ದಾರಿ ಹೇಗೆ? ಗರ್ಭಪಾತ ಮಾಡಿಕೊಳ್ಳಲು ಕಾಲ ಮಿಂಚಿ ಹೋಗಿತ್ತು. ಈಗ ಸರಿಯಾದ ಶಸ್ತ್ರ ಚಿಕಿತ್ಸೆ ಇಲ್ಲದೆ ಗರ್ಭಪಾತ ಮಾಡಿಕೊಂಡರೆ ತನ್ನ ಜೀವಕ್ಕೆ ಆಪತ್ತು ಆದರೂ ಆದೀತು! ಗರ್ಭಪಾತ ಮಾಡಿಕೊಳ್ಳದೆ ಹೋದರೆ ಅವಳು ಬೀದಿಯಲ್ಲೆಲ್ಲೂ ತಲೆ ಎತ್ತಿ ತಿರುಗುವಂತೆ ಇಲ್ಲ. ಏನು ಮಾಡಬೇಕು ಎಂಬುದು ಅವಳಿಂದ ಬಗೆಹರಿಯದಾಯಿತು? ಅವಳಿಗೆ ತಾನು ಆ ದಿನ ವಿವೇಕದ ವಾಣಿಯನ್ನು ಲಕ್ಷಿಸದೆ ದುಡುಕಿ ಅವಿವೇಕಿಯಾಗಿ ವರ್ತಿಸಿದುದು ಎಂತಹ ವಿಪತ್ತಿಗೆ ಕಾರಣವಾಯಿತು ಎಂದು ಪಶ್ಚಾತ್ತಾಪ ಉಂಟಾಯಿತು. ಈಗ ಅವಳ ವಿವೇಕವಾಣಿ ಅವಳನ್ನು ಮೂದಲಿಸಿತು.

"ನೀನು ಆ ದಿನ ನನ್ನ ಮಾತನ್ನು ಕೇಳಿದ್ದರೆ ಈ ತೊಂದರೆಗೆ ಸಿಕ್ಕುತ್ತಲೇ ಇರಲಿಲ್ಲ. ನನ್ನ ಉಪದೇಶವನ್ನು ನಿರ್ಲಕ್ಷಿಸಿ ಅವಿವೇಕಿಯಾದೆ. ಆಗ ಮಾಡಿದ ಪಾಪದ ಫಲವನ್ನು ಈಗ ಅನುಭವಿಸು."

ಲೀಲಾವತಿ ತನ್ನನ್ನು ಕೊಲ್ಲುವ ಈ ಮಾತುಗಳನ್ನು ಕೇಳಲಾರದೆ, ನೆನೆಯಲಾರದೆ ತಲೆಯನ್ನು ಚಚ್ಚಿಕೊಂಡಳು. ಅವಳ ತಲೆಯಲ್ಲಿ ವಿವೇಕ

ವಾಣಿ ಮೊಳಗುತ್ತಲೇ ಇತ್ತು.

“ ನಿನ್ನನ್ನು ಹಳಿದು ಪ್ರಯೋಜನವೇನು ? ಇದು ನಿನ್ನ ತಪ್ಪಲ್ಲ. ನಿನ್ನ ಆದರ್ಶದ ತಪ್ಪು ! ನೀನು ಅತಿ ಮಾನವಳೆಂಬಂತೆ ಕಾಮವನ್ನು ಪ್ರೇಮದಿಂದ ಬೇರ್ಪಡಿಸಲು ಹೊರಟೆ. ಅವುಗಳ ಪರಿಣಾಮವಿದು. ”

“ ಹೇಗೆ ? ” ಲೀಲಾವತಿ ಪ್ರಶ್ನಿಸಿದಳು.

“ ನೀನು ಪ್ರೇಮವನ್ನು ಹೃದಯದ ಸ್ವತ್ತಾಗಿಯೂ, ಕಾಮವನ್ನು ದೇಹದ ಸ್ವತ್ತಾಗಿಯೂ ಪರಿಗಣಿಸಿದೆ. ಇಷ್ಟನ್ನು ನುಡಿದು ತೃಪ್ತಿಗೊಳ್ಳದೆ ಇದರಂತೆ ನಡೆದು—ಎಂಥಹ ಗಂಡಾಂತರವನ್ನು ತಂದುಕೊಂಡಿರುವೆ ನೋಡು—ನಿನ್ನ ವಿಚಿತ್ರ ಬಗೆಯ ಆದರ್ಶ ಎಂತಹ ಕಾರ್ಕೋಟಕ ಹಣ್ಣನ್ನು ಕೊಟ್ಟಿದೆ ನೋಡು. ”

ಎಂದು ಮೊದಲಿಸಿತು ವಿವೇಕವಾಣಿ.

ಲೀಲಾವತಿ ಪ್ರಶ್ನಿಸಿದಳು. “ ಇದು ಹೇಗೆ ತನ್ನ ಆದರ್ಶದ ಫಲವಾದೀತು ? ”

“ ನೀನು ಕಾಮಪ್ರೇಮಗಳ ನಡುವೆ ಕೃತಕವಾದ ಪ್ರಭೇದವನ್ನು ಕಲ್ಪಿಸಿ ಶುದ್ಧಾಂಗವಾದ ದೇಹವನ್ನು ಅಧರ್ಮಾಂಗವಾಗಿ ಮಾಡಿದೆ. ಈ ದೇಹ ಕೇವಲ ಕಾಮನ ಬಿಡಾರವೂ ಅಲ್ಲ. ಪ್ರೇಮದ ಬಿಡಾರವೂ ಅಲ್ಲ. ಇದು ಅಂತರಾತ್ಮನ ಕ್ರೀಡಾರಂಗ. ಅಂತೆಯೇ ಪಂಚ ಭೂತಗಳಿಂದ ಆಗಿರುವ ಈ ದೇಹ ಪರಮಾತ್ಮನ ಆವಾಸಸ್ಥಳವಾಗಿರುವ ತನಕ ಇದು ಪವಿತ್ರವಸ್ತು ಜೀವ ಹೋದ ಮೇಲೆ ಈ ದೇಹವೇನು ? ಹುಡಿ ಮಣ್ಣೇನು ? ಎಲ್ಲವೂ ಒಂದೇ. ಇಂತಹ ದೇಹವನ್ನು ನೀನು ಕಾಮನ ಕೈಗೆ ಕೊಟ್ಟು ಪಂಚಬಾಣನ ಕ್ರೀಡಾವಸ್ತುವಾಗಿ ಪರಿವರ್ತಿಸಿದೆ. ಇದೇ ನೀನು ಮಾಡಿದ ಮಹಾಪರಾಧ. ”

“ ಹಾಗಾದರೆ ಕಾಮಪ್ರೇಮಗಳು ದೇಹಕ್ಕೆ ಸಂಬಂಧಿಸದ ವಿಷಯಗಳೇ ? ”

“ ಕಾಮ ಪ್ರೇಮಗಳು ದೇಹಕ್ಕೆ ಸಂಬಂಧಿಸಿಯೂ ಸಂಬಂಧಿಸದ ಭಾವಗಳು. ವ್ಯಕ್ತಿಗಳ ದೃಷ್ಟಿಯೇ ಈ ಭಾವನೆಗಳ ಉಗಮ. ಅಂತರಾ

ತ್ಮನ ದಿವ್ಯ ಸಾಕ್ಷಾತ್ಕಾರಕ್ಕೆ ಇರುವ ಏಣಿಯಂತೆ ಈ ಪ್ರೇಮಕಾಮಗಳು. ಗಂಡುಹೆಣ್ಣಿನ ಭಾವನೆ ಎಷ್ಟೇ ಪೂಜ್ಯವಾದರೂ ಒಬ್ಬರನ್ನು ಒಬ್ಬರು ಅಗಲ ದಂತೆ ಕಾಯುವ ಅಂಟು ಆಕರ್ಷಣೆಗೆ—ಕಾಮ. ಗಂಡುಹೆಣ್ಣಿನ ಕಾಮದ ಬಗ್ಗಡದಿಂದ ಮೇಲೇರಿ ಬರುವ ಅಮೃತಭಾವವೇ ಪ್ರೇಮ. ಇದನ್ನು ಈಶ್ವರಾರ್ಪಣ ಮಾಡಿದಾಗಲೇ ಅಂತರಾತ್ಮನ ಸಾಕ್ಷಾತ್ಕಾರ. ವ್ಯಕ್ತಿಗತ ವಾಗಿರುವ ಸಂಕುಚಿತ ಪ್ರೇಮ ವಿಶ್ವ ಪ್ರೇಮವಾದಾಗ ಅದು ದೈವಿಕ ಪ್ರೇಮ ವಾಗಿ ಅಮರವಾಗುವುದು. ಸಕಲ ಸೃಷ್ಟಿಯನ್ನು ಪ್ರೇಮದಿಂದ ನೋಡುವ ಕಣ್ಣಿಗೆ ಸತ್ಯಸ್ವರೂಪನೂ ಶಿವಸ್ವರೂಪನೂ ಸುಂದರರೂಪನೂ ಆದ ಭಗ ವಂತ ಎಲ್ಲೆಲ್ಲೂ ಗೋಚರಿಸುತ್ತಾನೆ. ಆಗ ಅವನ ಬಾಳು ಪುನೀತವಾಗು ವುದು. ”

“ ಹಾಗಾದರೆ ಪ್ರೇಮ ? ”

“ ಅದು ದೇಹದ ಸ್ವತ್ತೂ ಅಲ್ಲ. ಹೃದಯದ ಸ್ವತ್ತೂ ಅಲ್ಲ. ಅದು ಅಂತರಾತ್ಮನ ಕ್ರೀಡಾರಂಗ. ”

“ ಹಾಗಾದರೆ ಮದುವೆ ಎಂದರೇನು ? ”

“ ನೀನು ತಿಳಿದಿರುವಂತೆ ದುರ್ಬಲರು ತಮ್ಮ ಲೈಂಗಿಕ ತೃಪ್ತಿಗಾಗಿ ಕಟ್ಟಿಕೊಂಡಿರುವ ಕೋಟೆಯಲ್ಲ. ಅದು ಗಂಡು ಹೆಣ್ಣುಗಳ ಆತ್ಮ ಸಾಕ್ಷಾ ತ್ಕಾರಕ್ಕಾಗಿ ಪರಸ್ಪರ ಪೂರಕವಾಗಲೆಂದು ಏರ್ಪಡಿಸಿರುವ ಪವಿತ್ರವಾದ ಬಾಂಧವ್ಯ. ”

ಈ ಎಲ್ಲ ವಿವೇಕ ತನಗೆ ಮೊದಲೇ ಬರಬಾರದಿತ್ತೆ ? ಎಂದು ಲೀಲಾ ವತಿ ಈಗ ಹಲುಬಿದಳು. ಎಲ್ಲ ಆದ ಮೇಲೆ ಪರಿತಪಿಸಿ ಪ್ರಯೋಜನವೇನು? ಎಡವಿದ ಕಾಲನ್ನು ಮತ್ತೆ ಎಡವದಂತೆ ನೋಡಿಕೊಳ್ಳಬಹುದೇ ಹೊರತು ಕಾಲನ್ನೇ ಕತ್ತರಿಸಿ ಹಾಕಲು ಆದೀತೆ? ಸದ್ಯಕ್ಕೆ ಎಡವಿದ ಗಾಯ ವಾಸಿ ಯಾಗಬೇಕು. ಅನಂತರ ಮತ್ತೆ ಎಡವದಂತೆ ಎಚ್ಚರ ವಹಿಸುವ ಮಾತು ! ತನ್ನ ಮನಸ್ಸಿಗಾದ ದೇಹಕ್ಕಾಗಿರುವ ಗಾಯಗಳನ್ನು ಯಾರಾದರೂ ಗುಣ ಪಡಿಸಿ, ತನ್ನನ್ನು ಮೊದಲಿನ ಲೀಲಾವತಿಯನ್ನಾಗಿ ಪರಿವರ್ತಿಸಿದರೆ ಅದ ಕ್ಕಾಗಿ ಏನು ಮಾಡಲು ಲೀಲಾವತಿ ಸಿದ್ಧಳಿದ್ದಳು. ಆದರೆ ಲೀಲಾವತಿಯ

ಅಂತರಂಗದ ಈ ಬೇನೆಯ ಸುಳಿವು ಯಾರಿಗೂ ತಿಳಿಯದಾಗಿತ್ತು. ಕಡೆಗೆ ಲೀಲಾವತಿ ಬಹುವಾಗಿ ಯೋಚಿಸಿ ಒಂದು ನಿರ್ಧಾರ ಮುಟ್ಟಿದಳು. ಗರ್ಭ ಪಾತ ಮಾಡಿಕೊಳ್ಳುವುದಂತೂ ಅವಳಿಂದ ಆಗದ ಮಾತಾಗಿ ಉಳಿಯಿತು. ಇನ್ನು ಇವನ್ನು ಉಳಿಯ ಬೇರೆ ದಾರಿ ಎಂದರೆ ತನ್ನ ಗುಟ್ಟು ಬಯಲಾಗು ವುದರೊಳಗೆ ತಾನು ವಿವಾಹವಾಗುವುದು. ಇದರಿಂದ ಎಷ್ಟೋ ಅಪವಾದ ಗಳನ್ನು ತಪ್ಪಿಸಲು ಸಾಧ್ಯ. ಮದುವೆಯಾದ ಕೆಲವು ತಿಂಗಳಿಗೆ ತನಗೆ ಮಗು ವಾದರೆ ಆಗ ಭಯವಿಲ್ಲ. ಗಂಡನೆನ್ನುವ ವ್ಯಕ್ತಿ ತನಗೆ ಇಲ್ಲದೆ ಇರುವಾಗ ತಾನು ಮಗುವಿನ ತಾಯಿಯಾದರೆ ಇದಕ್ಕಿಂತ ಅವಮಾನ ಬೇರೊಂದು ಇಲ್ಲ. ಆದುದರಿಂದ ತಾನು ಹೇಗೂ ಮದುವೆಯಾಗಬೇಕೆಂದಿದ್ದ ಸುರೇಂದ್ರ ನನ್ನು ಆದಷ್ಟು ಬೇಗ ಮದುವೆಯಾಗುವುದೇ ಒಳ್ಳೆಯದೆಂದು ತಂದೆ ಯೊಡನೆ ತನ್ನ ಮನದ ಆಸೆಯನ್ನು ತೋಡಿಕೊಂಡಳು. ವಿಶ್ವನಾಥರಾಯ ರಿಗೆ ಮಗಳ ಅಭಿಪ್ರಾಯ ತಿಳಿದು ತುಂಬಾ ಸಂತೋಷವೇ ಆಯಿತು.

ಆ ದಿನ ಸುಮಿತ್ರೆ ತನ್ನ ಮಗು ಬಾಲಚಂದ್ರನನ್ನು ಎತ್ತಿಕೊಂಡು ಹೊಸ ಸೀರೆಯುಟ್ಟು, ಮಗುವಿಗೆ ಹೊಸ ಅಂಗಿ ತೊಡಿಸಿ, ಕೈಯಲ್ಲಿ ಅಕ್ಷತೆಯ ಬೆಳ್ಳಿ ಬಟ್ಟಲನ್ನು ಹಿಡಿದುಕೊಂಡು ಬಂದು ಬಾಲಚಂದ್ರನ ಹುಟ್ಟಿದ ಹಬ್ಬಕ್ಕೆ ಲೀಲಾವತಿಯನ್ನು ಊಟಕ್ಕೆ ಕರೆಯಲು ಬಂದಳು. ಲೀಲಾವತಿ ಎಂದಿನಂತೆ ತನ್ನ ಕೋಣೆಯಲ್ಲಿ ಮಲಗಿದ್ದಳು. ಅವಳು ಸುಮಿತ್ರೆಯನ್ನು ನೋಡುತ್ತಲೇ ಹಾವು ಕಂಡಂತೆ ಬೆಚ್ಚಿಬಿದ್ದಳು. ತನ್ನನ್ನು ನೋಡಿ ಬೆಚ್ಚಿದ ಲೀಲಾವತಿ ಯನ್ನು ನೋಡಿ ಸುಮಿತ್ರೆ

" ಲೀಲಾ, ಲೀಲಾ ಏನಾಯಿತೆ? ಯಾಕೆ ಹಾಗೆ ಬೆಚ್ಚಿದೆ! ಯಾರೂ ಅಲ್ಲ ನಾನು ಸುಮಿತ್ರ " ಎಂದಳು.

" ನೀನಾ, ನಾನು ಯಾರೋ ಅಂತಿದ್ದೆ. ನಿನ್ನ ಹೊಸ ಬಟ್ಟೆಯಲ್ಲಿ ನನಗೆ ಗುರುತುಸಿಕ್ಕದೆ ಹೋಯಿತು. " ಎಂದಳು ಲೀಲಾವತಿ.

" ಯಾಕೆ ಮಲಗಿದ್ದಿ ? "

" ಯಾಕೋ ಅಮ್ಮ, ನನಗೆ ಅಸಾಧ್ಯವಾದ ತಲೆ ನೋವು."

ಸುಮಿತ್ರೆ ಲೀಲಾವತಿಯನ್ನು ಮುಟ್ಟಿನೋಡುತ್ತ ಹೇಳಿದಳು.

"ನೀನು ರಾತ್ರಿ ಎಲ್ಲ ನಿದ್ರೆಗೆಟ್ಟು ಓದುತ್ತಿ ಆದುದರಿಂದಲೇ ನಿನಗೆ 'ಹೆಲ್ತ್ ಅಪ್‌ಸೆಟ್' ಆಗಿರೋದು. ಮೂರು ಹೊತ್ತೂ ಮಲಗಿರೋದು-ಹೋಗಲಿ, ಆಮೇಲೆ ಫಾರ್ಮೆಸಿಗೆ ಬಾ ಔಷಧ ಕೊಡುತ್ತೇನೆ" ಎಂದು ಹೇಳಿ ಅವಳನ್ನು ಅವಳ ತಂದೆ ವಿಶ್ವನಾಥರಾಯರನ್ನು ಮನೆಗೆ ಊಟಕ್ಕೆ ಕರೆದು ಹೊರಟುಹೋದಳು.

ಸುಮಿತ್ರೆಯನ್ನು ನೋಡಿ ಲೀಲಾವತಿಗೆ ತುಂಬಾ ಅಸೂಯೆಯಾಗದೆ ಇರಲಿಲ್ಲ. ಅವಳಂತೆ ತಾನೂ ಮದುವೆಯಾಗಿ ಬಿಟ್ಟಿದ್ದರೆ ಎಂದು ಆಲೋಚಿಸಿದಳು. ದಿವಾಕರ ಅವಳ ಮುಂದೆ ಹಾದು ಹೋದ. ಅವನ ಹಿಂದೆ ಸುರೇಂದ್ರನೂ ಸುಳಿದು ಹೋದ. ಲೀಲಾವತಿ ಸುರೇಂದ್ರನ ಧ್ಯಾನದಲ್ಲಿ ತೊಡಗಿದ್ದಾಗಲೇ ಸುರೇಂದ್ರನೂ ಅಲ್ಲಿ ಪ್ರತ್ಯಕ್ಷವಾಗಿ ಕಾಣಿಸಿಕೊಂಡ.

"ಲೀಲಾ ನೋಡು. ಯಾರು ಬಂದಿದಾರೆ!" ಎಂದೆನ್ನುತ್ತಾ ವಿಶ್ವನಾಥರಾಯರು ಮಗಳ ಕೋಣೆಗೆ ಬಂದಿದ್ದರು. ಸುರೇಂದ್ರ ವಿಶ್ವನಾಥರಾಯರನ್ನು ಹಿಂಬಾಲಿಸಿ ಬಂದ. ಅವನನ್ನು ನೋಡುತ್ತಲೇ ಲೀಲಾವತಿಯ ಮುಖದಲ್ಲಿ ಬೆಳುದಿಂಗಳಿನಂತೆ ನಗು ಉಕ್ಕಿತು. ಅವಳಿಗೆ ಸುರೇಂದ್ರನ ಬರವು ಅಷ್ಟು ಪ್ರಿಯವಾಗಿತ್ತು.

"ನೀವು ಯಾಕೆ ಕ್ಲಬ್ಬಿಗೆ ಬರುತ್ತಿಲ್ಲ. ನೀವು ಒಂದೆರಡು ದಿನಗಳಿಂದ ಆ ಕಡೆ ಬರದೆ ಇರುವುದನ್ನು ಕಂಡು ವಿಚಾರಿಸಿಕೊಂಡು ಹೋಗಲು ಬಂದೆ."

"ಯಾಕೋ ಮೈಯಲ್ಲಿ ಕೊಂಚ ಹುಶಾರಿಲ್ಲ. ಆ ಕಡೆ ಬರಲಾಗಲಿಲ್ಲ. ನೀವು ವಿಚಾರಿಸಿಕೊಂಡು ಹೋಗಲು ಬಂದುದಕ್ಕೆ ತುಂಬಾ ಥ್ಯಾಂಕ್ಸ್!" ಎಂದಳು. ಲೀಲಾವತಿ ಸುರೇಂದ್ರನ ಜತೆಯಲ್ಲಿ ಅದೂ ಇದೂ ಮಾತು ಆಡಿ ತನ್ನ ಮನಸ್ಸನ್ನು ಎಷ್ಟೋ ಹಗುರಮಾಡಿಕೊಂಡಳು. ಸುರೇಂದ್ರನೊಡನೆ ಇಷ್ಟು ಬಿಚ್ಚು ಮನಸ್ಸಿನಿಂದ, ಪ್ರೀತಿಯಿಂದ ಮಾತನಾಡುವ ಲೀಲಾವತಿಯನ್ನು ನೋಡಿ ವಿಶ್ವನಾಥರಾಯರಿಗೆ ಒಂದು ಬಗೆಯ ಸಮಾಧಾನ ಉಂಟಾಯಿತು. ಅವರು ಏನನ್ನೋ ಗುಣಿಸಿಕೊಳ್ಳುತ್ತಾ ಕುಳಿತರು.

ಅವರು ಗುಣಿಸುತ್ತಿದ್ದುದು ಲೀಲಾವತಿ ಸುರೇಂದ್ರ ಇವರ ಲಗ್ನ.

ಮುಂದಿನ ತಿಂಗಳಲ್ಲಿ ಆಗಬೇಕಾಗಿದ್ದ ಲಗ್ನ ಲೀಲಾವತಿಯ ಬಲವಂತಕ್ಕೆ ಇದೇ ತಿಂಗಳ ಎರಡನೆಯ ವಾರವಲ್ಲಿ ಏರ್ಪಾಡಾಯಿತು. ಮದುವೆಗೆ ಸಿದ್ಧಪಡಿಸುವ ಎಲ್ಲ ಕೆಲಸಕಾರ್ಯಗಳು ವಧೂವರರ ಮನೆಯಲ್ಲಿ ತ್ವರೆಯಾಗಿ ನಡೆದುವು. ಲೀಲಾವತಿ ಸುರೇಂದ್ರರೇ ಹೋಗಿ ತಮಗೆ ಬೇಕಾದ ಒಡವೆ ವಸ್ತುಗಳನ್ನು ಆರಿಸಿದರು. ಲಗ್ನ ಪತ್ರಿಕೆಗಳು ಅಚ್ಚಾಗಿ ಸುರೇಂದ್ರ ಲೀಲಾವತಿಯರ ಬಂಧುಮಿತ್ರರಿಗೆ ಹೋಯಿತು. ಮದುವೆ ಇನ್ನೆಲ್ಲ ಕೇವಲ ಒಂದೇ ವಾರವಿದೆ. ವಧೂವರರಿಬ್ಬರೂ ತುಂಬಾ ಸಡಗರದಲ್ಲಿ ಇದ್ದಾರೆ.

ಟೆನ್ನಿಸ್ ಆಟವೆಂದರೆ ಜೀವವಾದ ಸುರೇಂದ್ರ ಮತ್ತು ಲೀಲಾವತಿಗೆ ಮದುವೆಯಾದರೇನು? ಹಬ್ಬವಾದರೇನು? ತಮ್ಮ ನೂರೆಂಟು ಕೆಲಸದ ನಡುವೆ ಟೆನಿಸ್ ಆಡಲು ಅವರು ವಿರಾಮ ಮಾಡಿಕೊಂಡಿದ್ದರು. ಮದುವೆಗೆ ಮೂರು ನಾಲ್ಕು ದಿನವಿದೆ ಎನ್ನುವಾಗ ಮಧ್ಯಾಹ್ನವೆಲ್ಲ ಲಗ್ನ ಪತ್ರಿಕೆ ಹಂಚುವ ಕೆಲಸ ಮುಗಿಸಿ, ಸುರೇಂದ್ರ ಲೀಲಾವತಿಯರು ಟೆನ್ನಿಸ್ ಕೋರ್ಟಿಗೆ ಇಳಿದಿದ್ದರು. ಆ ದಿನ ಲೀಲಾವತಿ ತುಂಬಾ ಹುರುಪಿನಿಂದ ಆಡಿ ಸುರೇಂದ್ರನನ್ನು ಒಂದು ಸೆಟ್ಟು ಸೋಲಿಸಿದಳು. ಇನ್ನೊಂದು ಸೆಟ್ಟು ಆಟ ಆಗುತ್ತಿರುವಾಗ ಅದೇನು ಕಾರಣವೋ ಲೀಲಾವತಿಗೆ ತಲೆಸುತ್ತಿಕೊಂಡು ಬಂದು ಅವಳಿಂದ ಆಟವಾಡಲು ಸಾಧ್ಯವಾಗಲಿಲ್ಲ. ಅವಳನ್ನು ಅಲ್ಲಿಯೇ ಇದ್ದ ಹುಲ್ಲಿನ ಮೇಲೆ ಕೂಡಿಸಲಾಯಿತು. ಲೀಲಾವತಿ ಆಟದಿಂದ ಆದ ಶ್ರಮದಿಂದ ಒಂದೆರಡು ಬಾರಿ ವಾಂತಿ ಮಾಡಿಕೊಂಡಳು. ಮದುವೆಯಾಗುವ ಹುಡುಗಿಗೆ ಶೀತವಾದೀತೆಂದು ಸುರೇಂದ್ರನಿಗೆ ಕಳವಳವಾಗಿ ಆದಷ್ಟು ಕೂಡಲೇ ಲೀಲಾವತಿಯನ್ನು ಮನೆಗೆ ಕರೆದೊಯ್ಯಲು ಹಾತೊರೆದು ಅವಳನ್ನು ತನ್ನ ಕಾರಿನಲ್ಲಿ ಕುಳ್ಳಿರಿಸಿಕೊಂಡು ಹೊರಟ. ಬರುತ್ತ ದಾರಿಯಲ್ಲಿ ಸುರೇಂದ್ರನ ಬಾಲ್ಯದ ಮಿತ್ರನೂ ಅವರ ಸಂಸಾರಕ್ಕೆ ತುಂಬಾ ಬೇಕಾದ ವ್ಯಕ್ತಿಯೂ ಆಗಿದ್ದ ಸೋಮಶೇಖರನ ಔಷಧ ಶಾಲೆ ಇತ್ತು. ಸೋಮಶೇಖರ ಸುರೇಂದ್ರ ಒಟ್ಟಿಗೆ ಓದಿದವರು. ಸುರೇಂದ್ರನ ಕೈಲಿ ಇಂಟರ್ ಮುಗಿಸುವುದು ಸಾಧ್ಯವಾಗದೆ ಅವನು ಅಲ್ಲಿಯೇ ನಿಂತು ಹೋದ. ಸೋಮಶೇಖರ ಮುಂದುವರೆದು ಎಲ್. ಎಂ. ಪಿ. ಮಾಡಿ

ಡಾಕ್ಟರಾಗಿದ್ದ. ಅವನು ಕಾಲೇಜ್ ರಸ್ತೆಯಲ್ಲಿ ಸ್ವಂತ ಫಾರ್ಮಸಿಯನ್ನು ಇಟ್ಟುಕೊಂಡಿದ್ದ. ಅವನಿಗೆ ಒಳ್ಳೆಯ ವ್ಯಾಪಾರವಾಗುತ್ತಿತ್ತು. ಸುರೇಂದ್ರನಿಗೆ ಬೇಸರವಾದರೆ ಅವನು ಹೋಗಿ ಆ ಫಾರ್ಮಸಿಯಲ್ಲಿ ಕುಳಿತುಕೊಳ್ಳುತ್ತಿದ್ದ. ಸುರೇಂದ್ರನಿಗೆ ಅವನ ಫಾರ್ಮಸಿ ಕಾಣುತ್ತಲೂ, ಲೀಲಾವತಿಯನ್ನು ಅವನಿಗೆ ತೋರಿಸಿ ಅವನಿಂದ ತಲೆನೋವಿನ, ವಾಂತಿ ನಿಲ್ಲುವ ಔಷಧಿಯನ್ನು ಪಡೆದುಕೊಂಡು ಹೋಗುವ ಮನಸ್ಸಾಯಿತು. ನಾಳೆ ಮದುವೆಯಾಗುವ ಹುಡುಗಿ ತಲೆ ನೋವಿನಿಂದ ಹಾಸಿಗೆ ಹಿಡಿದರೆ ಗತಿ? ಎನ್ನುವ ಹೆದರಿಕೆ ಅವನದು. ಆದರೆ ಈ ಸಲಹೆಗೆ ಜಪ್ಪಯ್ಯ ಅಂದರೂ ಲೀಲಾವತಿ ಒಪ್ಪಲಿಲ್ಲ. ಅವಳು ತನಗೆ ಯಾವ ಔಷಧವೂ ಬೇಡವೆಂದು ಹಠ ಹಿಡಿದಳು. 'ಹೋಗಲಿ! ನೀನು ಕಾರಿನಲ್ಲಿಯೇ ಕುಳಿತಿರು; ನಾನೇ ಇಳಿದು ಔಷಧ ತರುವೆ' ಎಂದು ಹೇಳಿ ಕಾರನ್ನು ಫಾರ್ಮಸಿಯ ಮುಂದೆ ನಿಲ್ಲಿಸಿ, ಔಷಧ ತರಲು ಒಳಗೆ ಬಂದ. ಸುರೇಂದ್ರ ನಡೆದ ವಿಷಯವನ್ನು ತಿಳಿಸಿ, ತಲೆ ನೋವಿನ ಔಷಧಿ ಕೇಳಿದ. ನಾಳೆ ಮದುವೆಯಾಗಲಿರುವ ಹುಡುಗಿಯ ತಲೆ ನೋವಾಗಿದ್ದುದರಿಂದ ಅವಳ ಹಿತರಕ್ಷಣೆ ತನಗೆ ಸೇರಿದ್ದೆಂದು ಆ ಗೆಳೆಯ ತಿಳಿದು ಲೀಲಾವತಿಯನ್ನು ಒಳಗೆ ಬರಲು ಹೇಳಿದ. ಆಗ ನಿರ್ವಾಹವಿಲ್ಲದೆ ಲೀಲಾವತಿ ಫಾರ್ಮಸಿ ಒಳಗೆ ಬರಬೇಕಾಯಿತು, ಬಂದಳು.

ಏಕೋ ಏನೋ ಸೋಮಶೇಖರ ಲೀಲಾವತಿ ನಡೆಯುವುದನ್ನೇ ಬಹಳ ಕಾಲ ನೋಡುತ್ತಾ ನಿಂತುಬಿಟ್ಟ. ಅವನ ಮುಖದಲ್ಲಿ ಕಾತರದ ಭಾವ ಎದ್ದು ಕಾಣುತ್ತಿತ್ತು. ಅದನ್ನು ಮರೆಸುತ್ತಾ, ಲೀಲಾವತಿಯ ಜತೆಯಲ್ಲಿ ಅದೂ ಇದೂ ಮಾತನಾಡುತ್ತಾ, ಅವಳ ತಲೆನೋವನ್ನು ನೋಡುವ ನೆವದಲ್ಲಿ ಅವಳ ಹೃದಯದ ಬಡಿತವನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಅನಂತರ ಸುರೇಂದ್ರನ ಕೈಲಿ ಯಾವುಮೋ ಔಷಧ ಕೊಟ್ಟು ಕಳುಹಿಸಿದ.

ಲೀಲಾವತಿ ಸದ್ಯಕ್ಕೆ ಗೆದ್ದೆನೆನ್ನುವ ರೀತಿಯಲ್ಲಿ ಓಡಿಹೋಗಿ ಕಾರಿನಲ್ಲಿ ಕುಳಿತಳು. ಔಷಧಿ ತೆಗೆದುಕೊಂಡು ಬರಲು ಹಿಂದೆ ನಿಂತ ಸುರೇಂದ್ರನ ಕೈಗೆ ಸೋಮಶೇಖರ ಔಷಧದ ಶೀಷೆ ಕೊಡುತ್ತಾ

"ಸುರೇಂದ್ರ ನಿನಗೆ ಆಮೇಲಿನಿಂದ ಇಲ್ಲಿಗೆ ಬರಲು ಆಗುತ್ತ್ಯೆ?"

ಎಂದು ಹೇಳಿದ ಅನ್ಯಮನಸ್ಕನಾಗಿ.

“ ಏಕೆ ? ”

“ ನಿನ್ನ ಕೂಡ ಅರ್ಜೆಂಟಾಗಿ ಕೊಂಚ ಮಾತನಾಡುವುದು ಇದೆ.”

“ ಈಗಲೇ ಹೇಳಬಹುದಲ್ಲ ! ”

“ ನೀನು ನಿನ್ನ ಉಡ್ ಬಿ ನ ಮನೆಗೆ ಬಿಟ್ಟು ಬಿಟ್ಟು ಬಾ. ಆಮೇಲೆ ಹೇಳ್ತೀನೆ. ಅಲ್ಲಿ ತನಕ ಅವರು ಯಾಕೆ ಕಾಯಬೇಕು ? ”

ಸುರೇಂದ್ರ ಅದೇನು ಅರ್ಜೆಂಟು ಸುದ್ದಿ ಎಂದು ಆಲೋಚಿಸುತ್ತಾ, ಲೀಲಾವತಿಯನ್ನು ಅವಳ ಮನೆಗೆ ತಲುಪಿಸಿ, ಸೋಮಶೇಖರನನ್ನು ಕಂಡ.

ಸೋಮಶೇಖರ ಸುರೇಂದ್ರನನ್ನು ಬೇರೆಯಾಗಿ ಕರೆದು ನೇರವಾಗಿ ಪ್ರಶ್ನಿಸಿದ.

“ ಸುರೇಂದ್ರ ನಿಜ ಹೇಳು. ನೀನು ಲೀಲಾವತಿಯನ್ನು ಏಕೆ ಮದುವೆಯಾಗಲು ಹಠಹಿಡಿದಿರುವೆ ? ”

“ ಈ ಪ್ರಶ್ನೆಯನ್ನು ಕೇಳಲು ನೀನು ನನ್ನನ್ನು ಬರಹೇಳಿದೆಯಾ ? ” ಎಂದೆನ್ನುತ್ತಾ ಸುರೇಂದ್ರ ನಕ್ಕುಬಿಟ್ಟ.

“ ನಾನು ಹೀಗೆ ಕೇಳುತ್ತಿರುವುದು — ನಿನ್ನ ಸ್ನೇಹಿತನಾಗಿ ಅಲ್ಲ. ಡಾಕ್ಟರನಾಗಿ ಕೇಳುತ್ತಿದ್ದೇನೆ. ಅವಳನ್ನು ನೀನು ಯಾವ ಕಾರಣಕ್ಕಾಗಿ ಮದುವೆಯಾಗಬೇಕೆಂದಿರುವೆ ? ”

“ ನಿನ್ನ ಪ್ರಶ್ನೆ ವಿಚಿತ್ರವಾಗಿದೆ ಕಾಣಯ್ಯ.”

“ ಹೌದು ವಿಚಿತ್ರವಾಗಿದೆ; ನೀನು ಅವಳನ್ನು ಮದುವೆಯಾಗಲು ಆಸೆ ಪಡುತ್ತಿರುವುದು ಅವಳು ಹಣವಂತರ ಮಗಳೆಂದು ಅಲ್ಲ. ಇದು ನನಗೆ ಡೆಫನೆಟ್ ಆಗಿ ಗೊತ್ತಿದೆ. ಅವಳು ರೂಪವತಿ ಎಂದು ನೀನು ಮದುವೆಗೆ ಒಪ್ಪಿದ್ದರೆ ಅವಳ ಗುಣ ನಡತೆಗಳು ಹೇಗೆಂದು ವಿಚಾರಿಸಿ ಕೊಂಡಿದ್ದೀಯ ? ”

“ ಅವಳನ್ನೂ ಅವಳ ತಂದೆಯನ್ನೂ ನಾನು ಬಹಳ ವರ್ಷಗಳಿಂದ ಬಲ್ಲೆ ವಿ ಆರ್ ಓಲ್ಡ್ ಫ್ರೆಂಡ್ಸ್” (ನಾವು ಹಳೆಯ ಗೆಳೆಯರು)

“ ನೀವಿಬ್ಬರು ! ಹಳೆಯ ಗೆಳೆಯರು ನಿಮ್ಮ ಗೆಳೆತನವನ್ನು ಸಂಬಂಧ

ವಾಗಿ ಮಾರ್ಪಡಿಸಲು ಅವಳನ್ನು ಮದುವೆಯಾಗುವುದಾದರೆ ಇದಕ್ಕೆ ನನ್ನ ಆಕ್ಷೇಪಣೆ ಇಲ್ಲ. ಆದರೆ ನೀನು ಇನ್ನು ಯಾವುದಾದರೂ ಕಮಿಟ್‌ಮೆಂಟ್ (ನಿರ್ಬಂಧ) ಗೆ ಸಿಕ್ಕಿ ಲೀಲಾವತಿಯನ್ನು ಮದುವೆಯಾಗುತ್ತಿಲ್ಲ ತಾನೆ ?"

"ಹಾಗೆಂದರೆ ನನಗೆ ಅರ್ಥವಾಗುವುದಿಲ್ಲ."

"ನಾನು ಹೀಗೆ ಸ್ಪಷ್ಟವಾಗಿ ಹೇಳುವುದಕ್ಕೆ ಕ್ಷಮಿಸು, ನಿನ್ನ ಮನಸ್ಸನ್ನು ನೋಯಿಸಲು ನಾನು ಹೀಗೆ ಹೇಳುತ್ತಿಲ್ಲ—ನೀನು........ನೀನು."

"ಏನು ಹೇಳಬಾರದೆ........?"

"ನೀನು ಅನ್ಯಥಾ ತಿಳಿಯಬೇಡ........ನೀನು ಲೀಲಾವತಿಯೊಂದಿಗೆ ದೇಹಸಂಬಂಧವನ್ನು ಬೆಳೆಸಿದ್ದೆಯಾ ?"

ಈ ಮಾತು ಕೇಳಿ ಸುರೇಂದ್ರನ ಮುಖ ಬಿಳುಚಿಕೊಂಡಿತು.

"ಏಕೆ ?"

"ನಾನು ತಿಳಿಯಬೇಕಾಗಿದೆ. ಲೀಲಾವತಿಯನ್ನು ನೋಡಿದರೆ ಬಹುಶಃ ನಾಲ್ಕು ತಿಂಗಳ ಗರ್ಭಿಣಿಯಂತೆ ಕಾಣುತ್ತಾಳೆ...........ಅದಕ್ಕೇ ಕೇಳಿದೆ. ಅವಳ ಜತೆಯಲ್ಲಿ ಮದುವೆಗೆ ಮುಂಚಿನ ದೇಹದ ಸಲಿಗೆ ಇತ್ತೇ ಅಂತ".

ಈ ಮಾತು ಕೇಳಿ ಸುರೇಂದ್ರನಿಗೆ ತಲೆಯ ಮೇಲೆ ಮನೆಯ ಮೇಲ್ಛಾವಣಿ ಬಿದ್ದಂತೆ ಭಾಸವಾಯಿತು. ಅವನು ಮಾತಿಲ್ಲದೆ ದಿಗ್ಭ್ರಾಂತನಾಗಿ ಕುಳಿತುಬಿಟ್ಟ.

"ಯಾಕೆ ಹೀಗೆ ಕುಳಿತುಕೊಂಡೆ........ನಿಮ್ಮಿಬ್ಬರಲ್ಲಿ ತುಂಬಾ ಸ್ನೇಹ ಇದ್ದು ಅದು ದೇಹದ ಸಲಿಗೆಗೆ ಅವಕಾಶಕೊಟ್ಟಿದ್ದರೆ ಇದರಿಂದ ಬಾಧಕವಿಲ್ಲ. ಯಾಕೆಂದರೆ ನೀವು ಇಷ್ಟರಲ್ಲಿಯೇ ಮದುವೆಯಾಗಲಿರುವ ದಂಪತಿಗಳು. ಹಾಗೊಂದು ವೇಳೆ ಆಗದೆ............ಏನಾದರೂ ಮೋಸ ನಡೆದಿದ್ದರೆ ಎಂದು ಕೇಳಿದೆ ಅಷ್ಟೇ. ನೀನೇನೂ ತಿಳಿಯಬೇಡ ಸುರೇಂದ್ರ" ಎಂದು ಸಮಾಧಾನ ಪಡಿಸಿದ.

ಈ ಮಾತಿನಿಂದ ಸುರೇಂದ್ರನ ಹೃದಯಕ್ಕೆ ಸಾವಿರ ಮುಳ್ಳು ಚುಚ್ಚಿದಂತೆ ಆಯಿತು.

ಅವನು ನೋವಿನ ಧ್ವನಿಯಲ್ಲಿ ಹೇಳಿದ.

"ಸೋಮು, ನೀನು ನಿಜ ಹೇಳಿದರೂ ನಂಬುತ್ತಿ. ಸುಳ್ಳು ಹೇಳಿದರೂ ನಂಬುತ್ತಿ. ದೇವರ ಮೇಲೆ ಆಣೆ ಇಟ್ಟು ಹೇಳುತ್ತೇನೆ. ನನಗೆ ಈ ವಿಷಯುಗಳೊಂದೂ ತಿಳಿಯದು. ನೀನು ಹೇಳಿದ ಮೇಲೆ ಗೊತ್ತಾದ್ದು. ಲೀಲಾವತಿಯ ಬಳಿ ನನಗೆ ಸಲಿಗೆ ಇದ್ದರೂ ನಾನೆಂದಿಗೂ ದುಡಿಕಿಲ್ಲ."

"ಇದು ನಿಜವಾದರೆ ಈ ಮದುವೆಯಲ್ಲಿ ಏನೋ ಮೋಸವಿದೆ. ಲೀಲಾವತಿಯನ್ನು ನೋಡಿದರೆ ಗರ್ಭಿಣಿಯಂತೆ ಇದ್ದಾಳೆ; ಈ ವಿಷಯವನ್ನು ನಾನು ಅವಳ ಮುಖ ನೋಡುತ್ತಲೇ ತಿಳಿದುಕೊಂಡೆ, ನಾನು ತಿಳಿದುದು ತಪ್ಪೋ ಸರಿಯೋ ಎಂದು ಖಚಿತಪಡಿಸಿಕೊಳ್ಳಲು ಅವಳ ಹೃದಯದ ಬಡಿತವನ್ನು ಪರಿಶೀಲಿಸಿದೆ. ಇವುಗಳಿಂದ ಹೇಳುವುದಾದರೆ ಷಿ ಈಸ್ ಕ್ಯಾರಿಯಿಂಗ್ ತ್ರೀ ಮಂತ್ಸ್ ಆರ್ ಸೋ........ಬೆಟರ್ ಎನ್‌ಕ್ವೈರ್ ಹರ್ ಪರ್ಸನಲಿ ಅಂಡ್ ಅಸರ್‌ಟೈನ್ ಇಟ್ ಬಿಫೋರ್ ಯು ಮ್ಯಾರಿ ಹರ್. (ಅವಳನ್ನು ನೋಡಿದರೆ ಮೂರು ನಾಲ್ಕು ತಿಂಗಳ ಗರ್ಭಿಣಿಯಂತೆ ಕಾಣುತ್ತಾಳೆ. ಅವಳನ್ನು ನೀನು ಈ ವಿಷಯ ಕೇಳಿ ಯಾವುದನ್ನೂ ಖಚಿತಪಡಿಸಿಕೊಂಡು ಅನಂತರ ಮದುವೆ ಪ್ರಯತ್ನ ಮಾಡು). ದಿಸ್ ಈಸ್ ಮೈ ಸಿನ್‌ಸಿಯರ್ ಆಡ್ವೈಸ್ (ಇದೇ ನನ್ನ ಸಲಹೆ)"ಎಂದು ಹೇಳಿದ.

"ಹಾಗಾದರೆ ಲೀಲಾವತಿ ನನಗೆ ಮೋಸಮಾಡುತ್ತಿದ್ದಾಳೆಯೆ?"

"ಯಾರಿಗೆ ಗೊತ್ತು!"

"ಅವಳು ಕ್ಲಬ್ಬಿನಲ್ಲೇ ಆಗಲಿ ಬೇರೆಡೆಯಲ್ಲೇ ಆಗಲಿ—ನನ್ನ ಹೊರತು ಬೇರೆ ಯಾರನ್ನೂ ವಿಶೇಷವಾಗಿ ಹಚ್ಚಿಕೊಳ್ಳುವುದಿಲ್ಲ. ಅವಳ ತಂದೆ ಯಾವಾಗಲೂ ಅವಳ ಜತೆಯಲ್ಲಿ ಇರುತ್ತಾರೆ. ಹೀಗಿದ್ದೂ ಅವಳು ಕ್ಯಾರಿಯಿಂಗ್ ಅಂದರೆ ಆಶ್ಚರ್ಯವಾಗಿದೆ...."

"ನಂಗೂ ಇದು ಆಶ್ಚರ್ಯವಾಗಿಯೇ ನಿನ್ನನ್ನು ಕೇಳಿದ್ದು?"

"ನಂಗೆ ಇದೊಂದೂ ತಿಳಿಯದು. ಏನು ನಡೆದಿದೆಯೋ ಆ ದೇವರಿಗೇ ಗೊತ್ತು!"

"ಹೋಗಲಿ ಮುಂದೇನು ಮಾಡಬೇಕೆಂದಿದ್ದಿ?"

" ಏನು ಮಾಡಬೇಕೆಂಬುದೇ ಹೊಳೆಯುತ್ತಿಲ್ಲ. ಹೋಗಿ ಅವಳನ್ನು ಈ ವಿಷಯ ಡೈರೆಕ್ಟ್ ಆಗಿ ಕೇಳಿ ಬಿಡಲೆ? ಅಂತ ಆಲೋಚಿಸುತ್ತಿದ್ದೇನೆ."

" ಬೇಡ ಹಾಗೆ ಮಾಡಿದರೆ ನಿನ್ನ ಮಾನವೂ ಹೋಗುತ್ತೆ, ಅನಾಹುತವೂ ಆಗುತ್ತೆ. ಇದನ್ನು ಡಿಪ್ಲೊಮ್ಯಾಟಿಕ್ ಆಗಿ ' ಸಾಲ್ವ್' ಮಾಡಬೇಕು. ನೀನು ನಾನು ಹೇಳಿದ ಹಾಗೆ ಮಾಡು, ಎಲ್ಲ ಸರಿಹೋಗುತ್ತೆ."

" ನೀನು ವಿಶ್ವನಾಥರಾಯರಿಗೆ ' ನಿಮ್ಮ ಮಗಳನ್ನು ಸದ್ಯಕ್ಕೆ ಮದುವೆಯಾಗಲು ಸಾಧ್ಯವಿಲ್ಲವಾಗಿದೆ. ಈ ಬಗ್ಗೆ ನಿಮ್ಮ ಮಗಳನ್ನು ಕೇಳಿದರೆ ಹೆಚ್ಚಿನ ಸಂಗತಿ ತಿಳಿಯುವುದು ' ಎಂದು ಬರೆದು ಕೊಡು. ನಾನು ಹೋಗಿ ಈ ವಿಷಯ ನಿಜವೇ ಸುಳ್ಳೆ ಎಂಬುದು ತಿಳಿದುಕೊಂಡು ಬರುತ್ತೇನೆ."

" ಅವಳು ಕ್ಯಾರಿಯಿಂಗ್ ಅನ್ನೋದು ನಿಜವಾದರೆ?"

" ದಟ್ ಈಸ್ ಲೆಫ್ಟ್ ಟು ಯುವರ್ ಚಾಯಿಸ್. (ಅದು ನಿನಗೆ ಸಂಬಂಧಿಸಿದ ವಿಷಯ) ಅವಳನ್ನೇ ನೀನು ಮದುವೆಯಾಗಲು ಒಪ್ಪಿದರೆ, ಸಂತೋಷವಾಗಿ ಆಗು. ಆದರೆ ನನ್ನ ಅಭಿಪ್ರಾಯ ಹೇಳುವುದಾದರೆ— ನಾನು ನಿಮ್ಮ ಫ್ಯಾಮಿಲಿ ಫ್ರೆಂಡ್ ಆಗಿರುವುದರಿಂದ ಈ ಮದುವೆ ಬೇಡ. ಅಂತಲೇ ಹೇಳುತ್ತೇನೆ. ನಿನಗೆ ಈ ಹುಡುಗಿಯೇ ಅನ್ನೋದೇನು ಈ ಹುಡುಗಿಗಿಂತಲೂ ಚೆನ್ನಾಗಿರೋ ಹುಡುಗಿಯರೇ ಸಿಕ್ಕುತ್ತಾರೆ—ನೀನು ಮದುವೆಗೆ ಹುಂ ಅಂದರೆ."

" ಆದರೆ ಲಗ್ನಪತ್ರಿಕೆಯನ್ನು ಎಲ್ಲರಿಗೂ ಕಳುಹಿಸಿಕೊಟ್ಟುಬಿಟ್ಟಿದ್ದೇವಲ್ಲ?"

" ಕಳುಹಿಸಿಕೊಟ್ಟರೆ ಏನಂತೆ. ಇನ್ನೂ ನಾಲ್ಕು ದಿನವಿದೆ. ಎಲ್ಲರಿಗೂ ಮದುವೆ ಸದ್ಯಕ್ಕೆ ನಿಂತುಹೋಯಿತೆಂದು ಬರೆದು ಪೋಸ್ಟ್ ಮಾಡಿದರಾಯಿತು. ಬೇಕಾದರೆ ಈ ಕೆಲಸ ನನಗೆ ಹೇಳು. ನಾನು ಮಾಡಿಕೊಡುತ್ತೇನೆ. ನನಗೆ ಬೇಕಾದ್ದು ನಿನ್ನ ಸುಖ ನಿಮ್ಮ ಮನೆತನದ ಕೀರ್ತಿ ಉಳಿಯಬೇಕು."

ಸುರೇಂದ್ರ ಸೋಮಶೇಖರನು ಹೇಳಿದ ವಿಷಯಗಳಿಂದ ಬಿಡಿಸಲಾಗದ ಸಮಸ್ಯೆಗೆ ಬಿದ್ದ. ಅವನು ಆಲೋಚಿಸಿ ಇವನ್ನುಯಾವ ರೀತಿಯಿಂದಲೂ ಬಿಡಿಸಲಾರದೆ ನೇರ ಮನೆಗೆ ಹೋಗಿ ತಾಯಿಯ ಕೂಡ ಈ ವಿಷಯವನ್ನು

ಆಲೋಚಿಸಿ, ಕಡೆಗೆ ಸೋಮಶೇಖರ ಹೇಳಿದ್ದಂತೆ ವಿಶ್ವನಾಥರಾಯರಿಗೆ ಪತ್ರ ಬರೆದು ಕೊಟ್ಟ.

ಸೋಮಶೇಖರ ಈ ಪತ್ರವನ್ನು ವಿಶ್ವನಾಥರಾಯರಿಗೆ ತಲುಪಿಸಿ, ಅವರ ಪ್ರತಿಕ್ರಿಯೆಗಾಗಿ ಎದುರುನೋಡಿದ.

ವಿಶ್ವನಾಥರಾಯರು ಕಣ್ಣಿಗೆ ಸುಲೋಚನ ಹಾಕಿ ಕಾಗದ ಓದಿಕೊಂಡರು. ಅವರಿಗೆ ವಿಷಯವೇನೆಂದು ಗ್ರಹಿಸಲು ಬಹಳ ಹೊತ್ತು ಬೇಕಾಯಿತು. ಅವರು ಲೀಲಾವತಿಯನ್ನು ಕೂಗಿ ಕರೆದರು. ಲೀಲಾವತಿ ತಂದೆಯ ಬಳಿಗೆ ಬಂದು ಅವರ ಕೈಲಿದ್ದ ಕಾಗದವನ್ನು ತೆಗೆದುಕೊಂಡು ಓದಿದಳು. ಅದರಲ್ಲಿ ಇದ್ದ ನಾಲ್ಕು ಪಂಕ್ತಿ ಓದಿದೊಡನೆಯೇ ಅವಳು ಹಾಗೆಯೇ ಕುಸಿದು ಬಿದ್ದಳು. ಅನಂತರ ತಂದೆಯ ಮುಖವನ್ನೊಮ್ಮೆ ತನ್ನನ್ನೊಮ್ಮೆ ನೋಡಿಕೊಂಡು ಗೊಳೋ ಎಂದು ಅಳತೊಡಗಿದಳು.

ಮಗಳಿಂದ ವಿಶ್ವನಾಥರಾಯರು ಎಲ್ಲ ಕಥೆಯನ್ನು ಕೇಳಿ ಮರುಗಿದರು. ಮಗಳು ಮಾಡಿದ ಕೆಲಸದಿಂದ ಅವರ ಹೊಂಗನಸೆಲ್ಲವೂ ಮಣ್ಣುಗೂಡಿದಂತೆ ಆಗಿದ್ದರೂ ಮಗಳ ಮೇಲೆ ಅವರು ಸಿಟ್ಟುಮಾಡಲಿಲ್ಲ. ಲೀಲಾವತಿ ತನಗಾಗಿ, ತನ್ನ ಸುಖಕ್ಕಾಗಿ ಬಲಿದಾನ ಮಾಡಿದ ಪುಣ್ಯಾತ್ಮಳಾಗಿ ಅವರಿಗೆ ಕಾಣಿಸಿದಳು. ಹಾಸಿಗೆ ಹಿಡಿದು ಬಿಟ್ಟಿದ್ದ ತಮ್ಮನ್ನು ಬಿಟ್ಟು ಬೆಂಗಳೂರಿಗೆ ಹೋಗಲಾರದೆ, ತನ್ನ ವರ್ಗವನ್ನು ರದ್ದುಗೊಳಿಸಲು ಹೋಗಿ ಲೀಲಾವತಿ ಕಪನೀಪತಿರಾಯರ ಮೋಸಕ್ಕೆ ಸಿಕ್ಕಿ ತನ್ನ ಸರ್ವಸ್ವವನ್ನೂ ಸೂರೆಗೊಡಬೇಕಾಯಿತೆಂದು ಬಗೆದರು. ಇಷ್ಟೆಲ್ಲ ನಡೆಯಲು ಪರೋಕ್ಷವಾಗಿ ಕಾರಣರಾದ ತಮ್ಮನ್ನೇ ಅವರು ಹಳಿದುಕೊಂಡರು. ಏನು ಹಳಿದರೇನು? ಆಗಬಾರದ ಅಚಾತುರ್ಯ ಆಗಿಹೋಗಿತ್ತು. ಅದನ್ನು ಕುರಿತು ಚಿಂತಿಸುವುದಕ್ಕಿಂತ ಅದನ್ನು ಹೇಗಾದರೂ ಸರಿಪಡಿಸುವ ಪ್ರಯತ್ನ ಮಾಡಬೇಕು. ಇನ್ನು ಸುರೇಂದ್ರನೊಡನೆ ಲೀಲಾವತಿಯ ಮದುವೆ ನಿಂತುಹೋದಂತೆಯೇ ಸರಿ. ತಾಯಿಯಾಗಲಿರುವ ಲೀಲಾವತಿಯನ್ನು ನವವಧುವೆಂದು ಪರಿಗ್ರಹಿಸಲು ಅವನ ಮನವಾದರೂ ಹೇಗೆ ಒಪ್ಪೀತು? ಈ ಕೆಲಸಕ್ಕೆ ಅವನ ಮನೆಯವರಾದರೂ ಹೇಗೆ ಒಪ್ಪಿಯಾರು? ಅವನ ಆಸೆಯನ್ನು ಬಿಟ್ಟಂತೆಯೇ ಸರಿ. ಆದರೆ ಲೀಲಾವತಿ ಸುರೇಂದ್ರರ ವಿವಾಹ ಮಹೋತ್ಸವದ ಲಗ್ನಪತ್ರಿಕೆಯನ್ನು ಎಲ್ಲೆಡೆಗೂ ಕಳುಹಿಸಲಾಗಿತ್ತು. ಅವರಿಗೆಲ್ಲ ಮದುವೆ ನಿಂತುಹೋಯಿತೆಂದು ತಿಳಿಸುವುದು ಹಾಸ್ಯಾಸ್ಪದವೆನಿಸಿತು. ಅಷ್ಟು ಮಾತ್ರವಲ್ಲ. ಏಕೆ ನಿಂತಿತೆಂದು ತಿಳಿಯುವ ಕುತೂಹಲದಲ್ಲಿ ವಾಸ್ತವಾಂಶ ಹೊರಬಿದ್ದು ತಮಗೆ ಅದು ಎಂದೆಂದಿಗೂ ಅಳಿಸಲಾಗದ ಕಲಂಕವಾಗುವುದೆಂದು ವಿಶ್ವನಾಥರಾಯರು ಹೆದರಿದರು. ಅವರಿಗೆ ಈ ಹೊತ್ತಿನಲ್ಲಿ ಏನು ಮಾಡುವುದೆಂದು ಹೊಳೆಯದೆ ಶತಪಥ ತಿರುಗಿದರು. ಕಡೆಗೆ ಯಾವುದನ್ನೂ ನಿರ್ಣಯಿಸಲಾರದೆ ಸುಮಿತ್ರ ಸದಾಶಿವರನ್ನು ತುರ್ತಾಗಿ ಬರಮಾಡಿಕೊಂಡರು. ಅವರನ್ನು ತಮ್ಮ ಅಂತರಂಗಕ್ಕೆ ತೆಗೆದುಕೊಂಡು ಅವರಿಗೆ

ನಡೆದಿರುವ ಎಲ್ಲ ಕಥೆಯನ್ನೂ ಸುವಿಸ್ತಾರವಾಗಿ ಹೇಳಿ ಈ ವಿಷಯದಲ್ಲಿ ಪ್ರಾಜ್ಞರಾದ ಸುಮಿತ್ರೆ ತಮಗೆ ದಾರಿ ತೋರಿಸಿ ತಮ್ಮ ಮಾನವನ್ನು ಉಳಿಸಿಕೊಡಬೇಕೆಂದು ಪ್ರಾರ್ಥಿಸಿದರು.

ಸುಮಿತ್ರೆ ವಿಶ್ವನಾಥರಾಯರ ಬಾಯಿಂದ ಬಂದ ಲೀಲಾವತಿಯ ಕರುಣ ಕಥೆಯನ್ನು ಕೇಳಿ ಸಿಟ್ಟುಮಾಡುವ ಬದಲು ಅವಳಿಗಾಗಿ ಮರುಗಿದಳು. ಹಾಳು ವರ್ಗದ ಸಲುವಾಗಿ ಲೀಲಾವತಿ ಬಗೆಗೆಟ್ಟು ಎಂತಹ ಕೆಲಸಕ್ಕೆ ಒಪ್ಪಿದಳು, ಎಂಬುದನ್ನು ನೆನೆದಾಗ ಮೈನಿಮಿರಿತು–ತಂದೆಗಾಗಿ ಇಷ್ಟೆಲ್ಲ ಮಾಡಬೇಕಾಗಿ ಬಂದಿತೆಂಬ ಸಂಗತಿ ತಿಳಿದಾಗ ಅನುಕಂಪ ಮೂಡಿತು. ಲೀಲಾವತಿ ಎಲ್ಲರಂತೆ ಅಲ್ಲ. ಬೆಳೆದ ಹುಡುಗಿ, ವಿದ್ಯಾವತಿ. ಅವಳಿಗೆ ಕಾಮದ ವಿಷಯದಲ್ಲಿ ವಿಚಿತ್ರ ಕಲ್ಪನೆಗಳನ್ನು ಕಂಡು ಅವಳು ಇಂದಲ್ಲ ನಾಳೆ ಕಾಮದ ಕಾವಿನಿಂದ ಕಮರಿ ಹೋಗುವವಳೇ ಎಂದು ತಿಳಿದಿದ್ದ ಸುಮಿತ್ರೆ ವಿಶ್ವನಾಥರಾಯರೊಂದಿಗೆ ಲೀಲಾವತಿಯ ಮದುವೆಯ ಪ್ರಸ್ತಾಪವನ್ನು ಹಲವು ಬಾರಿ ಮಾಡಿದ್ದಳು. ಆದರೆ ಯಾವುದಕ್ಕೂ ಕಾಲ ಕೂಡಿಬಂದಿರಲಿಲ್ಲ. ಲೀಲಾವತಿಯ ಮದುವೆ ನಿಶ್ಚಯವಾಗಿ ಅವಳ ಲಗ್ನದ ಸುದ್ದಿಯನ್ನು ಹೊತ್ತ ಲಗ್ನಪತ್ರಿಕೆ ಎಲ್ಲೆಡೆಯಲ್ಲಿಯೂ ಹಂಚಲ್ಪಟ್ಟಿದ್ದರೂ ಅವಳು ಮನ್ಮಥನ ಶಾಪದಿಂದಲೆಂಬಂತೆ ಎಂದೆಂದಿಗೂ ಕುಮಾರಿಯಾಗಿಯೇ ಉಳಿಯುವ ವಿಚಿತ್ರ ಸಂದರ್ಭ ಬಂದಿತ್ತು. ಕಾಮ ಪ್ರೇಮಗಳ ಬಗ್ಗೆ ಸಲ್ಲದ ಕಲ್ಪನೆಯನ್ನು ತಲೆಯಲ್ಲಿ ತುಂಬಿಕೊಂಡಿದ್ದ ಲೀಲಾವತಿಗೆ ಕಾಮದ ಕಾವು ತಟ್ಟಿತ್ತು. ಇದರಿಂದ ಅವನ ಬಾಳಿನ ಬಳ್ಳಿ ಕಮರಿಹೋಗುವ ಸ್ಥಿತಿ ಬಂದಿತ್ತು. ಇದರಿಂದ ಪಾರಾಗುವ ದಾರಿ ಎಂತು ?

ಸುಮಿತ್ರೆ ಸದಾಶಿವ ಬಹುವಾಗಿ ಆಲೋಚಿಸಿದರು. ಲೀಲಾವತಿಯು ಹೊತ್ತಿದ್ದ ತಾಯಿತನದ ಹೊರೆಯಿಂದ ಅವಳ ಬಂಧವಿಮೋಚನೆಯಾಗುವ ತನಕ ಮದುವೆಯ ಪ್ರಯತ್ನ ನಿಲ್ಲಿಸಬೇಕೆಂದೂ ಅಭಿಪ್ರಾಯಪಟ್ಟರು. ಆದರೆ ವಿಶ್ವನಾಥರಾಯರು ನಿಶ್ಚಯಿಸಿದ್ದ ಲಗ್ನ ನಿಂತುಹೋದರೆ ಇದರಿಂದ ಸಲ್ಲದ ಮಾತಿಗೆ ಎಡೆ ಕೊಟ್ಟಂತಾಗುವುದೆಂದೂ, ಏನಾದರೂ ಅದೇ ಲಗ್ನದಲ್ಲಿ ಲೀಲಾವತಿಯ ವಿವಾಹವನ್ನು ಮಾಡಿಯೇ ತೀರಬೇಕೆಂದರು. ಆದರೆ

ತಾಯಿಯಾಗಿರುವ ಲೀಲಾವತಿಯನ್ನು ಕೈಹಿಡಿಯುವವರು ಯಾರು!? ಲೀಲಾವತಿ ಮೊದಲಿನಂತೆ ಇದ್ದಿದ್ದರೆ ಅವಳನ್ನು ಕೈ ಹಿಡಿಯಲು ನಾನು ತಾನೆಂದು ಗಂಡುಗಳು ಬರುತ್ತಿದ್ದರು. ಆದರೆ ಲೀಲಾವತಿ ಹೀಗೆ ಇರುವಾಗ? ಲೀಲಾವತಿಯ ತಾಯಿತನದ ಹೊರೆಯನ್ನು ಕೆಳಗಿಳಿಸುವುದು ಪ್ರಥಮ ಕರ್ತವ್ಯವಾಗಿ ತೋರಿತು. ವಿಶ್ವನಾಥರಾಯರೂ ಲೀಲಾವತಿಯೂ ಸಮಾಜದಲ್ಲಿ ತಲೆ ಎತ್ತಿ ತಿರುಗಬೇಕಾದರೆ ಈ ಸುದ್ದಿ ಕರ್ಣಾಕರ್ಣಿತವಾಗಿ ಹರಡುವುದಕ್ಕಿಂತ ಮುಂಚೆ ಬಂದಿದ್ದ ಕುತ್ತದಿಂದ ಪಾರಾಗಬೇಕು. ಇದಕ್ಕೆ ಇದ್ದ ದಾರಿ ಎರಡು, ಒಂದು ಲೀಲಾವತಿಯ ಗರ್ಭಪಾತ. ಇನ್ನೊಂದು ಲೀಲಾವತಿ ಬೇರೆಲ್ಲಿಗಾದರೂ ಹೋಗಿ ತಾಯಿತನದ ಅವಧಿ ಪೂರೈಸುವ ತನಕ ಇದ್ದು ಅನಂತರ ತಂದೆಯ ಮನೆಗೆ ಹಿಂದಿರುವುದು. ಇದರಲ್ಲಿ ಸುರಕ್ಷಿತವಾದ ದಾರಿ ಎಂದರೆ ಲೀಲಾವತಿ ಬೇರೆ ಎಲ್ಲಾದರೂ ಆರೇಳು ತಿಂಗಳು ಇದ್ದು ಬರುವುದು. ಇದು ಸುಮಿತ್ರೆ ಸದಾಶಿವರಿಗೆ ಒಪ್ಪಿಗೆಯಾದರೂ ವಿಶ್ವನಾಥರಾಯರಿಗೆ ಮಗಳನ್ನು ಆ ಸ್ಥಿತಿಯಲ್ಲಿ ಬಿಟ್ಟಿರಲು ಆಗದೆ ಯಾವುದೊಂದು ನಿರ್ಣಯಕ್ಕೂ ಬರದೆ ಹೋದರು. ಎಲ್ಲರ ಅಭಿಪ್ರಾಯದಲ್ಲಿ ಲೀಲಾವತಿಯ ತಾಯಿತನದ ಹೊರೆಯನ್ನು ಕೃತಕ ರೀತಿಯಲ್ಲಿ ಅಕಾಲವಾಗಿ ಪರಿಹರಿಸುವುದು ಪಾಪವೆನಿಸಿದ್ದು ಮಾತ್ರವೇ ಅಲ್ಲ, ಇದರಿಂದ ಲೀಲಾವತಿಗೂ ತನ್ನ ದೇಹದ ಮೇಲೆ ಎಷ್ಟು ಹೆಮ್ಮೆ ಇತ್ತೆಂದರೆ ಅದಕ್ಕೆ ಕೊಂಚವಾದರೂ ಕೆಡಕು ಉಂಟುಮಾಡಲು ಅವಳು ಸಿದ್ಧವಿರಲಿಲ್ಲ. ಅವಳು ಹಾಗೆಯೇ ಸಹಜವಾಗಿದ್ದು ತನ್ನ ಮೈ ಕಳೆದುಕೊಳ್ಳಲು ಸಿದ್ಧಳಿದ್ದಳೇ ಹೊರತು ತನ್ನ ಸುಂದರ ದೇಹಕ್ಕೆ ಶಸ್ತ್ರ ಚಿಕಿತ್ಸೆಯಿಂದ ಅಪಘಾತ ಮಾಡಿಕೊಳ್ಳಲು ಸಿದ್ಧವಿರಲಿಲ್ಲ. ಅವಳ ಅಭಿಪ್ರಾಯವನ್ನು ತಿಳಿದಿದ್ದ ಸುಮಿತ್ರೆ ಈ ಬಗ್ಗೆ ಅವಳನ್ನು ಬಲವಂತಪಡಿಸಲಿಲ್ಲ. ಅವರೆಲ್ಲರೂ ಲೀಲಾವತಿ ಸಹಜವಾಗಿ ಮೈ ಕಳೆದುಕೊಳ್ಳುವುದೇ ಶ್ರೇಯಸ್ಕರವೆಂದು ತೀರ್ಸಿತ್ತರು. ಆದರೆ ಲೀಲಾವತಿ ಮೊದಲಿನಂತೆ ಆಗಲು ಆರೆಂಟು ತಿಂಗಳ ಕಡ್ಡಾಯದ ವಿಶ್ರಾಂತಿ ಅಜ್ಞಾತವಾಸ ಆವಶ್ಯಕವಾಗಿತ್ತು. ಈ ಅವಧಿಯಲ್ಲಿ ಲೀಲಾವತಿಯನ್ನು ಎಲ್ಲಿ ಬಿಡುವುದು?

ವಿಶ್ವನಾಥರಾಯರು ಖಂಡಿತವಾಗಿ ಹೇಳಿಯೇ ಬಿಟ್ಟರು. ತಮಗೆ ಮಾನ ಪ್ರಾಣಗಳಿಗಿಂತ ಮಗಳು ಹೆಚ್ಚು. ಅವಳನ್ನು ಅಗಲಿ ತಾವು ಇರಲು ಸಾಧ್ಯವೇ ಇಲ್ಲವೆಂದು ತಿಳಿಸಿಬಿಟ್ಟರು. "ಲೀಲಾವತಿ ಒಮ್ಮೆ ಅವಿವೇಕಿಯಾಗಿ ಇಷ್ಟೆಲ್ಲ ಅನರ್ಥ ಮಾಡಿಕೊಂಡಂತೆ ಮತ್ತೆ ಅವಿವೇಕಿಯಾಗಿ ತನ್ನ ಪ್ರಾಣಕ್ಕೆ ಸಂಚುಕಾರ ತಂದುಕೊಂಡು ಬಿಟ್ಟರೆ ಗತಿ ?" ಎಂಬ ಹೆದರಿಕೆ ವಿಶ್ವನಾಥರಾಯರನ್ನು ಭಾದಿಸುತ್ತಿತ್ತು. ಲೀಲಾವತಿಯ ಸದ್ಯದ ಮನಃಸ್ಥಿತಿಯಲ್ಲಿ ಅವಳು ಏನು ಮಾಡುವಳು, ಏನು ಬಿಡುವಳು ಎಂದು ಹೇಳುವುದೇ ಕಷ್ಟವಾಗಿತ್ತು. ಎಲ್ಲರ ಭಾಗಕ್ಕೆ ಲೀಲಾವತಿ ಸಮಸ್ಯೆಯಾಗಿದ್ದಂತೆ ವಿಶ್ವನಾಥರಾಯರ ಪಾಲಿಗೂ ಅರ್ಥಮಾಡಿಕೊಳ್ಳಲಾಗದ ವ್ಯಕ್ತಿಯಾಗಿದ್ದಳು. ಅವರು ಲೀಲಾವತಿಯನ್ನು ಕ್ಷಣಕಾಲೂ ಬಿಟ್ಟಿರಲು ಒಪ್ಪಲಿಲ್ಲ. ಹೀಗೆ ಲೀಲಾವತಿಯ ವಿಷಯ ಏನೊಂದೂ ನಿರ್ಧರವಾಗದೆ ಇದ್ದಾಗ ಸುಮಿತ್ರೆಗೆ ಒಂದು ಆಲೋಚನೆ ಹೊಳೆಯಿತು. ಲೀಲಾವತಿ ಹೇಗೂ ಕಪನೀಪತಿರಾಯರೊಂದಿಗೆ ದೇಹಸಂಬಂಧ ಬೆಳೆಸಿದ್ದಾಳೆ. ಅವಳೇಕೆ ಕಪನೀಪತಿರಾಯರನ್ನೇ ಮದುವೆಯಾಗಬಾರದು.

ಇದು ಎಲ್ಲರಿಗೂ ಸೂಕ್ತ ಸಲಹೆಯಾಗಿ ಕಂಡಿತು. ಕಪನೀಪತಿರಾಯರು ಕಾಲೇಜಿನಲ್ಲಿ ಪ್ರೊಫೆಸರ್. ಭಾರತಾದ್ಯಂತ ಆತನ ಕೀರ್ತಿ ಹರಡಿತ್ತು. ವಯಸ್ಸು ಸುಮಾರು ನಲವತ್ತೈದರ ಪ್ರಾಯ. ಬಂಗಲೆಯಂತಹ ಮನೆ. ಕೈತುಂಬಾ ಸಂಬಳ. ಅವರನ್ನು ಪ್ರತ್ಯಕ್ಷವಾಗಿ ಅಲ್ಲದಿದ್ದರೂ ಪರೋಕ್ಷವಾಗಿ ಲೀಲಾವತಿ ಒಪ್ಪಿದ್ದಾಳೆಂದೇ ಅವರಿಗೆ ತನ್ನ ಸರ್ವಸ್ವವನ್ನೂ ಬಲಿಗೊಡಲು ಹಿಂದು ಮುಂದೆ ತಿಳಿಯದೆ ಇದ್ದುದು. ವಿಷಯ ಹೀಗಿರುವಾಗ ಅವರಿಗೆ ಲೀಲಾವತಿಯನ್ನು ಕೊಡಬಾರದೇಕೆ?

ಈ ಸಲಹೆ ಎಲ್ಲರಿಗೂ ಯೋಗ್ಯವಾಗಿ ತೋರಿತು. ಎಲ್ಲರಿಗಿಂತ ವಿಶ್ವನಾಥರಾಯರಿಗೆ ತುಂಬಾ ಪ್ರಿಯವಾಗಿ ತೋರಿತು. ಅವರು ಈ ಮದುವೆ ಸಾಧ್ಯವಾಗುವುದಾದರೆ ತಾವು ಭಾಗ್ಯವಂತರೇ ಸರಿ ಎಂದು ಭಾವಿಸಿದರು. ಆದರೆ ಇದಕ್ಕೆ ಕಪನೀಪತಿರಾಯರು ಒಪ್ಪಬೇಕಲ್ಲ. ಅವರನ್ನು ಒಪ್ಪಿಸುವ ಭಾರ ತನಗೆ ಇರಲೆಂದು ಸದಾಶಿವ ಆಶ್ವಾಸನ ಕೊಟ್ಟ. ಈ

ಪ್ರಯತ್ನದಲ್ಲಿ ಲೀಲಾವತಿ ಅಡ್ಡ ಬರದೆ ಇದ್ದರೆ ಸರಿ! ಲೀಲಾವತಿಗೆ ತನ್ನ ಮದುವೆ ಹಠಾತ್ತನೆ ನಿಂತು ಹೋದ ಮೇಲೆ ಅವಳಿಗೆ ಏನು ಮಾಡಲೂ ತೋಚದೆ ಅಳುತ್ತ ಕೋಣೆ ಹಿಡಿದು ಕುಳಿತವಳು ಹೊರಗೆ ಬರಲಿಲ್ಲ. ಅವಳಿಗೆ ಇದುತನಕ ಗೋಪ್ಯವಾಗಿರಿಸಿದ್ದ ವಿಷಯ ಬಯಲಾಯಿತಲ್ಲ ಎನ್ನುವುದಕ್ಕಿಂತ, ಸುಮಿತ್ರೆ ಸದಾಶಿವರಿಗೆ ಈ ಸಂಗತಿಗಳು ತಿಳಿದುಹೋಯಿತಲ್ಲ—ಅವರಿಗೆ ತನ್ನ ವಿಷಯದಲ್ಲಿ ತಿರಸ್ಕಾರ ಉಂಟಾಯಿತಲ್ಲ ಎಂಬ ಅವಮಾನವೇ ಹೆಚ್ಚಿನ ದುಃಖವನ್ನು ಉಂಟುಮಾಡಿತ್ತು. ಆ ದಿನ ಸದಾಶಿವನಿಂದ ಪರಾಜಿತಳಾದಾಗ ಸದಾಶಿವ ಅವಳಿಗೆ ಹೇಳಿದ್ದ ಬುದ್ಧಿಯ ಮಾತು ಅವಳ ಸ್ಮರಣೆಯಲ್ಲಿ ಇನ್ನೂ ಇತ್ತು. ಆ ಕ್ಷಣದಲ್ಲಿ ಸದಾಶಿವ ಅವಳ ಭಾಗಕ್ಕೆ ಹೇಡಿಯಂತೆ ಕಾಣಿಸಿದ್ದರೂ—ಒಲಿದು ಬಂದ ಹೆಣ್ಣಿನ ಬಳಿಯಲ್ಲಿ ಅವನು ತೋರಿಸಿದ ಸಂಯಮ ಅಪೂರ್ವ ರೀತಿಯದೆಂದೂ ಅವನು ಸಾಮಾನ್ಯ ಮನುಷ್ಯನಲ್ಲವೆಂಬ ಭಾವನೆ ಅವಳಲ್ಲಿ ಉಂಟಾಗಿ ಅವನ ಬಗ್ಗೆ ಒಂದು ಬಗೆಯ ಪೂಜ್ಯಭಾವನೆ ಉಂಟಾಗಿತ್ತು. ಅವನ ಉಪದೇಶವನ್ನು ತಾನು ಗಣನೆಗೆ ತರದೆ ಮತ್ತೆ ಅಡ್ಡದಾರಿ ಹಿಡಿದು ನೈತಿಕ ಪತನ ಹೊಂದಿದುದು ಅವನಿಗೆ ತಿಳಿದರೆ ಅವನ ದೃಷ್ಟಿಯಲ್ಲಿ ತಾನು ಎಷ್ಟು ಕೀಳಾಗಿಬಿಡುವೆ ಎಂಬುದನ್ನು ಆಲೋಚಿಸಿ ಸದಾಶಿವ ಸುಮಿತ್ರೆಯರಿಗೆ ತಲೆ ತೋರಿಸಲು ಹೇನಾಯವಾಗಿತ್ತು. ಆದರೆ ಅವರು ತನ್ನ ವಿಷಯದಲ್ಲಿ ತಿರಸ್ಕಾರ ವ್ಯಕ್ತಪಡಿಸುವ ಬದಲು ಸಹಾನುಭೂತಿ ವ್ಯಕ್ತಪಡಿಸಿದ ಮೇಲೆ ಅವರ ಬಗ್ಗೆ ಅವಳಿಗೆ ಅಭಿಮಾನ ಮೂಡಿತು. ಅವರು ತನ್ನ ಅಭ್ಯುದಯದ ದೃಷ್ಟಿಯಲ್ಲಿ ಕೈಗೊಳ್ಳುವ ಎಲ್ಲ ಕೆಲಸದಲ್ಲಿ ತನ್ನ ಸಹಕಾರ ಕೊಡುವುದು ತನ್ನ ಪ್ರಥಮ ಕರ್ತವ್ಯವೆಂದು ತಿಳಿದಳು. ಅಂತಲೇ ಅವಳು ಕಮಲಾಪತಿರಾಯರ ಬಳಿಗೆ ಸದಾಶಿವ ರಾಯಭಾರಿಯಾಗಿ ಹೊರಟು ನಿಂತಾಗ ತನ್ನ ಮೌನದ ಸಮ್ಮತಿಯನ್ನು ಸೂಚಿಸಿ ಬೀಳ್ಕೊಟ್ಟಳು.

ಲೀಲಾವತಿಯ ಅದೃಷ್ಟ ದೊಡ್ಡದೊ, ಸದಾಶಿವನ ಜಾಣ್ಮೆ ಮೆಚ್ಚುವಂತಹದ್ದೊ ಅಂತೂ ಸದಾಶಿವನ ರಾಯಭಾರ ಯಶಸ್ವಿಯಾಯಿತು. ಸದಾಶಿವ ಕಮಲಾಪತಿರಾಯರೊಂದಿಗೆ ಅದೇನು ಮಾತನಾಡಿದನೋ ಕೊಂಚ

ಹೊತ್ತಿನ ಮೇಲೆ ಅವರನ್ನು ಕರೆದುಕೊಂಡು ವಿಶ್ವನಾಥರಾಯರ ಮನೆಗೆ ಬಂದ. ವಿಶ್ವನಾಥರಾಯರಿಗೂ ಅವರಿಗೂ ಆತ್ಮೀಯವಾದ ಮಾತುಕಥೆ ನಡೆಯಿತು. ಆ ಎಲ್ಲ ಮಾತುಕಥೆಯ ಫಲವಾಗಿ ಕಪನೀಪತಿರಾಯರು ಲೀಲಾವತಿಯನ್ನು ಮದುವೆಯಾಗಲು ಒಪ್ಪಿಗೆ ಕೊಟ್ಟುದು ಮಾತ್ರವಲ್ಲ, ಗೊತ್ತಾಗಿದ್ದ ಲಗ್ನದಲ್ಲಿಯೇ ಅವಳನ್ನು ಕೈಹಿಡಿಯಲು ಸಿದ್ಧರಾದರು. ವಿಶ್ವನಾಥರಾಯರು, ಸದಾಶಿವ ಸುಮಿತ್ರೆಯರು ಎಲ್ಲರಿಗೆ ಪ್ರಿಯವೆನಿಸುವ ಕಪನೀಪತಿರಾಯರ ನಡವಳಿಕೆಯನ್ನು ಕಂಡು ಲೀಲಾವತಿಗೆ ತಕ್ಕ ವರ ನೆಂದೇ ಭಾವಿಸಿದರು. ಅಂತೂ ಇಂತೂ ಲೀಲಾವತಿ ತನಗೆ ಸರ್ವರೀತಿ ಯಲ್ಲಿ ಅನುರೂಪನಾದ ಗಂಡನನ್ನೇ ಸೇರಿದಳು ಎಂದು ಅವರೆಲ್ಲ ಸಮಾಧಾನ ತಾಳಿದರು. ಕಪನೀಪತಿರಾಯರು ಎಲ್ಲ ರೀತಿಯಲ್ಲಿ ಸುರೇಂದ್ರನಷ್ಟೆ ಉತ್ತಮ ವರನಾಗಿ ಕಾಣಿಸಿಕೊಂಡಿದ್ದರು. ಸುರೇಂದ್ರನಿಗೆ ಶ್ರೀಮಂತಿಕೆ ಇದ್ದರೂ ಅವನು ಹೆಚ್ಚು ವಿದ್ಯಾವಂತನಾಗಿರಲಿಲ್ಲ. ಈ ಒಂದು ದೃಷ್ಟಿಯಿಂದ ಕಪನೀಪತಿರಾಯರು ಅವನಿಗಿಂತ ಉತ್ತಮ ವರ.

ಕಪನೀಪತಿರಾಯರಿಗೂ ಲೀಲಾವತಿಯನ್ನು ಮದುವೆಯಾಗುವುದರಲ್ಲಿ ವೈಯಕ್ತಿಕ ಆನಂದವಿತ್ತು. ಅವಳಿಗಾಗಿ ಅವರು ಅನೇಕ ಹಗಲು ರಾತ್ರಿ ಪರಿತಪಿಸಿದ್ದರು. ಅಂತಹ ಲೀಲಾವತಿಯನ್ನು ಕೈಹಿಡಿಯುವ ಪುಣ್ಯ ತಮಗೆ ಇದೆ ಎಂದು ಅವರು ಖಂಡಿತ ತಿಳಿದಿರಲಿಲ್ಲ. ಆದರೆ ದೈವದ ನಿರ್ಣಯ ಅವರ ಪರವಾಗಿತ್ತು. ಕೇವಲ ತೂರಿಬಂದ ತಾರೆಯಂತೆ ಕಾಣಿಸಿಕೊಂಡಿದ್ದ ಲೀಲಾವತಿ, ಹಾರಿಹೋದ ತಾರೆಯಾಗದೆ ಧೃವನಕ್ಷತ್ರದಂತೆ ಅವರ ಗೃಹಿಣಿ ಯಾಗಿ ಇರಬೇಕೆಂಬುವೇ ದೈವಶಾಸನವಾಗಿತ್ತು. ದೈವ ಶಾಸನವನ್ನು ಮೀರಬಲ್ಲವರಾರು?

ಕಪನೀಪತಿರಾಯರು, ಲೀಲಾವತಿಯನ್ನು ಮದುವೆಯಾಗಲು ಒಪ್ಪಿದ ಮೇಲೆ ಎಲ್ಲರ ಮನಸ್ಸಿಗೆ ಕವಿದಿದ್ದ ಚಿಂತೆಯ ಕಾರ್ಮೋಡ ಸರಿದು ಮತ್ತೆ ಎಲ್ಲರ ಪಾಲಿಗೆ ಬೆಳುದಿಂಗಳೇ ಬಂತು. ಆದರೆ ಲೀಲಾವತಿಯ ಪಾಲಿಗೆ ಕವಿದಿದ್ದ ಕಾರ್ದಿಂಗಳು ಮಾತ್ರ ಕಳೆಯಲಿಲ್ಲ. ಅವಳಿಗೆ ಅವಳ ಜೀವಿತಾದರ್ಶವ ಕನಸು ಎಂದೋ ಒಡೆದಿತ್ತು. ತಾನು ಮದುವೆಯಾಗಲೇ ಬಾರದೆಂದು

## ೧೮

ಲೀಲಾವತಿಯ ಮದುವೆಯಿಂದ ವಿಶ್ವನಾಥರಾಯರಿಗೆ ಮಾತ್ರವಲ್ಲ. ಸುಮಿತ್ರೆ ಸದಾಶಿವರ ಮನಸ್ಸಿಗೆ ಎಷ್ಟೋ ಸಮಾಧಾನ. ಲೀಲಾವತಿ ಮೊದಲಿಂದಲೂ ಹೇಳುತ್ತಿದ್ದಂತೆ ಅವಳು ಆಜನ್ಮ ಪರ್ಯಂತ ಕುಮಾರಿಯಾಗಿಯೇ ಉಳಿಯುವಳೇ ಎಂದು ಒಂದು ಬಗೆಯ ಕುತೂಹಲವಿತ್ತು. ಲೀಲಾವತಿಗೆ ವಿವಾಹ ಪದ್ಧತಿಯಲ್ಲಿ ತಿಲಮಾತ್ರ ನಂಬಿಕೆ ಇಲ್ಲವೆಂಬುದು ಅವರಿಗೆ ಗೊತ್ತಿತ್ತು. ಹೀಗೆಂದ ಮಾತ್ರಕ್ಕೆ ಗಂಡಿನ ಸಹವಾಸವಿಲ್ಲದೆ ಸಾಯುವ ತನಕ ಒಂಟಿ ಜೀವನವನ್ನು ಪುರಸ್ಕರಿಸುವ ವ್ಯಕ್ತಿ ಅವಳಲ್ಲವೆಂದು ಗೊತ್ತಿತ್ತು. ಅವಳ ಈ ದೃಷ್ಟಿ ವ್ಯಾವಹಾರಿಕವಾಗಿ ಅಸಹಜವೆನಿಸಿಕೊಂಡು ಗಂಡಿನ ಜತೆಯಲ್ಲಿ ಅವಳಿಗಿರುವ ದೈಹಿಕ ಸಂಬಂಧ ಸ್ವೈರವೃತ್ತಿ ಎನಿಸಿಕೊಳ್ಳದೆ ಹೋಗದು. ಕಪನೀಪತಿರಾಯರೊಂದಿಗೆ ದೇಹ ಸಂಬಂಧ ಒಮ್ಮೆ ಒಂದೇ ಒಂದು ಬಾರಿ ಬೆಳೆಸಿದ ಮಾತ್ರಕ್ಕೆ ಅದೇ ಅವಳ ಭಾಗದ ಅನಿಷ್ಟವಾಗಿ ಅವಳು ಇಷ್ಟಪಡದೆ ಇದ್ದ ಮದುವೆಗೆ ಅವಳು ಮನಸ್ಸು ಕೊಡುವಂತೆ ಮಾಡಿದ್ದುದು ಮಾತ್ರವಲ್ಲ, ಅವಳ ಅಭಿಪ್ರಾಯದಲ್ಲಿ ಕ್ಷುದ್ರ ವ್ಯಕ್ತಿ ಎನಿಸಿಕೊಂಡಿದ್ದ ಕಪನೀಪತಿರಾಯರನ್ನೇ ಮದುವೆಯಾಗುವಂತೆ ಮಾಡಿತ್ತು. ತಂದೆ ಇಂಥವನೆಂದು ತಿಳಿಯದ ಮಕ್ಕಳ ತಾಯಿ ತಾನು ಆಗುವುದರಲ್ಲಿ ಅವಳ ದೃಷ್ಟಿಯಲ್ಲಿ ಪಾಪವೆನಿಸದಿದ್ದರೂ-ಲೋಕದ ಕಣ್ಣಿನಲ್ಲಿ ಅಂತಹ ನಡವಳಿಕೆ ಅನೀತಿ ಮಾತ್ರವಲ್ಲ ಅಂತಹ ಸಂತಾನ ಸಮಾಜದ ಕಣ್ಣಿನಲ್ಲಿ ಪರದೇಶಿ ಪಾಪ! ಆ ಮಕ್ಕಳಿಗೆ ಸಮಾಜದಲ್ಲಿ ಯಾವ ಬಗೆಯ ಮನ್ನಣೆ ಇರದು. ಅದರ ಜೀವನ ನಾಯಿನರಿಗಳಿಗೂ ಹೇಯವಾದ, ತಿರಸ್ಕಾರ ಪೂರ್ಣ ಬದುಕು. ಅವರಿಗೆ ಸಮಾಜದಲ್ಲಿ ಯಾವ ಬಗೆಯ ಸ್ಥಾನಮಾನಗಳೂ ದೊರೆಯವು. ತಾನು ತನ್ನ ದೈಹಿಕ ತೃಷೆಯನ್ನು ಹಿಂಗಿಸಲು ಹೋಗಿ ಅಂತಹ ಪರದೇಶಿ ಪಾಪನ ತಾಯಿಯಾಗುವುದರಲ್ಲಿ ಲೀಲಾವತಿಗೆ ಸುಖವಿರಲಿಲ್ಲ. ಅಂತಲೇ ತಾನು ಮಾಡಿದ್ದ ಅನಾಚಾರಕ್ಕೆ ಸಮಾಜ ಒಪ್ಪಿದ ಮದುವೆಯ ಮುಖವಾಡಹಾಕಲು ಅವಳು ನಿರ್ಧರಿಸಿದ್ದು. ಆದರೆ ಅವಳು

ಬಯಸಿದ ಮುಖವಾಡವೇ ಬೇರೆ. ಅವಳಿಗೆ ದೊರೆತ ಮುಖವಾಡವೇ ಬೇರೆ. ಸುರೇಂದ್ರನನ್ನು ವರಿಸಲು ಹೋಗಿ ಕಪನೀಪತಿರಾಯರನ್ನು ಮದುವೆಯಾಗಬೇಕಾಗಿ ಬಂದಿತ್ತು. ಆ ಸಂಗತಿ ಹೇಗೇ ಇರಲಿ. ಅಂತೂ ಲೀಲಾವತಿಯ ಮದುವೆ ನಡೆದುಹೋಗಿ, ಜಗದ ಕಣ್ಣಿನಲ್ಲಿ ಅವಳು ಒಬ್ಬ ಸುಮಂಗಲಿಯಾದಳು. ತಮ್ಮ ಗೆಳತಿ ತನ್ನ ಹುಚ್ಚು ಆದರ್ಶದ ಬೆನ್ನು ಹತ್ತಿ ಕಡೆತನಕ ಇತ್ತ ಕುಮಾರಿಯಾಗಿ ಉಳಿಯದೆ, ಅತ್ತ ಸುಮಂಗಲಿಯೂ ಆಗದೆ ಕೇವಲ ಸ್ವೈರಿಣಿ—ವ್ಯಭಿಚಾರಿಣಿಯಾಗಿಬಿಡುವಳೋ ಎನ್ನುವ ಹೆದರಿಕೆ ಸುಮಿತ್ರೆ ಸದಾಶಿವರಿಗೆ ಬಾಧಿಸುತ್ತಿತ್ತು. ಅದರಲ್ಲಿಯೂ ಸದಾಶಿವನಿಗೆ ಲೀಲಾವತಿಯ ಮನಸ್ಸಿನಲ್ಲಿ ಎಂತಹ ಕಾಮದ ಜ್ವಾಲಾಮುಖಿ ಇರುವುದೆಂದು, ಒಮ್ಮೆ ಸ್ಫೋಟಗೊಂಡಾಗ ತಿಳಿದಿತ್ತು. ಅದು ಕೇವಲ ಮಾತಿನಿಂದ ನಂದಿ ಹೋಗುವ ಬೆಂಕಿಯಲ್ಲವೆಂಬುದು ಅವನಿಗೆ ಗೊತ್ತಿತ್ತು. ಅಂತಲೇ ಅವನು ಲೀಲಾವತಿಯನ್ನು ಮದುವೆಯಾಗಲು ಒತ್ತಿ ಒತ್ತಿ ಹೇಳಿದ್ದ. ಅಲ್ಲದೆ ಸುಮಿತ್ರೆಯ ಮೂಲಕ ವಿಶ್ವನಾಥರಾಯರಿಗೂ ಹೇಳಿಸಿದ್ದ. ಅವನ ಮಾತು ಅವರ ಮನಸ್ಸಿಗೆ ನಾಟಿತೆಂಬಂತೆ ಒಂದು ದಿನ ಲೀಲಾವತಿಯ ಮದುವೆ ನಿಶ್ಚಯವಾಯಿತು. ಈ ಸುದ್ದಿಯನ್ನು ಕೇಳಿ ಸದಾಶಿವನಿಗೆ ಮಿತಿ ಮೀರಿದ ಸಂತೋಷ ಉಂಟಾಯಿತು. ಅಂತೂ ಲೀಲಾವತಿ ಅಡ್ಡದಾರಿ ತುಳಿಯುವುದು ತಪ್ಪಿತಲ್ಲ ಎಂದು ಆ ದಿನ ರಾತ್ರಿ ಸುಮಿತ್ರೆಯೊಡನೆ ಮಾತನಾಡುತ್ತಿದ್ದಾಗ ಹೇಳಿದ.

"ನಿನ್ನ ಫ್ರೆಂಡ್‌ದು ಮ್ಯಾರೇಜ್ ಫಿಕ್ಸ್ ಆದುದಕ್ಕೆ ನಿನಗೆ ಮೊದಲು ಕನ್‌ಗ್ರಾಚುಲೇಷನ್ ಕೊಡಬೇಕು" ಎಂದ.

"ಮ್ಯಾರೇಜು ಅವಳಿಗಾದರೆ ನನಗೇಕೆ ಕನ್‌ಗ್ರಾಚುಲೇಷನ್ಸು (ಅವಳಿಗೆ ಮದುವೆಯಾದರೆ ನನಗೇಕೆ ಶುಭಾಶಯ ?)"

"ನೀನು ಲೀಲಾವತಿಯನ್ನು ರೆಸ್‌ಕ್ಯೂ (ರಕ್ಷಿಸು) ಮಾಡಿದ್ದೀಯೆ !"

"ಹಾಗೆಂದರೆ ?"

"ಲೀಲಾವತಿಯ ಉದ್ಧಾರ ನಿನ್ನಿಂದ ಆಯಿತು ಸುಮ್ಮಿ !"

"ನನಗೆ ಅರ್ಥವಾಗಲಿಲ್ಲ. ಏನೆಂದು ಬಿಡಿಸಿ ಹೇಳಬಾರದೆ ?"

"ನೀನು ನನ್ನನ್ನು ಸರ್ವ ರೀತಿಯಲ್ಲಿ ಸುಖಿಯಾಗಿ ಇರಿಸಿ ಆ ನನ್ನ ಮಾನ ಸಂರಕ್ಷಣ–ಅಲ್ಲ ಲೀಲಾವತಿಯ ಶೀಲ ಸಂರಕ್ಷಣ ಮಾಡಿ ಎಂದು ಆ ದಿನ ಲೀಲಾವತಿ ಕಾಮ ವಿಹ್ವಲಳಾಗಿ ತನ್ನ ಬಳಿಗೆ ಬ ಪರಾಜಿತಳಾಗಿ ಹಿಂದಿರುಗಿದ ಎಲ್ಲ ಕಥೆಯನ್ನೂ ಸಂಕೋಚವಿಲ್ಲದೆ ಸಾ ವಾಗಿ ಹೇಳಿದ.

ಇದನ್ನು ಕೇಳಿ ಸುಮಿತ್ರೆಗೆ ತಾನು ಕಟ್ಟು ಕಥೆಯನ್ನು ಕೇಳುತ್ತಿ ವಂತೆ ಮೈ ರೋಮಾಂಚವಾಯಿತು. ಅವಳಿಗೆ ಇದರಿಂದ ಸದಾಶಿವ ತನ್ನ ವಿಷಯದಲ್ಲಿರುವ ಪ್ರೀತಿ ಎಷ್ಟೆಂದು ತಿಳಿಯಿತು. ಅಂತೆ ಲೀಲಾವತಿ ಇಂದ್ರಿಯ ಸುಖಾಪೇಕ್ಷೆಯಿಂದ ಮಾನಸಿಕವಾಗಿ ಎ ಕಂಗಾಲಾಳಾಗಿದ್ದಳು. ಅವಳ ವಿಚಾರ ಸಂಯಮಗಳಿಗಾದ ಸ್ಥಿ ಪತನವೆಂತಹದೆಂಬುದು ತಿಳಿಯಿತು. ಅವಳು ಇಷ್ಟೊಂದು ಕಾಮಾತ ಳಾಗಿದುದ್ದರಿಂದಲೇ ಕಪನೀಪತಿರಾಯರು ಬೀಸಿದ್ದ ಜಾಲದಲ್ಲಿ ಸುಲಭವಾ ಬಿದ್ದದ್ದು. ಸದ್ಯ ದೈವಾನುಗ್ರಹದಿಂದ ಲೀಲಾವತಿ ಜಾರಿದ ಹೆಜ್ಜೆಯ ಮತ್ತೆ ಸರಿಯಾಗಿ ಇಡುವಂತೆ ಆಯಿತಲ್ಲ, ಎಂದು ಗೆಳತಿಗಾಗಿ ಅವ ಸಮಾಧಾನದ ನಿಟ್ಟುಸಿರು ಬಿಟ್ಟಳು. ಅವಳ ದೃಷ್ಟಿಯಲ್ಲಿ ಈಗ ಲೀ ವತಿ ಸರ್ವರೀತಿಯಲ್ಲಿ ಸುಖಿ; ಅವಳ ಪ್ರೇಮದ ಬಟ್ಟಲು ಮಾತ್ರವ ಅವಳ ಕಾಮದ ಬಟ್ಟಲೂ ತುಂಬಿಕೊಂಡಿತ್ತು. ಇನ್ನೊಬ್ಬರ ಹಂಗಿಲ್ಲ ಅವುಗಳನ್ನು ಸವಿಯಬಹುದು.

ಆದರೆ ವಾಸ್ತವಾಂಶ ಬೇರೆಯಾಗಿತ್ತು. ಲೀಲಾವತಿ ಕಪನೀ ರಾಯರನ್ನು ಮದುವೆಯಾದ ಮೇಲೆ ಅವಳಿಗೆ ಇಷ್ಟವಿಲ್ಲದೆ ಇದ್ದ ಅವಳು ಪತಿಗೃಹಕ್ಕೆ ಹೋಗಲೇಬೇಕಾಯಿತು. ಲೀಲಾವತಿ ತಾ ತಂದೆಯ ಜತೆಯಲ್ಲಿಯೇ ಇರುವುದಾಗಿಯೂ ಕಪನೀಪತಿರಾಯರು ಇ ಇಷ್ಟ ಬಂದಾಗ ಬಂದಿರಬಹುದೆಂದೂ ತನ್ನನ್ನು ಅವರ ಮನೆಗೆ ಬರ ಬಲವಂತಪಡಿಸಬಾರದೆಂದೂ ಕಪನೀಪತಿರಾಯರಲ್ಲಿ ಪ್ರಾರ್ಥಿಸಿದ್ದಳು. ಕೋರಿಕೆಯನ್ನು ಅವರು ವಿಚಿತ್ರ ರೀತಿಯಲ್ಲಿ ಈಡೇರಿಸಿಕೊಟ್ಟಿದ್ದರು. ಲೀ ವತಿ ಎರಡು ಮನೆಗಳಲ್ಲಿ ಎಲ್ಲಿ ಅವಳಿಗೆ ಇಷ್ಟವಾಗುವುದೋ ಅಲ್ಲಿ ಅವ

ಮನಸ್ಸು ಬಂದಷ್ಟು ದಿನ ಇರಬಹುದೆಂದು ಹೇಳಿದರು. ಸದ್ಯಕ್ಕೆ ಕೆಲವು ತಿಂಗಳು ಲೀಲಾವತಿ ಕಪನೀಪತಿರಾಯರ ಮನೆಯಲ್ಲಿ ಅವರೊಡನೆ ಸುಖವಾಗಿ ಇರಬೇಕೆಂಬುದೇ ವಿಶ್ವನಾಥರಾಯರು ಸುಮಿತ್ರೆ ಸದಾಶಿವರ ಇಷ್ಟವಾಗಿದ್ದುದರಿಂದ ನಿರ್ವಾಹವಿಲ್ಲದೆ ಲೀಲಾವತಿ ಪತಿಗೃಹಕ್ಕೆ ಹೋದಳು. ಆದರೂ ಆ ಮನೆ ತನ್ನ ತಂದೆಯ ಮನೆಗೆ ಸಮೀಪದಲ್ಲಿಯೇ ಇದ್ದುದರಿಂದ ಅವಳಿಗೆ ಬೇಕಾದಾಗ ಬಂದು ತಂದೆಯನ್ನು ಮಾತನಾಡಿಸಬಹುದಾಗಿತ್ತು. ಈ ಬಗೆಯ ಸ್ವಾತಂತ್ರ್ಯ ಕಪನೀಪತಿರಾಯರು ಅವಳಿಗೆ ಸಂತೋಷದಿಂದಲೇ ಕೊಟ್ಟಿದ್ದರು. ಅನೇಕ ವಿಚಾರಗಳಲ್ಲಿ ಲೀಲಾವತಿಗೂ ಕಪನೀಪತಿರಾಯರಿಗೂ ತುಂಬಾ ಭಿನ್ನಾಭಿಪ್ರಾಯಗಳಿದ್ದರೂ ವ್ಯವಹಾರ ಕುಶಲಯಾದ ಅವರು ಲೀಲಾವತಿಯನ್ನು ಸಣ್ಣಪುಟ್ಟ ವಿಷಯಗಳಿಗಾಗಿ ಎದುರು ಹಾಕಿಕೊಳ್ಳುತ್ತಿರಲಿಲ್ಲ. ಅವರು ಲೀಲಾವತಿಯ ಸ್ವಾತಂತ್ರ್ಯದಾಹವನ್ನು ಕಂಡು ಅವಳು ಬಯಸುವ ವ್ಯಕ್ತಿಸ್ವಾತಂತ್ರ್ಯವನ್ನು ಅವಳಿಗೆ ಕೊಟ್ಟಿದ್ದರು. ಅಂದರೆ ಲೀಲಾವತಿಯ ಊಟ ತಿಂಡಿ, ಉಡಿಗೆ ತೊಡಿಗೆ, ಆಚಾರವಿಚಾರಗಳಲ್ಲಿ ಅವರು ತಲೆಹಾಕುತ್ತಿರಲಿಲ್ಲ. ಇವೆಲ್ಲದರಲ್ಲಿ ಅವರು ಲೀಲಾವತಿ ತನಗೆ ಸರಿಸಮಾನಳೆಂಬಂತೆ ನಡೆಸಿಕೊಂಡಿದ್ದರು. ಲೀಲಾವತಿ ತನಗೆ ಇಷ್ಟ ಬಂದಂತೆ ಇರಲು ಅವರ ಮನೆಯಲ್ಲಿ ಸ್ವಾತಂತ್ರ್ಯ ಇತ್ತು. ಅವಳು ಎಲ್ಲಿಗೆ ಬೇಕಾದರೆ ಅಲ್ಲಿಗೆ ಹೋಗಬಹುದಿತ್ತು. ಇಷ್ಟೆಲ್ಲ ಸ್ವಾತಂತ್ರ್ಯ ಕೊಟ್ಟಿದ್ದ ಅವರು ಲೀಲಾವತಿಗೆ ಒಂದೇ ಒಂದು ಸ್ವಾತಂತ್ರ್ಯ ಕೊಡದೆ ಹೋಗಿದ್ದರು. ಅದು ದಾಂಪತ್ಯ ಜೀವನದಲ್ಲಿನ ಸ್ವಾತಂತ್ರ್ಯ. ಅವರಿಗೆ ಲೀಲಾವತಿ ಹೇಗಿದ್ದರೂ ಸಂತೋಷವೇ. ಅವಳು ಕಪನೀಪತಿರಾಯರ ಕಾಮಜೀವನದಲ್ಲಿ ಸಹಭಾಗಿನಿಯಾಗಿರುವ ತನಕ ಅವಳ ಸ್ವಾತಂತ್ರ್ಯಕ್ಕೆ ಯಾವ ಅಡ್ಡಿ ಆತಂಕಗಳೂ ಇರಲಿಲ್ಲ. ಅವಳು ತನಗೆ ಬೇಕಿರಲಿ, ಬೇಡವಾಗಲಿ, ಕಪನೀಪತಿರಾಯರು ಇಚ್ಛಿಸಿದಾಗ ಅವರ ಭೋಗದ ಹೆಣ್ಣಾಗ ಬೇಕಾಗಿತ್ತು. ಈ ಒಂದು ಸ್ವಾತಂತ್ರ್ಯವನ್ನು ಕಪನೀಪತಿರಾಯರು ಲೀಲಾವತಿಗೆ ಕೊಡದೆ ಹೋಗಿದ್ದರು. ಮೊದಲು ಮೊದಲು ಕಾಮಜೀವನದಲ್ಲಿ ಉತ್ಸಾಹದಿಂದ ಪಾಲುಗೊಳ್ಳುತ್ತಿದ್ದ ಲೀಲಾವತಿಗೆ ಈ ಕಾಮ ಸ್ವಾತಂತ್ರ್ಯದ ಬೆಲೆ ಏನೆಂದು

ತಿಳಿಯದೆ ಹೋಯಿತು. ಅವಳು ಹಲವಾರು ವರ್ಷಗಳಿಂದ ತನ್ನ ಪೇ
ವನ್ನು ವಿಷಯಸುಖಾಪೇಕ್ಷೆಯಿಂದ ವಂಚಿಸಿದ್ದಳು. ಈಗ ಅವಳು ತೃಪ್ತಿ
ಯಾಗುವಷ್ಟು ಒಡಲಿನ ಹಸಿವನ್ನು ಹಿಂಗಿಸಿಕೊಂಡಿದ್ದಳು. ಕಾಲಕ್ರಮದ
ಅವಳಿಗೆ ಲೈಂಗಿಕಾಕರ್ಷಣೆ ಕಡಮೆಯಾಗುತ್ತ ಹೋಗಿ, ಕಪನೀಪತಿರಾಯ
ರನ್ನು ಕಂಡರೆ ಜುಗುಪ್ಸೆ ಪಡುವಂತೆ ಆಯಿತು. ಇಷ್ಟಾದರೂ ಕಪನೀಪ
ರಾಯರು ತಮ್ಮ ಆಸೆಯನ್ನು ಈಡೇರಿಸಿಕೊಳ್ಳಲು ಆಗ್ರಹಮಾಡುತ್ತಿದ್ದರು
ಆರಂಭದ ದಿನಗಳಲ್ಲಿ ಕಪನೀಪತಿರಾಯರು ಈ ಪ್ರಯತ್ನದಲ್ಲಿ ಯಶಸ್ವಿ
ಯಾಗಿದ್ದರೂ ದಿನ ಕಳೆದಂತೆ, ಲೀಲಾವತಿ ಕಪನೀಪತಿರಾಯರನ್ನು ಎದು
ಸಲು ಆರಂಭಿದ್ದಳು. ಹೊಟ್ಟೆಯ ಒಳಗೆ ಬೇರೊಂದು ಜೀವವನ್ನು ಹೊತ್ತಿ
ರುವ ತಾನು ಹೆಚ್ಚು ಕಾಲ ಕಪನೀಪತಿರಾಯರ ಕಾಮದ ಬೊಂಬೆಯಾಗಲು
ಸಾಧ್ಯವಿಲ್ಲವೆಂಬುದನ್ನು ಅವಳು ಕಂಡುಕೊಂಡು ಕಪನೀಪತಿರಾಯರು ತನ
ಬಳಿಗೆ ಬಂದಾಗಲೆಲ್ಲ ಅವರನ್ನು ಕಂಡರೆ ಹುಲಿಯನ್ನು ಕಂಡಂತೆ ಹೆದ
ತ್ತಿದ್ದಳು. ಆದರೆ ಅವರ ಮುಂದೆ ಲೀಲಾವತಿಯ ಆಟ ನಡೆಯುತ್ತಿರಲಿಲ್ಲ
ಅವರು ಕೊಡುವ ಚಿತ್ರಹಿಂಸೆಗಳನ್ನು ಸಹಿಸಿಕೊಳ್ಳಬೇಕಾಗುತ್ತಿತ್ತು. ಈ
ವಿಷಯ ಒಂದು ವಿನಾ ಉಳಿದೆಲ್ಲ ವಿಷಯಗಳಲ್ಲಿಯೂ ಲೀಲಾವತಿ ಕಪನೀ
ಪತಿರಾಯರ ಮನೆಯಲ್ಲಿ ಸುಖವಾಗಿದ್ದಳೆನ್ನಬೇಕು!

ಲೀಲಾವತಿ ಗಂಡನ ಮನೆಯಲ್ಲಿಯೂ ಎಂದಿನಂತೆ ಎಂಟು ಗಂಟೆ
ಏಳುತ್ತಿದ್ದಳು. ಅನಂತರ ಕಾಫಿ, ಸ್ನಾನ, ತನ್ನ ಶೃಂಗಾರ, ಊಟ ಇ
ಗಳನ್ನು ಮುಗಿಸಿಕೊಂಡು ಕಾಲೇಜಿಗೆ ಹೊರಟರೆ ಮತ್ತೆ ಮನೆಗೆ ಬರ
ತ್ತಿದ್ದುದು ರಾತ್ರಿ ಎಂಟು ಗಂಟೆಗೇ. ಲೀಲಾವತಿಗೆ ಮೂರು ಗಂಟೆ
ಕಾಲೇಜು ಮುಗಿದುಹೋಗುತ್ತಿದ್ದರೂ ಕಾಲೇಜು ಮುಗಿದೊಡನೆ ಅವ
ನೇರ ತಂಪೆಯ ಮನೆಗೆ ಹೋಗುತ್ತಿದ್ದಳು. ಅವರ ಜತೆಯಲ್ಲಿ ಐದರ ತನ
ಇದ್ದು ಅನಂತರ ಅವರೊಂದಿಗೆ ಕಾಸ್ಮೊಪಾಲಿಟನ್ ಕ್ಲಬ್ಬಿಗೆ ಬರುತ್ತಿದ್ದ
ಅಲ್ಲಿ ಯಾವುದಾದರೂ ಆಟ ನೋಡುತ್ತಲೋ ಸಮಾರಂಭದಲ್ಲಿ ಭಾ
ವಹಿಸುತ್ತಲೋ ಇಲ್ಲ ಟೆನಿಸ್ ಆಡುತ್ತಲೋ ಕಾಲ ಕಳೆಯುತ್ತಿದ್ದಳು. ಆ
ಬೇಸರವಾದರೆ ತಂಪೆಯವರ ಜತೆಯಲ್ಲಿ ದೀರ್ಘವಾದ ಸಂಚಾರ ಹೋ

...ಳು. ಅದನ್ನು ಮುಗಿಸಿಕೊಂಡು ನೇರ ಗಂಡನ ಮನೆಗೆ ಬರುತ್ತಿದ್ದಳು. ಮನೆಗೆ ಬಂದ ಮೇಲೆ ಊಟ, ಸುಮಾರು ಹತ್ತರ ತನಕ ಹರಟೆ—ಕಪನೀಪತಿರಾಯರೊಡನೆ ಮಾತನಾಡಬೇಕೆನಿಸಿದರೆ. ಇಲ್ಲವಾದರೆ ತನ್ನ ಓದುವ ಕೋಣೆ ಸೇರಿ ಹತ್ತು ಹನ್ನೆರಡರ ತನಕ ಓದುತ್ತಾ ಕುಳಿತುಕೊಳ್ಳುತ್ತಿದ್ದಳು. ನಂತರ ನಿದ್ರೆ.

ಕಪನೀಪತಿರಾಯರು ಒಮ್ಮೊಮ್ಮೆ ಲೀಲಾವತಿಯ ಸಾನ್ನಿಧ್ಯಸುಖ ಬಯಸಿದಾಗ ಲೀಲಾವತಿ ಏನಾದರೂ ವಿರೋಧಿಸಿದಳೆಂದರೆ ಬಂತು—ಅವಳಿಗೆ ಗ್ರಹಚಾರ! ಅವಳು ಒರಟಾದಷ್ಟೂ ಅವರೂ ಒರಟಾಗುತ್ತಿದ್ದರು. ಅದರಿಂದ ಇಬ್ಬರಿಗೂ ಹಿಂಸೆ, ಶ್ರಮವಾಗುತ್ತಿತ್ತು. ಇದರಲ್ಲಿಯೇ ಒಂದು ಬಗೆಯ ವಿಲಕ್ಷಣ ತೃಪ್ತಿಯನ್ನು ಕಾಣುತ್ತಿದ್ದ ಕಪನೀಪತಿರಾಯರಿಗೆ ಲೀಲಾವತಿಯ ಸುಖದ ಚಿಂತೆ ಇರಲಿಲ್ಲ. ಅವರಿಗೆ ಬೇಕಾಗಿದ್ದುದು ಲೀಲಾವತಿಯ ಮನಸ್ಸಲ್ಲ. ಅವಳ ಸುಂದರ ಕಾಯ. ಅದು ತಮ್ಮ ಅಂಕೆಯಲ್ಲಿ ಇರುವ ತನಕ ಲೀಲಾವತಿಯ ಮನಸ್ಸಿನ ಗೊಡವೆ ಅವರಿಗೆ ಬೇಕಿರಲಿಲ್ಲ. ಅವರು ಅದನ್ನು ನಿರ್ಲಕ್ಷಿಸುತ್ತಲೇ ಬಂದರು. ಇದರಿಂದ ಲೀಲಾವತಿಗೆ ಕಪನೀಪತಿರಾಯರೆಂದರೆ ಹೇಸಿಗೊಳ್ಳುವಂತಾಗಿತ್ತು. ಹೀಗೆ ಲೀಲಾವತಿ ಗಂಡನ ಮನೆಗೆ ಬಂದ ಒಂದೆರಡು ತಿಂಗಳಲ್ಲಿ ನರಕಯಾತನೆಯನ್ನು ಅನುಭವಿಸಿದಳು. ಈ ಯಾತನೆಯನ್ನು ಯಾರಲ್ಲಿ ಹೇಳಿಕೊಳ್ಳಬೇಕು? ಹೇಗೆ ಹೇಳಿಕೊಳ್ಳಬೇಕು?

ಒಂದು ದಿನ ಕಪನೀಪತಿರಾಯರು ಲೀಲಾವತಿಯ ದೈಹಿಕ ಮಾನಸಿಕ ಸ್ಥಿತಿಯನ್ನು ಉಪೇಕ್ಷೆಮಾಡಿ ಅವಳನ್ನು ತಮ್ಮ ಕಾಮಕೇಳಿಗೆ ಎಳೆಯಲೆತ್ನಿಸಿದರು. ಲೀಲಾವತಿ ತನ್ನ ತೀಕ್ಷ್ಣ ನೋಟದಲ್ಲಿ ಹಾವಭಾವದಲ್ಲಿ ತನ್ನ ಅಸಮ್ಮತಿಯನ್ನು ವ್ಯಕ್ತಪಡಿಸಿದಳು. ಆದರೆ ಎಲ್ಲ ವಿಷಯಗಳಲ್ಲಿ ಸೂಕ್ಷ್ಮಗ್ರಾಹಿಗಳಾಗಿದ್ದ ಕಪನೀಪತಿರಾಯರು ಇದೊಂದು ವಿಷಯದಲ್ಲಿ ಸೂಕ್ಷ್ಮಗ್ರಾಹಿಗಳಾಗಿರಲಿಲ್ಲ. ಅವರು ಹತ್ತಿರ ಬಂದಾಗ ಕೆರಳಿದ ಸಿಂಹಿಣಿಯಂತೆ ಲೀಲಾವತಿ ಗರ್ಜಿಸಿದಳು.

“ನನ್ನನ್ನು ಮುಟ್ಟಬೇಡಿ—” ಎಂದು ಸಿಟ್ಟಿನಿಂದ ಹೇಳಿದಳು.

ಕಪನೀಪತಿರಾಯರು. ಅವಳ ಸಿಟ್ಟನ್ನು ಪ್ರಣಯಕೋಪವೆಂದು ಭ
ದರು. ಇದರಿಂದ ಅವರು ಇನ್ನಿಷ್ಟು ಉತ್ತೇಜಿತರಾದರು. ಅ
“ ಡಿಯರ್, ಸುಮ್ಮನೆ ನಾಟಕ ಬೇಡ, ನಿನ್ನ ಮನಸ್ಸಿನ ಅಪೇಕ್ಷೆ
ತಿಳಿಯದೇ ? ” ಎಂದರು.

“ ನನ್ನ ಮನಸ್ಸಿನ ಅಪೇಕ್ಷೆ ನಿಮಗೇನು ತಿಳಿದಿದೆ ? ” ಲೀಲ
ತಿರಸ್ಕಾರ ಪೂರ್ಣವಾಗಿ ನೋಡಿದಳು.

ಆ ದೃಷ್ಟಿಯನ್ನು ಅವರು ಗಣನೆಗೆ ತರಲಿಲ್ಲ. ಅವರು ಮಾ
ಡುವ ಬದಲು ಸುಮ್ಮನೆ ಅರ್ಥವಿಲ್ಲದ ಒಣನಗೆ ನಕ್ಕು ಲೀಲಾವ
ಬೆನ್ನಿನ ಮೇಲೆ ಕೈ ಇಟ್ಟರು.

“ ನನಗೆ ಇದೊಂದೂ ಬೇಡ ” ಎಂದಳು ನಿಷ್ಠುರವಾಣಿಯಲ್ಲಿ.

“ ಡಿಯರ್ ನನ್ನ ಜತೆಯಲ್ಲಿ ಕುಳಿತು ನಾಲ್ಕು ಮಾತನಾಡ
ನಿನಗೆ ಬೇಸರವೆ ? ”

“ ನನಗೆ ನಿಮ್ಮ ಯಾವ ಮಾತೂ ಬೇಡವಾಗಿದೆ. ”

“ ಯಾಕೆ ಅಷ್ಟೊಂದು ಬೇಜಾರು ? ”

ಲೀಲಾವತಿ ಉತ್ತರ ಕೊಡದೆ ಕಪನೀಪತಿರಾಯರನ್ನೊಮ್ಮೆ ನೋ
ತಲೆತಗ್ಗಿಸಿ ಕುಳಿತಳು. ಅವಳ ಗಂಭೀರವಾದ ಮುಖವನ್ನು ಕಂಡು
ಳನ್ನು ಮುಟ್ಟುವ ಗೋಜಿಗೆ ಹೋಗದೆ ಕಪನೀಪತಿರಾಯರು ಅಲ್ಲಿ
ಹೊರಟುಹೋಗಿ ಯಾವುದೋ ಪುಸ್ತಕ ಓದುತ್ತಾ ಕುಳಿತುಕೊಂಡ
ಲೀಲಾವತಿ ಕಪನೀಪತಿರಾಯರು ಅತ್ತ ಹೊರಟುಹೋದ ಮೇಲೆ ತ
ದಾಂಪತ್ಯ ಜೀವನದ ಒಂದು ದಿನದ ಕಥೆ ಪೂರೈಸಿತು ಎಂದು ಸಮಾಧಾ
ನಿಟ್ಟುಸಿರು ಬಿಟ್ಟಳು.

ಅನೇಕ ವೇಳೆ ಕಪನೀಪತಿರಾಯರಿಗೆ ಲೀಲಾವತಿಯನ್ನು ಮಾತನ
ಸುವುದು ಮಾತ್ರವಲ್ಲ, ಕಣ್ಣಾರೆ ಕಂಡು ನೋಡಲೂ ಹೆದರಿಕೆಯಾಗುತ್ತಿ
ಅವರ ಕಾಮಾತುರದಾವನಲ್ಲಿಗೆ ಮಾನ ಲಜ್ಜೆಗಳು ತೃಣವಾಗುವುದೆ
ಗಾದೆಯಂತೆ, ಯಾವಾಗಲೂ ವಿಷಯವಾಸನೆಯಲ್ಲಿ ರಮಿಸುತ್ತಿದ್ದ ಕಪ
ಪತಿರಾಯರಿಗೆ ಲೀಲಾವತಿಯ ಮುಖಮುಖಪ್ಪುಗಳ ಪ್ರಸನ್ನತೆಗಾಗಿ ಕಾಯ

ಧಾನ ಉಳಿಯದೆ ಬೆಣ್ಣೆಮುದ್ದೆಗೆ ಹೊಂಚು ಹಾಕುವ ಬೆಕ್ಕಿನಂತೆ-
ಲಾವತಿಯ ದೇಹಕ್ಕಾಗಿ ಹಾತೊರೆಯುತ್ತಿದ್ದರು. ತಮ್ಮ ಮನಸ್ಸಿನ
ಯನ್ನು ಈಡೇರಿಸಿಕೊಳ್ಳಲು ಅನೇಕ ಬಾರಿ ಅವರು ಪಶುಪ್ರಾಯವಾಗಿ
ಸುತ್ತಿದ್ದುದೂ ಉಂಟು. ಮೊದಲು ಮೊದಲು ಲೀಲಾವತಿಗೆ ಗಂಡನ
ಗಾರ ಚೇಷ್ಟೆಗಳು ನರಕಯಾತನೆಯನ್ನು ಉಂಟುಮಾಡುತ್ತಿದ್ದರೂ
ಗಳನ್ನು ಹೇಗೋ ಸಹಿಸಿಕೊಳ್ಳುತ್ತಿದ್ದಳು. ಗಂಡನನ್ನು
ರಿಸಿ ಪ್ರಯೋಜನವಿಲ್ಲವೆಂದು ಅವಳಿಗೆ ಅರಿವಾಗಿತ್ತು.
ರ ವಿಚಾರ ದೃಷ್ಟಿಯಲ್ಲಿ ಬದಲಾವಣೆ ಮಾಡಲು ಸಾಧ್ಯವಿಲ್ಲ
ಬುದೂ ತಿಳಿದಿತ್ತು. ಅವರಲ್ಲಿ ಕಾಮಾತುರತೆ ಇತರ
ರುಷರಿಗಿಂತ ಅಧಿಕವಾಗಿತ್ತು. ಅತಿ ಕಾಮಿ ಆತ. ಇಂಥವನಿಗೆ
ಲಾವತಿಯಂತಹ ಮೃದು ಮನಸ್ಸಿನ, ಕೇವಲ ವಿಷಯ ಸುಖದಲ್ಲಿ
ಷ್ಟಾಗಿ ಆಸಕ್ತಿ ಇಲ್ಲದ ಹೆಂಡತಿ ದೊರೆತದ್ದು ಇಬ್ಬರ ಜೀವನದಲ್ಲಿ ತುಂಬ
ಂಗದ ಕೊರತೆ. ಲೀಲಾವತಿ ಕಪನೀಪತಿರಾಯರಿಂದ ಸುಖ ಅಪೇಕ್ಷಿಸದೆ
ದ್ದರೂ ಅವಳಿಂದ ಅವರು ಸುಖ ಅಪೇಕ್ಷಿಸುತ್ತಿದ್ದರು. ಇದರಲ್ಲಿ ಕೊರತೆ
ದಾಗ, ಲೀಲಾವತಿಯ ಮೇಲೆ ಅಸಮಾಧಾನವುಂಟಾಗಿ ಸಹಜವಾಗಿ
ಂತಿಯುಬೇಕಾಗಿದ್ದ ಸುಖವನ್ನು ಒರಟು ರೀತಿಯಲ್ಲಿ ದೊರಕಿಸಿಕೊಳ್ಳಲು
ಪ್ರಯತ್ನಿಸುತ್ತಿದ್ದರು. ಇದರಿಂದ ಅವರ ಮನಸ್ಸಿಗೆ, ದೇಹಕ್ಕೆ ಸಿಕ್ಕಬೇಕಾ
ದ್ದ ಶಾಂತಿ ಸಮಾಧಾನಗಳು ಸಿಗುತ್ತಿರಲಿಲ್ಲ. ಅವರು ಲೀಲಾವತಿ
ಯನ್ನು ಕಂಡರೆ ಕಾಲಕ್ರಮದಲ್ಲಿ ಸಿಡಿಗುಟ್ಟಲು ಆರಂಭವಾಗಿ, ಅವಳನ್ನು
ದ್ವೇಷಿಸಲು ಹಿಂದೆಗೆಯಲಿಲ್ಲ.

ಲೀಲಾವತಿಗೆ ತನ್ನ ಗಂಡನೊಡನೆ ಹೇಗೆ ವರ್ತಿಸಬೇಕೆಂಬುದೇ
ಒಂದು ಸಮಸ್ಯೆಯಾಯಿತು. ಅವರನ್ನು ಅರ್ಥಮಾಡಿಕೊಳ್ಳುವುದರಲ್ಲಿ
ಅತ್ತಿಗೆಯವಳು ಲೀಲಾವತಿಗೆ ಎಷ್ಟೋ ಸಹಕಾರಿಯಾಗಿದ್ದಳು. ಲೀಲಾವತಿ
ಅತ್ತಿಗೆಯವರೊಂದಿಗೆ ಇದ್ದ ಕಪನೀಪತಿರಾಯರ ಸಂಬಂಧವನ್ನು ಆಕ್ಷೇಪಿ
ಸುತ್ತಿರಲಿಲ್ಲವಾಗಿ ಅವಳ ದೃಷ್ಟಿಯಲ್ಲಿ ಲೀಲಾವತಿ ಒಳ್ಳೆಯವಳಾಗಿ ಕಾಣಿಸಿ
ಕೊಂಡಿದ್ದಳು. ಅವಳೇ ಲೀಲಾವತಿಗೆ ಕಪನೀಪತಿರಾಯರ ಕೆಲವ

ವಿಪರೀತ ವರ್ತನೆಗೆ ಸರಿಯಾದ ವಿವರಣೆ ಕೊಟ್ಟು ಅವರ ಸ್ವಭಾವ ಪರಿಚಯಮಾಡಿಕೊಟ್ಟು ಅವರಿಬ್ಬರ ದಾಂಪತ್ಯ ಜೀವನದಲ್ಲಿ ಹೆಚ್ಚಿನ ಘರ್ಷಣೆ ಇಲ್ಲದಂತೆ ಮಾಡಲು ಪ್ರಯತ್ನಿಸಿದಳು. ಅವಳು ತಿಳಿಸಿಕೊಟ್ಟಿದ್ದ ವಿಷಯಗಳಲ್ಲಿ ಕಪನೀಪತಿರಾಯರು ಅಸಾಧ್ಯವಾದ ಕಾಮಿ, ಅವರು ಬರವಣಿಗೆಯಲ್ಲಿ ಮೈಮರೆತಿರುವಾಗ ಅವರನ್ನು ಎಚ್ಚರಗೊಳಿಸಬಾರದು, ಅವರು ಮಾಡುವ ಶೃಂಗಾರ ಚೇಷ್ಟೆಗಳು ಎಷ್ಟೇ ಅಸಹಜವಾಗಿ ಅಸಹ್ಯವಾಗಿದ್ದರೂ ಅವುಗಳನ್ನು ಪ್ರತಿಭಟಿಸಬಾರದು, ಈ ಬಗ್ಗೆ ಅವರನ್ನು ಕೆಣಕಬಾರದು. ಇವುಗಳಿಗಿಂತ ಪ್ರಮುಖವಾದ ಅಂಶ—ಕಪನೀಪತಿರಾಯರು ಮೆಟ್ರೊಪಾಲಿಟನ್ ಕ್ಲಬ್ಬಿಗೆ ಹೋಗಿಬಂದ ದಿನ ಅವರೊಂದಿಗೆ ಬಹಳ ಎಚ್ಚರಿಕೆಯಿಂದ ಇರಬೇಕು. ಅವರು ಹೇಳಿದುದಕ್ಕೆ ಎದುರು ಜವಾಬು ಕೊಡಬಾರದು. ಅವರು ಹೇಳಿದಂತೆ ಕೇಳಿ ಬಿಡಬೇಕು. ಅವರೊಂದಿಗೆ ಮಾತು ಬೆಳೆಸಲು ಹೋಗಬಾರದು. ಇದೇ ಬಗೆಯ ಅನೇಕ ಸೂಕ್ಷ್ಮಗಳನ್ನು ತಿಳಿಸಿಕೊಟ್ಟಿದ್ದಳು. ಇಷ್ಟಾದರೂ ಕಪನೀಪತಿರಾಯರು ಅವಳ ಭಾಗಕ್ಕೆ ಅರ್ಥಮಾಡಿಕೊಳ್ಳಲಾಗದ ವ್ಯಕ್ತಿಯಾಗಿಯೇ ಉಳಿದರು.

ಲೀಲಾವತಿಗೆ ಮೊದಲು ಮೊದಲು ಅವರ ವಿಪರೀತ ನಡವಳಿಕೆಗೆ ಹೊಂದಿಕೊಂಡು ಹೋಗುವುದು ಕಷ್ಟವಾಯಿತು. ಮಾತು ಮಾತಿಗೆ ಅವರೊಂದಿಗೆ ಜಗಳ ಕಾಯುವ ಪ್ರಸಂಗ ಬರುತ್ತಿತ್ತು. ಆದರೆ ಇವುಗಳನ್ನು ಕಪನೀಪತಿರಾಯರೇ ಜಾಣ್ಮೆಯಿಂದ ಪರಿಹರಿಸುತ್ತಿದ್ದರು. ಆದರೂ ತನ್ನ ಹಾಗೂ ಕಪನೀಪತಿರಾಯರ ವಿಚಾರ ಅನೇಕ ವಿಷಯಗಳಲ್ಲಿ ಪರಸ್ಪರ ವಿರೋಧವೆಂದು ಅವರಿಬ್ಬರಿಗೂ ತಿಳಿದಿತ್ತು. ಹೆಣ್ಣಿನ ವಿಷಯವಾಗಿ ಅವರಿಗಿದ್ದ ಸಂಕುಚಿತ ದೃಷ್ಟಿಯನ್ನು ಕೇಳಿದಾಗ ಲೀಲಾವತಿ ಕೆರಳುತ್ತಿದ್ದಳು. ಕಪನೀಪತಿರಾಯರ ದೃಷ್ಟಿಯಲ್ಲಿ ಹೆಣ್ಣು ಜೀವನದ ನಂದನೋದ್ಯಾನದಲ್ಲಿ ಗಂಡಿನ ಭೋಗತೃಪ್ತಿಗಾಗಿ ಸೃಷ್ಟಿಯಾದ ಸುಂದರ ಕುಸುಮ—ಅವಳ ಎಲ್ಲ ಉತ್ಕರ್ಷ ಗಂಡಿನ ಭೋಗತೃಪ್ತಿಗೆ ಮುಡಿಪಾದುದು. ಅವರಿಗೆ ಸಮಾಜ ಭೀತಿಯಾಗಲೀ, ವೈಯಕ್ತಿಕ ಲೈಂಗಿಕ ಜೀವನದಲ್ಲಿ ಒಂದು ಕಟ್ಟು ನಿಟ್ಟಿರಬೇಕೆಂಬ ನಿಯಮವಾಗಲಿ ತಿಳಿಯದ ಸಂಗತಿಯಾಗಿತ್ತು.

ಅವುಗಳ ಬಗ್ಗೆ ಭೀತರಾಗುವುದು ಮನಸ್ಸಿನ ದೌರ್ಬಲ್ಯದ ಚಿಹ್ನೆಯೇ ಎಂದು ಅವರ ಭಾವನೆ. ಅಂತಲೇ ತಮ್ಮ ಕಾಮ ಜೀವನದಲ್ಲಿ ಅವರು ಯಾವ ಅಂಕೆ ಅಂಕುಶವಿಲ್ಲದ ಮದಿಸಿದ ಸಲಗನಂತೆ ಇದ್ದರು. ಅವರು ಅನೇಕ ದಿನ ಕುಡಿದು ಬಂದು, ಕೃತಕ ಕಾಮೋದ್ದೀಪಕ ಆಹಾರ ಪಾನೀಯಗಳಿಂದ ಉದ್ರಿಕ್ತರಾಗಿ ಲೀಲಾವತಿಯ ಮೇಲೆ ಬೀಳಲು ಬರುತ್ತಿದ್ದರು. ಅವರ ವಿಕಾರವಾದ ಮುಖ, ಬಾಯಿಂದ ಬರುವ ದುರ್ವಾಸನೆ, ಇವುಗಳನ್ನು ನೋಡಿ ಅವಳ ಮೈ ಜುಂ ಎನ್ನುತ್ತಿತ್ತು. ದುರ್ವಾಸನೆಯನ್ನು ಸಹಿಸಿಕೊಳ್ಳಲಾಗದೆ ಅವಳಿಗೆ ಉಸಿರು ಕಟ್ಟಿದಂತೆ ಆಗಿ, ತಲೆ ತಿರುಗುತ್ತಿತ್ತು. ಅವರ ಕೈಗೆ ಸಿಕ್ಕಿ ನರಳುವುದಕ್ಕಿಂತಲೂ ಆ ಹೊತ್ತಿನಲ್ಲಿ ಅವರ ಕಣ್ಣಿಗೆ ಬೀಳದಂತೆ ಇರಲು ಪ್ರಯತ್ನಿಸುತ್ತಿದ್ದಳು. ಅವರು ಕುಡಿದು ಬಂದಾಗ ಅವರನ್ನು ಸಮಾಧಾನಮಾಡಿ ಸಂತೈಸಲು ಲೀಲಾವತಿ ತಾನು ಹೋಗುವ ಬದಲು ಅವರೊಡನೆ ಸಲಿಗೆಯಿಂದ ಇದ್ದ ಅಡಿಗೆಯವಳನ್ನೇ ಕಳುಹಿಸಿಕೊಡುತ್ತಿದ್ದಳು. ಕುಡಿದು ಬಂದ ಹೊತ್ತಿನಲ್ಲಿ ಕಪನೀಪತಿರಾಯರಿಗೆ ಹೆಂಡತಿಯೇ ಬೇಕಿರಲಿಲ್ಲ. ಯಾವ ಹೆಣ್ಣಾದರೂ ಸರಿ!

ಅಂತರಂಗ ಜೀವನದಲ್ಲಿ ಕಪನೀಪತಿರಾಯರು ಇಷ್ಟು ವಿಪರೀತವಾಗಿ ಅಸಭ್ಯವಾಗಿ ವರ್ತಿಸಿದರೂ ಬಹಿರಂಗ ಜೀವನದಲ್ಲಿ ಅವರು ಸಭ್ಯರೇ, ಎಲ್ಲರಿಂದ ಸನ್ಮಾನಿತರೇ. ಅವರಿಗೆ ಕಾಲೇಜಿನಲ್ಲೂ ಕಾಲೇಜಿನ ಹೊರಗೂ ಅಸೂಯೆ ಪಡುವಂತಹ ಕೀರ್ತಿ ಗೌರವಗಳು ಇದ್ದುವು. ಅವರು ಅಧಿಕಾರ ವಲಯದಲ್ಲಿ ತುಂಬಾ ವರ್ಚಸ್ಸಿದ್ದ ವ್ಯಕ್ತಿಯಾಗಿದ್ದರು. ಸಾರ್ವಜನಿಕ ಜೀವನದಲ್ಲಿ ಯಾವ ಸಮಾರಂಭವಿರಲಿ ಅವರಿಗೆ ಕರೆಯೋಲೆ ಇದ್ದೇ ಇರುತ್ತಿತ್ತು. ಅವರು ಹತ್ತು ಜನಕ್ಕೆ ಬೇಕಾದ ವ್ಯಕ್ತಿಯಾಗಿ, ಹತ್ತು ಜನದೊಡನೆ ಕಲೆತು ಎಲ್ಲರ ಸನ್ಮಾನಕ್ಕೆ ಪಾತ್ರರಾಗಿದ್ದ ಗಣನೀಯ ವ್ಯಕ್ತಿಯಾಗಿದ್ದರು. ಇಂಥವರು ಲೀಲಾವತಿಯ ಭಾಗಕ್ಕೆ ತುಚ್ಛ ವ್ಯಕ್ತಿಯಾಗಿದ್ದರೆಂದರೆ ಅದು ಅವಳ ದೌರ್ಭಾಗ್ಯ.

ಕಪನೀಪತಿರಾಯರು ಲೀಲಾವತಿಯನ್ನು ತನ್ನೊಡನೆ ನಗರದಲ್ಲಿ ನಡೆಯುವ ಎಲ್ಲ ಸಮಾರಂಭ, ಸಂತೋಷ ಕೂಟಗಳಿಗೆ ಬರಲು ಆಗ್ರಹಪಡಿಸು

ತ್ತಿದ್ದರು. ಅನೇಕ ಕೂಟಗಳಲ್ಲಿ, ದೊಡ್ಡ ದೊಡ್ಡ ಅಧಿಕಾರಿಗಳು ಸೇರಿದಾಗ ಅಲ್ಲಿ ಮದಿರ ದೇವತೆಯು ಪ್ರತ್ಯಕ್ಷಳಾಗುತ್ತಿದ್ದಳು. ಲೀಲಾವತಿಗೆ ಹತ್ತು ಜನರೊಡನೆ ಬೆರೆಯಲು ಆಸೆ ಇದ್ದರೂ ಕಪನೀಪತಿರಾಯರ ಹೆಂಡತಿಯಾಗಿ, ಅವರೊಡನೆ ಸಮಾರಂಭ, ಸತ್ಕಾರ ಕೂಟಗಳಿಗೆ ಹೋಗಲು ಒಂದು ಬಗೆಯ ಹೀನಾಯ. ಅಲ್ಲದೆ ಗರ್ಭಿಣಿಯಾದ ತಾನು ಹೊರಗೆ ತಲೆಯಿಡಲು ಒಂದು ಬಗೆಯ ಸಂಕೋಚ, ಅವಮಾನವಾಗುತ್ತಿತ್ತು. ಅವಳು ಕಾಲೇಜಿಗೆ ಹೋಗುತ್ತಿದ್ದುದಾದರೂ ಮನೆಯಲ್ಲಿ ಮಾಡಲು ಬೇರೆ ಬದುಕಿಲ್ಲದೆ ತನ್ನ ವಿರಾಮವನ್ನು ಕಳೆಯಲಾಗದೆ. ಅವಳು ಕಾಲೇಜಿಗೆ ಹೋದರೆ ಇನ್ನೆಲ್ಲ ಒಂದೆರಡು ತಿಂಗಳು ಹೋಗಬಹುದು. ಲೀಲಾವತಿಗೆ ಆರು ತಿಂಗಳು ತುಂಬಿತೆಂದರೆ ಅವಳಿಗೆ ಮನೆಯೇ ಸಮಸ್ತ ಪ್ರಪಂಚ! ವಿಶ್ವನಾಥರಾಯರು, ಸುಮಿತ್ರೆ ಅದೇ ಅಭಿಪ್ರಾಯವನ್ನು ಪಟ್ಟಿದ್ದರು. ಅಲ್ಲಿಯ ತನಕ ಹೇಗಾದರೂ ಗಂಡನ ಮನೆಯಲ್ಲಿ ಕಾಲ ಹಾಕಿ, ಅನಂತರ ಹೆರಿಗೆಯ ನೆವದಲ್ಲಿ ತಂದೆಯ ಮನೆಯನ್ನು ಸೇರಿಕೊಳ್ಳಬೇಕೆಂದೇ ಅವಳ ಆಸೆಯಾಗಿತ್ತು. ಒಮ್ಮೆ ತಂದೆಯ ಮನೆಯನ್ನು ಸೇರಿಕೊಂಡಳೆಂದರೆ ತನಗೆ ಬಂದಿದ್ದ ಶಾಪದಿಂದ ಬಿಡುಗಡೆ. ತಾನು ಮೈ ಕಳೆದುಕೊಂಡು ಮೊದಲಿನಂತೆಯೇ ಆದರೆ ಅಲ್ಲಿಗೆ ಲೀಲಾವತಿಗೆ ಪುನರ್ಜನ್ಮ ಬಂದಂತೆ. ಅನಂತರ ಅವಳಿಗೆ ಗಂಡನ ಹಂಗೂ ಬೇಡ--ಯಾರ ಹಂಗೂ ಬೇಡ. ಅಲ್ಲಿಯ ತನಕ ಲೀಲಾವತಿ ತನಗೆ ಇಷ್ಟವಿರಲಿ, ಇಲ್ಲದೆ ಇರಲಿ, ಗಂಡನ ಮನೆಯಲ್ಲಿ ಇರಲೇಬೇಕಾಗಿತ್ತು. ಯಾಕೆಂದರೆ ಮದುವೆಯಾಗದೆ ತಾನು ತಾಯಿಯಾದರೆ ಲೋಕಾಪವಾದಕ್ಕೆ ಗುರಿಯಾಗಿ, ತನ್ನ ಹಾಗೂ ತನ್ನ ತಂದೆಯ ಗೌರವಕ್ಕೆ ಧಕ್ಕೆ ಬರುವುದೆಂಬ, ಹತ್ತು ಜನರೊಡನೆ ತಲೆತಗ್ಗಿಸಿ ನಡೆಯಬೇಕಾಗಿ ಬರುವುದೆಂಬ ಸಮಾಜ ಭೀತಿಗೆ ಹೆದರಿ ಲೀಲಾವತಿ ಕಪನೀಪತಿರಾಯರನ್ನು ಮದುವೆಯಾಗಿದ್ದಳು. ಮನೆಯ ಹಿರಿಯರು ಕಟ್ಟಿಯ ಕಲ್ಲನ್ನು ಕಟ್ಟಿಗೆ ಸೇರಿಸಲು ಪ್ರಯತ್ನಿಸಿದ್ದು ಇದೇ ಕಾರಣಕ್ಕಾಗಿ. ಆದರೆ ಈ ಕಲ್ಲು ಕೂಡಿಸುವ ಪ್ರಯತ್ನದಲ್ಲಿ ಕಟ್ಟಿಗೂ ಕಲ್ಲಿಗೂ ಸರಿಯಾದ ಹೊಂದಾಣಿಕೆ ಇಲ್ಲದೆ ಎರಡೂ ಕೂಡಿಕೊಳ್ಳದೆ ತಮ್ಮ ದಾರಿಯನ್ನೇ ಹಿಡಿಯುವುದೆಂದು ಅವರಾರೂ

ತಿಳಿಯದೆ ಹೋಗಿದ್ದರು. ಕಪನೀಪತಿರಾಯರನ್ನು ಮದುವೆಯಾಗಲು ಒಪ್ಪಿದಾಗ, ಲೀಲಾವತಿಗೆ ತನ್ನ ಸುಖ ಸಂತೋಷಗಳ ಗೋರಿ ತನ್ನ ಮದುವೆ, ಎಂದು ಸ್ಪಷ್ಟವಾಗಿ ತಿಳಿದಿದ್ದರೂ ನಿರ್ವಾಹವಿಲ್ಲದೆ ಮದುವೆಗೆ ಒಪ್ಪಿದ್ದಳು. ಅವಳು ಆ ತನಕ ಹಿಡಿದಿದ್ದ ವಿಚಿತ್ರ ಆದರ್ಶ—ಅದು ಅವಳ ಜೀವನವನ್ನೇ ಹಾಳುಮಾಡಿತ್ತು. ಎಲ್ಲೆಡೆಯಲ್ಲೂ ತಪ್ಪು ದಾರಿಯನ್ನೇ ತುಳಿಸಿತ್ತು. ಅವಳ ಜೀವನದ ನೌಕೆ ಅವಳ ವಿಚಿತ್ರ ಮನೋಭಾವದಿಂದಾಗಿ ಬಾರಿ ಬಾರಿಗೂ ಬಂಡೆಗಳಿಗೆ ಅಪ್ಪಳಿಸಲ್ಪಟ್ಟಿತ್ತು. ಅವಳನ್ನು ಪ್ರಾಣಕ್ಕಿಂತಲೂ ಅಧಿಕವಾಗಿ ಪ್ರೀತಿಸಿದ್ದ ದಿವಾಕರನನ್ನು ಮದುವೆಯಾಗದಂತೆ ಅವಳ ವಿಚಿತ್ರ ಆದರ್ಶ ಅಡ್ಡ ಬಂದಿತ್ತು; ತನ್ನ ವಿಷಯದಲ್ಲಿ ಸೋದರಿ ವಾತ್ಸಲ್ಯ ತೋರಿಸುತ್ತ ಬಂದ ಸದಾಶಿವನನ್ನು ಅನ್ಯಥಾ ಭಾವಿಸುವಂತೆ ಮಾಡಿತ್ತು; ತನ್ನನ್ನು ಹೃದಯ ಸಿಂಹಾಸನದಲ್ಲಿ ದೇವಿಯಾಗಿ ಕೂಡಿಸಿ ಪೂಜಿಸಲು ಸಿದ್ಧನಾಗಿದ್ದ ಸುರೇಂದ್ರನನ್ನು ಮದುವೆಯಾಗಲು ಇಷ್ಟಪಟ್ಟಾಗ ಅವನನ್ನು ಮದುವೆಯಾಗದಂತೆ ಮಾಡಿತ್ತು; ಹೀಗೆ ಅವಳ ಜೀವನ ನೌಕೆ ಬಾರಿ ಬಾರಿ ಪರಾಜಯಹೊಂದಿತ್ತು. ಅದು ಒಂದು ದಿನ ನೀರ ಪಾಲಾಗುವುದೇ ದಿಟ ಎಂದುಕೊಂಡಿದ್ದಳು ಲೀಲಾವತಿ. ಹೀಗೆ ಲೀಲಾವತಿ ತನ್ನ ಸೂಕ್ಷ್ಮ ಭಾವನೆಗಳನ್ನು ಮೊಂಡುಮಾಡಿಕೊಂಡು, ತನ್ನ ಅಂತರಂಗದ ದುಃಖವನ್ನು ಯಾರ ಮುಂದೆಯೂ ತೋಡಿಕೊಳ್ಳದೆ ನಿರ್ಜೀವ ವ್ಯಕ್ತಿಯಂತೆ, ತಾನು ಹೊತ್ತುಕೊಂಡಿದ್ದ ಹೊರೆಯಿಂದ ಬಿಡುಗಡೆಹೊಂದುವ ದಿನಕ್ಕಾಗಿ ಕಾಯುತ್ತಿದ್ದಳು. ತನ್ನ ಮನಸ್ಸಿನ ಸುಖದುಃಖಗಳ ಒಂದು ಸಂಗತಿಯನ್ನು ಅವಳು ಯಾರ ಕಿವಿಗೂ ಹಾಕುತ್ತಿರಲಿಲ್ಲ. ಮನಸ್ಸಿನ ಭಾವನೆಗಳನ್ನು ಇದ್ದಂತೆ ಹೊರಹಾಕುತ್ತಿದ್ದ ಲೀಲಾವತಿ ಏಕೋ ಈ ವಿಷಯದಲ್ಲಿ ಯಾರಿಗೂ ಪ್ರಕಾರಪೆತ್ತಿರಲಿಲ್ಲ. ಅವಳ ಹೆದರಿಕೆ ಎಂದರೆ, ತಾನು ದಾಂಪತ್ಯ ಜೀವನದಲ್ಲಿ ಅಸುಖಿಯಾಗಿರುವೆನೆಂಬ ಸಂಗತಿಯನ್ನು ತನ್ನ ತಂದೆ ತಿಳಿದರೆ ಇದೇ ಅವರ ಕೊರಗಿಗೆ ಕಾರಣವಾಗಿ ಅವರ ಹೃದ್ರೋಗ ಬಲಿಯುವುದೆಂಬ ಶಂಕೆ ಇದ್ದುದರಿಂದ ಅವರೊಡನೆ ಇರುವಾಗ ಮಾತನಾಡುವಾಗಲೆಲ್ಲ ತಾನು ಸುಖವಾಗಿರುವಂತೆಯೇ ನಟಿಸುತ್ತಿದ್ದಳು. ಆದರೆ ಲೀಲಾವತಿ ತಾವು ಊಹಿಸಿ

ದಷ್ಟು ಸುಖವಾಗಿಲ್ಲವೆಂದು ವಿಶ್ವನಾಥರಾಯರಿಗೆ ಗೊತ್ತಾಗದೆ ಹೋಗಲಿಲ್ಲ. ಆದರೆ ಅವರು ಈ ಬಗ್ಗೆ ಏನು ಮಾಡಲೂ ನಿಸ್ಸಹಾಯರಾಗಿದ್ದರು. ಲೀಲಾವತಿ ಅಂತರಂಗದಲ್ಲಿ ಯಾವುದೋ ಚಿಂತೆಗೆ ಎಡೆಕೊಟ್ಟು ದಿನದಿನಕ್ಕೆ ಸವೆದು ಹೋಗುತ್ತಿರುವ ಸಂಗತಿ ಸುಮಿತ್ರೆಯ ಗಮನವನ್ನು ಸೆಳೆಯದೆ ಇರಲಿಲ್ಲ. ಅವಳು ಒಂದು ದಿನ ಪ್ರಶ್ನಿಸಿಯೇ ಬಿಟ್ಟಳು.

"ಲೀಲಾ, ನೀನು ಇಲ್ಲಿ ಇದ್ದಾಗ ಎಷ್ಟು ಚೆನ್ನಾಗಿದ್ದಿ? ಈಚೆಗೆ ಮದುವೆಯಾದ ಮೇಲೆ ಯಾಕೆ ಒಣಗಿ ಹೋಗಿದ್ದಿ! ಊಟ ತಿಂಡಿಗಳು ಸರಿಹೋಗಲಿಲ್ಲವೆ?"

"ನನಗೆ ಅಲ್ಲಿ ಯಾವುದಕ್ಕೂ ಕೊರತೆ ಇಲ್ಲಮ್ಮ."

"ನಿನಗೆ ಇರುವ ಕೊರತೆ ಎಲ್ಲ ಒಂದೇ. ಅದು ಮನಶ್ಶಾಂತಿ". ಈ ಮಾತು ಅಕ್ಷರಶಃ ನಿಜವೆನಿಸಿತು ಲೀಲಾವತಿಗೆ.

"ನಿನಗೆ ಹೇಗೆ ಗೊತ್ತಾಯಿತು?"

"ನಿನ್ನನ್ನು ನೋಡಿದರೆ ಗೊತ್ತಾಗದೆ? ತುಂಬಿದ ಬಸುರಿ ಇರುವುದು ಹೀಗೆಯೆ? ನೀನು ಏನೋ ದಾರುಣವಾದ ಮನೋಕ್ಲೇಶದಿಂದ ಬಡವಾಗುತ್ತಿದ್ದಿ. ಅದು ಏನೆಂದು ಹೇಳಲು ನನ್ನಲ್ಲಿ ನಿನಗೆ ಸಂಕೋಚವೆ?" ಎಂದಳು ಕಳಕಳಿಯಿಂದ.

"ಹೇಳಿಕೊಳ್ಳುವಂತಹ ಚಿಂತೆ ಇದ್ದರೆ ಅದನ್ನು ನಿನ್ನಲ್ಲಿ ಹೇಳದೆ ಮತ್ತೆ ಯಾರಲ್ಲಿ ಹೇಳಿಕೊಳ್ಳಲಿ ಸುಮ್ಮಿ?" ಎಂದಳು.

ಈ ಮಾತು ಹೇಳುವಾಗ ಅವಳ ಗಂಟಲು ಕಟ್ಟಿತ್ತು.

ಸುಮಿತ್ರೆ ಹೇಳಿದಳು:

"ಬಹುಶಃ ನಿನಗೆ ಕಾಲೇಜಿನ ಕೆಲಸ ಹೆಚ್ಚೆಂದು ಕಾಣುತ್ತೆ. ಕೆಲಸ ಹೆಚ್ಚಾದರೆ ಕಾಲೇಜಿಗೆ ರಜ ಬರೆದು ಬಿಡು. ಸುಮ್ಮನೆ ಏಕೆ ದಣಿಯಬೇಕು?"

"ನಿಜ ಹೇಳುವುದಾದರೆ ನಾನು ಇಷ್ಟರಮಟ್ಟಿಗೆ ಜೀವನೋತ್ಸಾಹದಿಂದ ಇರುವುದು ಕಾಲೇಜಿಗೆ ಹೋಗಿ ಬರುತ್ತಿರುವುದರಿಂದಲೇ. ಆ ಹುಡುಗಿಯರ ಜತೆಯಲ್ಲಿ ನಾನು ಕಳೆಯುವ ಆ ನಾಲ್ಕಾರು ತಾಸುಗಳೇ ನನ್ನ ಭಾಗದ

ದಷನಿಮಿಷ ನನ್ನ ಮನೆಯ ಸಾವಿರ ಸಂಕಟಗಳನ್ನು ಮರೆಯಲು ನನಗಿರುವ ಒಂದೇ ಮಾರ್ಗವೆಂದರೆ ಕಾಲೇಜು ! ”

“ನಿನ್ನ ಮನೆಯಲ್ಲಿ ಇರುವವರೆಲ್ಲ ನಾಲ್ಕು ಮಂದಿ: ನೀನು, ನಿನ್ನ ಗಂಡ, ಅಡಿಗೆಯವರು ಜವಾನ. ಇಂಥವರಲ್ಲಿ ನಿನಗಿರುವ ಕಷ್ಟವಾದರೂ ಏನು ? ”

“ ಅದೇ ಎಲ್ಲರೂ ಕೇಳುವ ಪ್ರಶ್ನೆ ನನ್ನ ಕಷ್ಟವೇನೆಂಬುದು ನನಗೇ ಗೊತ್ತು. ನನಗೆ ಆ ಮನೆ ಎಂದರೆ ಒಂದು ನರಕ ಬೇರೆಯಲ್ಲ, ಅದು ಬೇರೆಯಲ್ಲ.”

“ ನಿನ್ನ ಗಂಡ ನಿನ್ನನ್ನು ಬಹಳ ಪ್ರೀತಿಯಿಂದ ನೋಡುತ್ತಾರಂತೆ. ನಿನಗೆ ಅಲ್ಲಿ ಯಾವುದಕ್ಕೂ ಕೊರತೆಯಾಗದಂತೆ ಇಟ್ಟುಕೊಂಡಿದ್ದಾರಂತೆ.”

“ ಹೌದು, ನನ್ನನ್ನು ಅವರು ಬಹಳ ಪ್ರೀತಿಯಿಂದಲೇ ನೋಡಿಕೊಳ್ಳುತ್ತಾರೆ. ಅವರ ಪ್ರೀತಿಯೇ ನನಗೆ ಮುಳುವಾಗಿರುವುದು. ನನಗೆ ಅವರ ಪ್ರೀತಿಯೂ ಸಾಕು! ಅವರ ಪೀಡೆಯೂ ಸಾಕು ” ಎಂದಳು ಖಿನ್ನಳಾಗಿ.

“ ಯಾಕೆ ಅವರು ತಿಳಿದವರು. ನಿನ್ನನ್ನು ಚೆನ್ನಾಗಿ ನಡಸಿಕೊಳ್ಳುವುದಿಲ್ಲವೆ ? ”

“ ಚೆನ್ನಾಗಿಯೇ ನಡಸಿಕೊಂಡಿದ್ದಾರೆ. ಸಾವಿನ ಹಾದಿಯಲ್ಲಿ ಹಚ್ಚಿದ್ದಾರೆ. ಅಷ್ಟೆ! ” ಎಂದು ತನ್ನ ದುಃಖ ತಡೆಯಲಾರದೆ ಕಣ್ಣೀರು ತಂದಳು. ಅವಳನ್ನು ಸುಮಿತ್ರೆಯೇ ಸಮಾಧಾನಮಾಡಬೇಕಾಯಿತು. ಲೀಲಾವತಿಗೆ ಇನ್ನು ಸುಮ್ಮನೆ ಇರಲಾಗಲಿಲ್ಲ. ಅವಳು ತಾನು ಗಂಡನ ಮನೆ ಸೇರಿದಲಾಗಾಯಿತು, ಈ ತನಕ ಅನುಭವಿಸಿದ ಎಲ್ಲ ನರಕಯಾತನೆಯನ್ನು ಚಾಚೂ ಬಿಡದೆ ಸುಮಿತ್ರೆಗೆ ಹೇಳಿದಳು. ಅಂತರಂಗದ ಗೆಳತಿಯಾಗಿದ್ದ ಸುಮಿತ್ರೆಯೊಂದಿಗೆ ತನ್ನ ದಾಂಪತ್ಯ ಜೀವನದ ಕಷ್ಟಸುಖಗಳನ್ನು ಹೇಳಿಕೊಳ್ಳಲು ಸಂಕೋಚವಾಗಲಿಲ್ಲ. ಅವಳ ಬಾಯಿಂದ ಎಲ್ಲ ಕಥೆಯನ್ನು ಕೇಳಿ ಸುಮಿತ್ರೆ ಮಮ್ಮಲ ಮರುಗಿದಳು. ಅವಳಿಗೆ ಆ ದಿನ ಬೃಂದಾವನದಲ್ಲಿ ಲೀಲಾವತಿ ಹೇಳಿದ್ದ ಮಾತುಗಳೆಲ್ಲ ನೆನಪಾದುವು. ಅದರ ಜತೆಯಲ್ಲೇ ಲೀಲಾವತಿಯ ಜೀವನದಲ್ಲಿ ನಡೆದು ಹೋದ ಅನೇಕ ಘಟನೆಗಳು ನೆನಪಾದುವು. ಕೇವಲ ಎರಡು ಮೂರು ವರ್ಷಗಳಲ್ಲಿ ಲೀಲಾವತಿಯ

ಜೀವನದಲ್ಲಿ ಎಂಥ ಮಹತ್ತರವಾದ ಬದಲಾವಣೆಗಳು ಆಗಿಹೋಗಿದ್ದು
ಆ ದಿನ ಬೃಂದಾವನದಲ್ಲಿ ಹೇಳಿದ್ದ ಎಲ್ಲ ಮಾತುಗಳ ಸತ್ಯಾಸತ್ಯತೆಗ
ತನ್ನ ಜೀವನದಲ್ಲಿಯೇ ಒರೆಹಚ್ಚಿ ನೋಡುವ ಅಗ್ನಿಪರೀಕ್ಷೆ ಲೀಲಾವ
ಪಾಲಿಗೆ ಬಂದಿತ್ತು. ತನ್ನ ಜೀವನ ನಾಟಕದಲ್ಲಿ ಅವಳೇ ಪಾತ್ರಧ
ಅವಳೇ ಪ್ರೇಕ್ಷಕಳು. ಈ ನಾಟಕದ ಅಂತ್ಯ ಸುಖಾಂತವೋ ದುಃಖಾಂತ
ಎಂಬುದನ್ನು ತಿಳಿಯಲು ಸುಮಿತ್ರೆ ಹಾತೊರೆದಳು. ಅವಳ ಹೃ
ಅವಳ ಗೆಳತಿಗಾಗಿ ದೇವರನ್ನು ಪ್ರಾರ್ಥಿಸಿತು. ಗೆಳತಿಯ ಜೀವನ
ಪ್ರದವಾಗಲೆಂದು ಹಾರೈಸಿತು.

ಸುಮಿತ್ರೆ ಲೀಲಾವತಿಯ ಕರುಣ ಕಥೆಯನ್ನೆಲ್ಲ ಕೇಳಿದ ಮೇ
ಲೀಲಾವತಿಗೆ ಏನು ಹೇಳಬೇಕೆಂಬುದೇ ತಿಳಿಯದೆ ಹೋಯಿತು. ಆದ
ಡಾಕ್ಟರಾದ ಅವಳಿಗೆ ಲೀಲಾವತಿಯ ದೇಹದ ಕಡೆ ಮನಸ್ಸು ಹೋ
ಅವಳು ಹೇಳಿದ್ದಳು.

"ಲೀಲಾ, ನಾನು ಹೀಗೆ ಹೇಳುವೆನೆಂದು ನೀನು ಅನ್ಯಥಾ ತಿ
ಬೇಡ. ನೀನು ನಿನ್ನ ದೇಹಕ್ಕೆ ಹೊರೆಸಿರುವ ಹೊರೆಯೇ ಸಾಕಾ
ಇದಕ್ಕೆ ಇನ್ನಿಷ್ಟು ಹೊರೆಯನ್ನು ದಣಿವಿನ ರೂಪದಲ್ಲಿ ಸೇರಿಸಬೇಡ. ಅ
ಆದಷ್ಟು ಮಟ್ಟಿಗೆ ನೀನು ಗಂಡನಿಂದ ದೂರವಿರುವುದೇ ಲೇಸು. ನ
ಐದಾರು ತಿಂಗಳ ಬಸುರಿ ಎಂಬುದನ್ನು ಮರೆಯಬೇಡ...."

"ನನಗೂ ಅದು ತಿಳಿದಿದೆ ಸುಮ್ಮಿ. ಆದರೆ ನಾನು ಏನು ಮಾ
ಮಾಡಲಾದೀತು? ನನಗೆ ಅವುಗಳೊಂದೂ ಬೇಡವಾಗಿದ್ದರೂ ಆ ಮ
ಯಲ್ಲಿ ನನ್ನ ಪಾಡಿಗೆ ನಾನು ಇರುವ ಸ್ವಾತಂತ್ರ್ಯವಿಲ್ಲ!"

"ಯಾಕೆ ನೀನು ಗಂಡನ ಮನೆಯಲ್ಲಿ ಅಷ್ಟು ಅತಂತ್ರಳೆ?"

"ನನ್ನ ಸಂಗತಿ ನಿನಗೆ ತಿಳಿಯದು ಸುಮ್ಮಿ! ನನಗೆ ಅಲ್ಲಿ ಸ್ವಾತಂ
ಒಂದು ಬಿಟ್ಟು ಉಳಿದೆಲ್ಲ ಸೌಭಾಗ್ಯವಿದೆ."

"ಹಾಗಾದರೆ ನೀನೇಕೆ ಇಲ್ಲಿಗೆ ಬಂದುಬಿಡಬಾರದು. ಕಾಲೇ
ರಜಕ್ಕೆ ಬರೆದು ಬಿಟ್ಟು ನಮ್ಮೆಲ್ಲರೊಂದಿಗೆ ನಿಶ್ಚಿಂತೆಯಿಂದ ಇದ್ದುಬಿಡ
ಎಂದು ಸಲಹೆ ಮಾಡಿದಳು. ಈ ಸಲಹೆ ಲೀಲಾವತಿಗೆ ಸೂಕ್ತವ

ಕಂಡಿತು. ಅವಳು ಅದರಂತೆಯೇ ಮಾಡಲು ನಿಶ್ಚಯಿಸಿದಳು.

ಆ ದಿನ ರಾತ್ರಿ ಲೀಲಾವತಿ ಕಪನೀಪತಿರಾಯರೊಂದಿಗೆ ತಾನು ಕಾಲೇಜಿಗೆ ರಜ ತೆಗೆದುಕೊಂಡು ತಂದೆಯ ಮನೆಗೆ ಹೋಗುವ ಮಾತು ತೆಗೆದಳು.

"ಒಳ್ಳೆಯದು ಹೋಗಿ ಬಾ" ಎಂದರು.

"ನಾನು ಅಲ್ಲಿಗೆ ಹೋದ ಮೇಲೆ ಮತ್ತೆ ಇಲ್ಲಿಗೆ ಸದ್ಯಕ್ಕೆ ಬರುವುದಿಲ್ಲ."

"ಏನು ತಿಂಗಳಗಟ್ಟಲೆ ಅಲ್ಲಿಯೇ ಇರಬೇಕೆನ್ನುವೆಯಾ?"

"ಹೂಂ....ನನಗೆ ವಿಶ್ರಾಂತಿ ಬೇಕಾಗಿದೆ ಎಂದು ಸುಮಿತ್ರೆ ಹೇಳಿದಳು."

"ಅದಕ್ಕೇನು? ಇಲ್ಲೇ ಇದ್ದು ವಿಶ್ರಾಂತಿ ತೆಗೆದುಕೊಳ್ಳಬಹುದಲ್ಲ. ಇಲ್ಲಿ ನಿನಗೆ ಯಾವುದಕ್ಕೆ ಕೊರತೆ ಇದೆ?"

"ಹಾಗಲ್ಲ. ನಾನು ತಂದೆಯ ಮನೆಯಲ್ಲಿ ಇದ್ದರೆ ಏನಾದರೂ ಹೆಚ್ಚು ಕಡಿಮೆಯಾದರೆ ಅಲ್ಲಿ ಡಾಕ್ಟರು ಇದ್ದಾರೆ ನೋಡಿಕೊಳ್ಳಲು."

"ಈಗಲಿಂದಲೇ ನಿನಗೆ ಡಾಕ್ಟರ ಚಿಂತೆಯೆ?"

"ಯಾಕೆ ನನಗೆ ಈಗೆಷ್ಟು ತಿಂಗಳೆಂದು ಕೊಂಡಿದ್ದೀರಿ?"

"ನಾವು ಮದುವೆಯಾಗಿ ಮೂರು ತಿಂಗಳೂ ತೀರಿಲ್ಲ."

"ಹೌದು, ಮೂರು ತಿಂಗಳೂ ತುಂಬಿಲ್ಲ. ಆದರೆ ನಾನು ಆರು ತಿಂಗಳ ತಾಯಿ ಎಂಬುದನ್ನು ಮರೆಯಬೇಡಿ."

"ಆಗಲೇ ನಿನಗೆ ಆರು ತಿಂಗಳೆ?" ಲಜ್ಜಾಶೂನ್ಯರಾಗಿ ಪ್ರಶ್ನಿಸಿದರು. ಈ ಮಾತು ಕೇಳಿ ಲೀಲಾವತಿ ಕೆರಳಿದರೂ ಇದು ಕೆರಳುವ ಸಮಯವಲ್ಲ ವೆಂದು ಸುಮ್ಮನಾದಳು. ಅವಳಿಗೆ ಈಗ ಬೇಕಾದ್ದು ಗಂಡನ ಒಪ್ಪಿಗೆ. ಒಮ್ಮೆ ಒಪ್ಪಿಗೆ ಸಿಕ್ಕಿ ತಂದೆಯ ಮನೆಗೆ ಹೊರಟಳೆಂದರೆ ಮತ್ತೆ ಗಂಡನ ಮನೆಗೆ ಬರಬಾರದೆಂದೇ ಅವಳ ಆಸೆ. ಆದರೆ ಹೊರಡುವ ಗಳಿಗೆಯಲ್ಲಿ ಪರಸ್ಪರ ಕಚ್ಚಾಟ, ಜಗಳ ವೈಮನಸ್ಸಿನ ನಡುವೆ ಮನೆಯನ್ನು ಬಿಟ್ಟು ಹೊರಡಲು ಅವ ಳಿಗೆ ಮನಸ್ಸಿರಲಿಲ್ಲವೆಂದೇ ಲೋಕರೂಢಿಯಂತೆ ಗಂಡನ ಅನುಮತಿಯನ್ನು ಕೇಳಿದಳು. ಕಪನೀಪತಿರಾಯರು ಒಪ್ಪಿಗೆ ಕೊಡಲಿ, ಬಿಡಲಿ—ತಾನು ಮಾರನೆಯ ದಿನವೇ ತಂದೆಯ ಮನೆಗೆ ಹೊರಟುಬಿಡುವುದೇ ನಿಶ್ಚಯ

ವೆಂದು ಅವಳು ನಿರ್ಧರಿಸಿದ್ದಳು. ಆದರೂ ಅಷ್ಟೆಲ್ಲ ದುಡುಕುವುದಕ್ಕಿಂತ ಮುಂದೆ, ಸಮಾಧಾನವಾಗಿ ಬೀಳ್ಕೊಂಡು ಹೊರಡುವುದು ಶ್ರೇಯಸ್ಕರವೆಂದು ಅವಳು ಹಾಗೆ ಮಾತು ತೆಗೆದಿದ್ದಳು. ಆದರೆ ಕಪನೀಪತಿರಾಯರು ಇನ್ನೂ ತನ್ನನ್ನು ತಮ್ಮ ಮನೆಯಲ್ಲಿಯೇ ಇರಿಸಿಕೊಳ್ಳುವ ಆಸೆ ವ್ಯಕ್ತಪಡಿಸಿದ ಮೇಲೆ ಈ ಶನಿ ತನ್ನನ್ನು ಇಷ್ಟಕ್ಕೇ ಬಿಡುವುದಿಲ್ಲವೆಂದು ಅರಿತಳು. ಇನ್ನು ಹೆಚ್ಚು ಮಾತು ಬೆಳೆಸಿ ಪ್ರಯೋಜನವಿಲ್ಲವೆಂದು ಲೀಲಾವತಿ ಅಲ್ಲಿಂದ ಹೊರಟು ತನ್ನ ಅಭ್ಯಾಸದ ಕೋಣೆಗೆ ಬಂದು ಯಾವುದೋ ಪುಸ್ತಕ ಓದುತ್ತ ಕುಳಿತಳು. ಅವಳು ಓದುತ್ತಾ ಕುಳಿತು ಅರ್ಧ ಗಂಟೆ ಕಳೆದಿರಲಿಲ್ಲ. ಯಾರೋ ಬಂದು ಅವಳ ಭುಜಗಳನ್ನು ಹಿಡಿದು ನಿಂತಂತಾಯಿತು. ಲೀಲಾವತಿ ಹಿಂದಿರುಗಿ ನೋಡಿದಳು. ಎದುರಿಗೆ ರಾತ್ರಿ ಉಡಿಗೆಯಲ್ಲಿದ್ದ ಕಪನೀಪತಿರಾಯರು! ತಮ್ಮೊಡನೆ ಲೀಲಾವತಿ ಹೆಚ್ಚು ಮಾತನಾಡದೆ ಅಸಮಾಧಾನದಿಂದ ಹೊರಟು ಬಂದುಬಿಟ್ಟದ್ದನ್ನು ಸೂಕ್ಷ್ಮಮತಿಯ ಅವರಿಗೆ ತಿಳಿಯದೆ ಹೋಗಲಿಲ್ಲ. ಲೀಲಾವತಿ ಮರುದಿನ ಬೆಳಿಗ್ಗೆ ತಾನು ಒಪ್ಪಲಿ ಬಿಡಲಿ ಹೊರಟು ಹೋಗುವಳೆಂಬ ವಿಷಯ ಹೇಗೋ ತಿಳಿದುಹೋಗಿತ್ತು. ಲೀಲಾವತಿಯ ಮುಖಮುದ್ರೆ ಅವಳ ಮನೋನಿರ್ಧಾರವನ್ನು ವ್ಯಕ್ತಪಡಿಸಿತ್ತು. ಅವಳು ತನ್ನ ಮೇಲೆ ಸಿಟ್ಟುಮಾಡಿಕೊಂಡು ಮನೆಯಿಂದ ಹೊರಟು ಹೋದರೆ ತನ್ನ ಭಾಗಕ್ಕೆ ಲೀಲಾವತಿ ಎಂದೆಂದಿಗೂ ದಕ್ಕದೆ ಹೋದಾಳೆಂಬ ಹೆದರಿಕೆಯಾಗಿ ಅವಳನ್ನು ಸಮಾಧಾನಪಡಿಸಲೆಂದೇ ಅವರು ಮತ್ತೆ ಇಲ್ಲಿಗೆ ಬಂದುದು. ಅವರು ಬಂದವರೇ

"ಯಾಕೆ ಡಿಯರ್, ನನ್ನ ಮಾತು ಕೇಳಿ ಸಿಟ್ಟು ಬಂತೆ?" ಎಂದು ಪ್ರೀತಿಯಿಂದ ಕೇಳಿದರು.

"ನಿಮ್ಮ ಮಾತಿಗೆ ನಾನೇಕೆ ಸಿಟ್ಟುಮಾಡಲಿ?"

"ನೀನು ತಂದೆಯ ಮನೆಗೆ ಹೋಗುವ ಆಸೆ ವ್ಯಕ್ತಪಡಿಸಿದೆ. ನಾನು ಇಲ್ಲೇ ಇರಲು ಹೇಳಿದೆ. ನಿನಗೆ ಆಶಾಭಂಗವಾಗಿ ಸಿಟ್ಟು ಬಂದಿರಬೇಕು. ನಾನೇನು ಮಾಡಲಿ. ನಿನ್ನನ್ನು ಬಿಟ್ಟು ಕ್ಷಣಕಾಲ ನನ್ನಿಂದ ಇರಲು ಆಗುವುದಿಲ್ಲ. ನಿನ್ನನ್ನು ತಂದೆಯ ಮನೆಗೆ ಹೋಗೆಂದು ಹೇಗೆ ಹೇಳಲಿ?"

"ನನ್ನ ಸ್ಥಿತಿಯನ್ನು ನೀವು ತಿಳಿದಿದ್ದರೆ ಹೀಗೆನ್ನುತ್ತಿರಲಿಲ್ಲ."

"ನಿನ್ನ ಸ್ಥಿತಿ ಏನಾಗಿದೆ?"

ಲೀಲಾವತಿ ಕಪನೀಪತಿರಾಯರಿಗೆ ಸ್ಪಷ್ಟಪಡಿಸಿದಳು.

"ಯಾಕೆ ನಾನು ನಿನ್ನನ್ನು ಬೇಜಾರು ಪಡಿಸಿದೆನೆ?"

ಈ ಮಾತಿಗೆ ಲೀಲಾವತಿ ಉತ್ತರ ಹೇಳಲಿಲ್ಲ.

"ಇಲ್ಲ ಡಿಯರ್, ನನ್ನ ಒರಟುತನದಿಂದ ನಿನಗೆ ಹಿಂಸೆಯಾಗಿರಬಹುದು. ಇನ್ನು ಮೇಲೆ ನಾನು ಎಚ್ಚರದಿಂದ ವರ್ತಿಸುತ್ತೇನೆ."

ಡಾ. ಸುಮಿತ್ರೆ ಹೇಳಿದ್ದ ಮಾತು ಲೀಲಾವತಿಯ ನೆನಪಿಗೆ ಬಂತು. ಅವಳು ತನಗರಿಯದಂತೆ ಹೇಳಿದಳು.

"ಇಂದಿಗೆ ನಮ್ಮ ನಿಮ್ಮ ದೇಹದ ಸಲಿಗೆ ಸಾಕು ಇದುತನಕ ಬೆಳೆಸಿದ್ದೇ ಅತಿಯಾಯಿತು."

"ನಾನು ನಿನ್ನನ್ನು ಹೂವಿನಂತೆ ನೋಡಿಕೊಳ್ಳುತ್ತಿದ್ದರೂ ನನ್ನ ವರ್ತನೆ ಅತಿಯಾಯಿತೆ?"

"ಹೌದು. ಹೂವಿನ ಸುಗಂಧ ಸವಿಯುವ ಆತುರದಲ್ಲಿ ಹೂವನ್ನು ನಲುಗಿಸಿ ಸೊರಗಿಸಿ ಬಿಡುತ್ತೀರಿ." ಎಂದಳು ನಿಷ್ಠುರವಾಗಿ. ಈ ಮಾತು ಕೇಳಿ ಕಪನೀಪತಿರಾಯರು ಮಾತಿಲ್ಲದಾದರು.

ಕ್ಷಣಕಾಲ ಬಿಟ್ಟುಕೊಂಡು ಕೇಳಿದರು.

"ನನ್ನ ಮಾತು ನಿನಗೆ ಪೀಡನೆಯೆ?"

ಲೀಲಾವತಿ ಮಾತನಾಡಲಿಲ್ಲ.

"ನನ್ನ ಸ್ಪರ್ಶ ನಿನಗೆ ಪೀಡನೆಯೆ?"

ಲೀಲಾವತಿ ಇದಕ್ಕೂ ಮಾರು ನುಡಿಯಲಿಲ್ಲ.

"ನಿನಗೆ ಪೀಡನೆಯಾಗಿದ್ದರೆ ಹೇಳಿಬಿಡು! ಅದೂ ಸ್ಪಷ್ಟವಾಗಿ ನಿರ್ಧರವಾಗಿ ಬಿಡಲಿ....ನಾನು ನಿನ್ನನ್ನು ಮದುವೆಯಾದದ್ದು—ನಿನ್ನ ಜತೆಯಲ್ಲಿ ಸ್ನೇಹಿತರಂತೆ ಇರಬೇಕೆಂದಲ್ಲ; ಗಂಡ ಹೆಂಡಿರಾಗಿ ಬಾಳುವೆ ಮಾಡಲು. ತಿಳಿಯಿತೆ? ನಿನಗೆ ನನ್ನ ಮಾತು, ಸ್ಪರ್ಶ, ನೋಟಗಳು ಪೀಡನೆಯಾದರೆ—ಅದನ್ನು ಸೈರಿಸಿಕೊಳ್ಳಬೇಕು. ನೀನು ನನ್ನನ್ನು ಕೈಹಿಡಿದ ತಪ್ಪಿಗೆ ಸೈರಿಸಿ

ಕೊಳ್ಳಬೇಕು. ನನ್ನ ನಿನ್ನ ಸಂಬಂಧ ಜಗತ್ತೇ ತಿಳಿದಿರುವಂತೆ—ಗಂಡ ಹೆಂಡಿರ ಸಂಬಂಧ ತಿಳಿಯತೆ? ಇಷ್ಟೆಲ್ಲ ಹೇಳಿದ ಮೇಲೂ ನನ್ನ ನಡೆ ನುಡಿ ನಿನಗೆ ಪೀಡನೆಯಾಗಿದ್ದರೆ ಅದು ನಿನ್ನ ದೌರ್ಭಾಗ್ಯ."

ಈ ಮಾತಿಗೆ ಲೀಲಾವತಿ ಬೇಕೆಂದೇ ಉತ್ತರ ಹೇಳದೆ ಕುಳಿತಳು. ಅವಳಿಗೆ ಕಪನೀಪತಿಯವರೊಂದಿಗೆ ಮಾತನಾಡಲು ಹೇಸಿಗೆಯಾಗಿತ್ತು. ಬೇರೊಂದು ಹೊತ್ತಿನಲ್ಲಾಗಿದ್ದರೆ ಅಂತಹ ವಿಚಾರಗಳನ್ನು ಬಲವಾಗಿ ಟೀಕಿಸುತ್ತಿದ್ದಳೋ ಏನೋ. ಆದರೆ ಇಂದು ಅವಳು ಮಾತಿಲ್ಲದೆ ಮೌನ ಧರಿಸಿ ಕುಳಿತಿದ್ದಳು.

"ಯಾಕೆ ಹೀಗೆ ಮಾತಿಲ್ಲದೆ ಕುಳಿತೆ?"

"ನಿಮ್ಮೊಂದಿಗೆ ಏನು ಮಾತನಾಡಲಿ!"

"ವೇದಿಕೆಯ ಮೇಲೆ ಅಷ್ಟೆಲ್ಲ ಹರಟುವ ನಿನಗೆ ನನ್ನೊಡನೆ ಮಾತಿಲ್ಲವೆ?" ಲೀಲಾವತಿ ಮಾತನಾಡಲಿಲ್ಲ.

ಅವರು ಹೆಚ್ಚು ಕಾಲ ತಡಮಾಡದೆ ಲೀಲಾವತಿಯನ್ನು ಸಮೀ...

"ಯಾಕೆ ಲೀಲಾ, ನಿನಗೆ ಕೋಪ ಬಂತೆ?" ಎಂದು ಆರಂಭಿಸಿದ...

ಲೀಲಾವತಿ ಸುಮ್ಮನೆ ಕುಳಿತಿದ್ದಳು. ಇನ್ನು ಹೆಚ್ಚು ಕಾಲ ಮಾತಿನ... ಸಮಯ ಕಳೆಯಲು ಅವರಿಂದ ಆಗದೆ ಹೋಯಿತು.

"ಹೋಗಲಿ. ಈ ಎಲ್ಲ ಮಾತನ್ನೂ ನಾವು ಮರೆತುಬಿಡೋ... ಎಲ್ಲಿ ಒಂದು ಬಾರಿ ನೀನು ನಕ್ಕುಬಿಡು."

—ಎಂದರು. ಈ ಮಾತಿನ ಧಾಟಿ ಕೇಳಿ ಲೀಲಾವತಿಗೆ ನಗು ಬ... ಇರಲಿಲ್ಲ. ಅವಳಿಗೆ ಇಷ್ಟವಿಲ್ಲದಿದ್ದರೂ ನಗು ಪಕ್ಕನೆ ಬಂದುಬಿಟ್ಟಿ... ಕಪನೀಪತಿರಾಯರನ್ನು ಉತ್ತೇಜಿಸಲು ಇಷ್ಟೇ ಸಾಕಾಯಿತು. ಅವ... ಲೀಲಾವತಿಯ ಬೆನ್ನು ಸವರುತ್ತ ಕಣ್ಣಿನಲ್ಲಿ ಏನೋ ಆಸೆ ವ್ಯಕ್ತ... ಪಡಿಸಿದರು. ಆ ದೃಷ್ಟಿಯ ಬಯಕೆಯನ್ನು ಅರ್ಥಮಾಡಿಕೊಂ... ಲೀಲಾವತಿ ಏನು ಮಾಡಲೂ ತೋಚದೆ ಸುಮ್ಮನಿದ್ದಳು. "ಇಲ್ಲ... ಸಲ್ಲದ ವಿಷಯಗಳಿಂದ ನೀನು ತಲೆಕೆಡಿಸಿಕೊಂಡು, ನೀನೂ ಅಸುಖಿಯಾ... ರುವೆ; ಇನ್ನೊಬ್ಬರನ್ನೂ ಅಸುಖಿಯಾಗುವಂತೆ ಮಾಡುತ್ತಿರುವೆ" ಎಂ...

ವನೇ ಕಪನೀಪತಿರಾಯರು ಲೀಲಾವತಿಯನ್ನು ತೋಳ್ಬಂದಿಯಾಗಿ ಮಾಡಿಕೊಂಡರು. ಹಠಾತ್ತನೆ ನಡೆದ ಈ ಕೆಲಸದಿಂದ ಲೀಲಾವತಿಗೆ ರೋಷ ಉಕ್ಕಿತು. ಅವಳ ಕೋಪ ನೆತ್ತಿಗೇರಿ ಚೀರಿದಳು—"ನನ್ನನ್ನು ಬಿಟ್ಟು ದೂರ ಸರಿಯಿರಿ!" ಎಂದು ಗರ್ಜಿಸಿದಳು.

"ಸರಿಯುವುದಿಲ್ಲ—ಏನು ಮಾಡುತ್ತಿ?"

"ನೀವೇನು ಮಾಡಿದರೂ ಇಂದು ನಾನು ನಿಮ್ಮ ವಶಳಾಗಲಾರೆ ಖಂಡಿತ."

"ಹಾಗಾದರೆ ನಿನ್ನ ಸೊಕ್ಕು ಎಷ್ಟಿದೆಯೋ ನೋಡಿಯೇಬಿಡುತ್ತೇನೆ" ಎಂದವರೇ ಲೀಲಾವತಿಯನ್ನು ಎತ್ತಿಕೊಂಡು ಹೊರಟರು. ಲೀಲಾವತಿ ಬೆಕ್ಕಿನ ಕೈಗೆ ಸಿಕ್ಕಿಬಿದ್ದ ಇಲಿಯಂತೆ ಮಿಲಮಿಲನೆ ಒದ್ದಾಡಿದಳು. ಅವರ ಬಿಗಿಮುಷ್ಟಿಯಿಂದ ತಪ್ಪಿಸಿಕೊಳ್ಳಲು ಅವಳಿಂದ ಸಾಧ್ಯವಾಗಲಿಲ್ಲ. ಅವಳಿಗೆ ಅದೇನನ್ನಿಸಿತೋ ಕಪನೀಪತಿರಾಯರ ಕೈಯನ್ನು ಕಚ್ಚಿಬಿಟ್ಟಳು. ಆ ನೋವನ್ನು ಸಹಿಸಲಾರದೆ, ಕಪನೀಪತಿರಾಯರು ಲೀಲಾವತಿಯನ್ನು ಎತ್ತಿ ಮಂಚದ ಮೇಲೆ, ಮೂಟೆ ಕುಕ್ಕುವಂತೆ ಕುಕ್ಕಿದರು. ಬಿದ್ದ ಆ ಪೆಟ್ಟಿಗೆ ಲೀಲಾವತಿಯ ಮೈ ಮೂಳೆಗಳು ಪುಡಿಪುಡಿಯಾದಂತೆ ಭಾಸವಾಯಿತು. ಅವಳು ಚೀತ್ಕಾರ ಮಾಡಿದಳು. ಕಪನೀಪತಿರಾಯರಿಗೆ ಲೀಲಾವತಿ ತಮ್ಮನ್ನು ರಕ್ತ ಬರುವಂತೆ ಕಚ್ಚಿಬಿಟ್ಟಳಲ್ಲ ಎಂದು ಸಹಿಸಲಸಾಧ್ಯವಾದ ಕೆಟ್ಟ ಕೋಪ ಬಂದಿತು. ಅವರು ಲೀಲಾವತಿಯ ಸೊಕ್ಕನ್ನು ಮುರಿಯಲೇಬೇಕೆಂದು ನಿರ್ಧರಿಸಿದ್ದರು. ಅವರು ಲೀಲಾವತಿಯ ದೇಹಕ್ಕಾದ ನೋವನ್ನು ಗಣನೆಗೆ ತರದೆ, ಅವಳ ಮೇಲೆ ಬಿದ್ದರು. ಸ್ವಪ್ನಾವಸ್ಥೆಯಲ್ಲಿದ್ದ ಲೀಲಾವತಿ ಕಪನೀಪತಿರಾಯರ ಕೈಯಿಂದ ಪಾರಾಗಲು ಹೆಣಗಿದಳು. ಈ ಹೆಣಗಾಟದಲ್ಲಿ ಮಂಚದ ಮೇಲೆ ಹೊರಳಿ ಹೊರಳಿ ಕಡೆಗೆ ಮಂಚದ ತುದಿಯಿಂದ ಆಕಸ್ಮಿಕವಾಗಿ ಜಾರಿ ನೆಲಕ್ಕೆ ದೊಪ್ಪನೆ ಬಿದ್ದಳು. ನೆಲಕ್ಕೆ ಬೀಳುವ ಗಾಬರಿಯಲ್ಲಿ ಲೀಲಾವತಿ ಅಂಗತಳಾಗಿ ಬಿದ್ದು, ಅವಳ ಹೊಟ್ಟೆಯ ಭಾಗ ನೆಲಕ್ಕೆ ಬಡಿದು ಅವಳಿಗೆ ಮರ್ಮಭೇದಕವಾದ ನೋವುಂಟು ಮಾಡಿತು. ಅವಳು ಅಯ್ಯೋ ಎಂದು ಕೆಟ್ಟಧ್ವನಿಯಲ್ಲಿ ಚೀರಿದಳು. ಕ್ಷಣಕಾಲ ಅವಳ ದೇಹವನ್ನು ಸಹಸ್ರಾರು

ಹಾವು ಚೇಳುಗಳು ಒಮ್ಮೆಲೇ ಕಡಿದಂತೆ ಅನುಭವವಾಯಿತು. ಹೊಟ್ಟೆಯಲ್ಲಿನ ಭಾಗಗಳನ್ನು ಯಾರೋ ತಿರಿಚಿದಂತೆ ಆಯಿತು. ಅವರು ಪಶುವಿನಂತೆ ಲೀಲಾವತಿಯ ಮೇಲೆ ಬಿದ್ದರು. ಲೀಲಾವತಿ ತಮ್ಮ ಹಿಡಿತದಿಂದ ಜಾರಿಕೊಳ್ಳಲು ಇಷ್ಟೆಲ್ಲ ನೋವಿನ ಆಟ ಹೂಡಿರುವಳೆಂದು ಅವರು ತಿಳಿದಿದ್ದರಿಂದಲೇ ಲೀಲಾವತಿ ಸಂಕಟಪಡುತ್ತಿದ್ದರೆ ಮರುಕಗೊಳ್ಳಲಿಲ್ಲ. ಕಾಮತೃಪ್ತಿಯ ಅಗ್ನಿಕುಂಡದಲ್ಲಿ ಅವರ ಮಾನವತೆಯ ಎಲ್ಲ ಭಾವನೆಗಳೂ ಸುಟ್ಟು ಭಸ್ಮವಾಗಿದ್ದುವು. ಲೀಲಾವತಿ "ಆಯ್ಯೋ" ಎಂದು ಚೀರಿದಳು. ಮರುಗಳಿಗೆಯಲ್ಲಿ ನಿಶ್ಚೇಷ್ಟಿತಳಾಗಿ ಬಿದ್ದಳು.

ಕೆಳಗೆ ಕೆಲಸಮಾಡುತ್ತಿದ್ದ ಅಡಿಗೆಯವಳು ಲೀಲಾವತಿಯ ಕೂಗಿನಿಂದ ಗಾಬರಿಗೊಂಡು ಓಡಿ ಬಂದಳು. ಕ್ಷಣಕಾಲದಲ್ಲಿ ನಡೆದಿರಬಹುದಾದ ಅತ್ಯಾಚಾರವನ್ನು ಊಹಿಸಿ, ಕೆಳಕ್ಕೆ ಓಡಿಹೋಗಿ ಬಿಸಿನೀರಿನ ಬೇಸಿನ್ನನ್ನು ತಂದು, ಲೀಲಾವತಿಯ ದೇಹಕ್ಕೆಲ್ಲ ಬಿಸಿನೀರಿನ ಕಾವುಟ ಕೊಟ್ಟಳು. ಆದರೆ ಅವಳಿಗೆ ಹೋದ ಪ್ರಜ್ಞೆ ಮತ್ತೆ ಬರಲಿಲ್ಲ. ತಾವು ಮಾಡುವ ಶುಶ್ರೂಷೆಯಿಂದ ಲೀಲಾವತಿ ಉಳಿಯುವುದಿಲ್ಲವೆಂದು, ಕೂಡಲೆ ಅವಳು ಸ್ತ್ರೀಸಹಜ ಅನುಕಂಪದಿಂದ ಕಪನೀಪತಿರಾಯರನ್ನು ಆಸ್ಪತ್ರೆಗೆ ಫೋನ್ ಮಾಡಲು ಹೇಳಿದಳು. ಈ ಮಾತನ್ನು ಕಪನೀಪತಿರಾಯರು ಲಕ್ಷಿಸಲಿಲ್ಲ. ಆಗ ಆ ಅಡಿಗೆಯವಳೇ ಪಕ್ಕದ ಮನೆಗೆ ಓಡಿ ಅಲ್ಲಿಂದ ಚೆಲುವಾಂಬಾ ಹೆರಿಗೆ ಆಸ್ಪತ್ರೆಗೆ ಫೋನ್ ಮಾಡಿ, ಕೂಡಲೇ ಆಂಬ್ಯುಲೆನ್ಸ್ ಕಾರ್ ತರಿಸಿ, ಲೀಲಾವತಿಯನ್ನು ಆಸ್ಪತ್ರೆಗೆ ಸಾಗಿಸಿದಳು. ಇದುತನಕ ಮಂಕುಬಡಿದಂತೆ ಇದ್ದ ಕಪನೀಪತಿರಾಯರಿಗೆ ತಾವು ನಡಸಿದ ಅತ್ಯಾಚಾರದ ಕಲ್ಪನೆಯಾಗಿ ಒಂದು ಬಗೆಯ ಹೆದರಿಕೆ, ಕಳವಳವಾಗಲಾರಂಭಿಸಿತು. ಅವರು ಆಂಬ್ಯುಲೆನ್ಸ್ ಕಾರಿನಲ್ಲೇ ಆಸ್ಪತ್ರೆಗೆ ಹೊರಟರು.

ಲೀಲಾವತಿಗೆ ಆಸ್ಪತ್ರೆಗೆ ದಾಖಲಾದ ಎಷ್ಟೋ ಹೊತ್ತಿನ ಮೇಲೆ ಪ್ರಜ್ಞೆ ಬಂದದ್ದು. ಅವಳು ಮೊದಲು ತನ್ನ ತಂದೆಯನ್ನು ನೆನೆಸಿಕೊಂಡು ಹಂಬಲಿಸಿದಳು. ಆಗಲೇ ಕಪನೀಪತಿರಾಯರಿಗೆ ವಿಶ್ವನಾಥರಾಯರ ನೆನಪು! ಅವರು ವಿಶ್ವನಾಥರಾಯರಿಗೆ ಸುದ್ದಿ ಕೊಟ್ಟರು. ವಿಶ್ವನಾಥ

ರಾಯರು, ಸುಮಿತ್ರೆ ಸದಾಶಿವರು ಗಾಬರಿಯಾಗಿ ಒಂದೇ ಉಸಿರಿನಲ್ಲಿ ಓಡಿಬಂದರು.

ಆ ವೇಳೆಗಾಗಲೇ ಲೀಲಾವತಿಗೆ ಸಂಪೂರ್ಣ ಪ್ರಜ್ಞೆ ಬಂದಿತ್ತು. ಅವಳಿಗೆ ಮಾತಿಗೆ ನಿಲುಕದ ವೇದನೆಯುಂಟಾಗಿತ್ತು. ಅವಳ ಹೊಟ್ಟೆಗೆ ಬಲವಾದ ಪೆಟ್ಟುಬಿದ್ದಿದ್ದುದರಿಂದ ಆ ನೋವನ್ನು ಸಹಿಸಲಾರದೆ ಹುಚ್ಚಿಯಂತೆ ಕೂಗಿಕೊಳ್ಳುತ್ತಿದ್ದಳು. ಅವಳಿಗೆ ತನ್ನ ಹೊಟ್ಟೆಯಲ್ಲಿ ಯಾರೋ ತಿರುವುತ್ತಿರುವಂತೆ ತೋರಿತು. ತಾನು ಬದುಕಿರುವಂತೆ, ತನ್ನ ಮಾಂಸಖಂಡಗಳನ್ನು ನಾಯಿ ನರಿಗಳು ಕಿತ್ತು ತಿನ್ನುತ್ತಿರುವಂತೆ ಅನ್ನಿಸಿತು. ಅವಳು ಚೀರುತ್ತಿದ್ದಳು. ಕೆಟ್ಟ ಧ್ವನಿಯಲ್ಲಿ ವಿಕಾರವಾಗಿ ಕೂಗಿಕೊಳ್ಳುತ್ತಿದ್ದಳು. ಅವಳಿಗೆ ಈಗ ಹೆರಿಗೆಯ ನೋವು ಪ್ರಾರಂಭವಾಗಿತ್ತು.

ಲೀಲಾವತಿ ಮಂಚದ ಮೇಲಿಂದ ಅಂಗತಳಾಗಿ ಬಿದ್ದುದರಿಂದ ಅವಳ ಹೊಟ್ಟೆಗೆ ಬಲವಾದ ಪೆಟ್ಟು ಬಿದ್ದು ಒಳಗೆ ಇದ್ದ ಮಗುವಿಗೂ ಬಲವಾದ ಪೆಟ್ಟು ಬಿದ್ದಿತ್ತು. ಅದು ಸ್ಥಳಾಂತರಿಸಿ ಬಿಟ್ಟು ಮರ್ಮಭೇದಕವಾದ ನೋವಿಗೆ ಕಾರಣವಾಗಿತ್ತು. ಆದುದರಿಂದಲೇ ಲೀಲಾವತಿ ಹಾಗೆ ಚೀರುತ್ತಿದ್ದುದು.

ಮಗಳ ಚೀರಾಟ ಕೇಳಿ ವಿಶ್ವನಾಥರಾಯರಿಗೆ ಪ್ರಜ್ಞೆ ತಪ್ಪುವಂತೆಯಾಯಿತು. ಒಂದು ದಿನವಾದರೂ ಕಷ್ಟವೆಂದರೇನೆಂದು ತಿಳಿಯದೆ ಇದ್ದ ಲೀಲಾವತಿಗೆ ಎಂತಹ ಕಷ್ಟ ಪ್ರಾಪ್ತವಾಗಿತ್ತು! ಅವರಿಗೆ ಆ ದೃಶ್ಯ ನೋಡಲಾಗದೆ, ಕಣ್ಣಿಗೆ ಕತ್ತಲೆ ಕವಿದು ಬಂದು, ಅಲ್ಲೇ ಕುಸಿದು ಕುಳಿತರು. ಸುಮಿತ್ರೆ ಸದಾಶಿವರು ಜತೆಯಲ್ಲಿ ಇದ್ದುದರಿಂದ ಅವರು ವಿಶ್ವನಾಥರಾಯರನ್ನು ಬಲವಂತವಾಗಿ ಅಲ್ಲಿಂದ ಕರೆದೊಯ್ದು ಬೇರೆಡೆಯಲ್ಲಿ ಕುಳ್ಳಿರಿಸಿದರು.

ಇತ್ತ ಕ್ಷಣಕ್ಷಣಕ್ಕೆ ಲೀಲಾವತಿಯ ಪರಿಸ್ಥಿತಿ ಹದಗೆಡುತ್ತಲೇ ಹೋಗಿತ್ತು. ಡಾಕ್ಟರಿಗೆ ಲೀಲಾವತಿಯ ನೋವು ಕಡಿಮೆಮಾಡುವ ದಾರಿಯೇನೆಂದು ತಿಳಿಯದಾಯಿತು. ಅವರಲ್ಲಿ ಅನೇಕರು ಲೀಲಾವತಿಯ ಹೊಟ್ಟೆಯಲ್ಲಿದ್ದ ಮಗುವನ್ನು ಬಲವಂತವಾಗಿ ಆಪರೇಟ್ ಮಾಡಿ ತೆಗೆಯಬೇಕೆಂಬ ಅಭಿಪ್ರಾಯಪಟ್ಟರು. ಇದಕ್ಕೆ ವಿಶ್ವನಾಥರಾಯರು ನಿರ್ವಾಹವಿಲ್ಲದೆ ಒಪ್ಪ

ಬೇಕಾಯಿತು. ಈ ಆಪರೇಷನ್‌ನಲ್ಲಿ ಲೀಲಾವತಿ ಉಳಿದುಕೊಂಡರೆ ಅವಳು ಉಳಿದುಕೊಂಡಂತೆ. ಇಲ್ಲದೆ ಹೋದರೆ...........

ವಿಶ್ವನಾಥರಾಯರು ದೈವಚಿತ್ತವಿದ್ದಂತೆ ನಡೆಯಲೆಂದು ಆಪರೇಷನ್‌ಗೆ ಅನುಮತಿಸಿದರು.

ಡಾಕ್ಟರುಗಳು ಲೀಲಾವತಿಯನ್ನು ಆಪರೇಷನ್ ವಾರ್ಡಿಗೆ ಕರೆದೊಯ್ದು ತಮ್ಮ ಜಾಗ್ರತೆಯನ್ನೆಲ್ಲ ವೆಚ್ಚಮಾಡಿ, ಹೊಟ್ಟೆಯನ್ನು ಆಪರೇಟ್ ಮಾಡಿ, ಮಗುವನ್ನು ಹೊರಗೆ ತೆಗೆದರು. ಮಗುವೇನೋ ಹೊಟ್ಟೆಯಲ್ಲಿ ಸತ್ತು ಹೋಗಿತ್ತು, ಲೀಲಾವತಿ ಬಿದ್ದ ಪೆಟ್ಟಿಗೆ ಅದು ಜಜ್ಜಿ ಹೋಗಿತ್ತು. ಆಪರೇಷನ್ ಆದ ಮೇಲೆ ಲೀಲಾವತಿ ಉಳಿದುಕೊಳ್ಳುವಳೋ ಇಲ್ಲವೋ ಎನ್ನುವ ವಿಷಯವಂತೂ ಡಾಕ್ಟರುಗಳಿಗೆ ಅನುಮಾನವಾಯಿತು. ಅವರು ತಮ್ಮ ಪ್ರಯತ್ನ ಮೀರಿತೆಂದೂ ಲೀಲಾವತಿ ಉಳಿದುಕೊಳ್ಳುವುದೂ ಬಿಡುವುದೂ ದೈವೇಚ್ಛೆ ಎಂದೂ ದೈವದ ಮೇಲೆ ಭಾರ ಹಾಕಿದರು. ಒಳಗಿರುವ ಪ್ರಾಣಪಕ್ಷಿ ಯಾವ ರಂಧ್ರದಲ್ಲಿ ನುಸುಳಿಕೊಂಡು ಹೋಗಿಬಿಡುವುದೋ....

ಬೆಳಗಿನ ಜಾವದ ವೇಳೆಗೆ ಲೀಲಾವತಿ ಪ್ರಜ್ಞೆ ಬಂದಿದ್ದು ತಮ್ಮ ಬಳಿ ಇರುವ ವ್ಯಕ್ತಿಗಳು ಯಾರುಯಾರೆಂದು ಗುರುತು ಹಿಡಿಯುವಷ್ಟು ತಿಳಿವಳಿಕೆಯುಂಟಾಗಿತ್ತು. ಆದರೆ ಅವಳ ಕಣ್ಣಿನ ನೋಟ ಮಂಜಾಗುತ್ತ ಬಂದಿತ್ತು, ಕಿವಿ ಮಂದವಾಗುತ್ತ ನಡೆದಿತ್ತು. ಅವಳ ಉಚ್ಛ್ವಾಸ ನಿಶ್ವಾಸಗಳು ಕುಗ್ಗಲು ಆರಂಭಿಸಿತ್ತು. ದೇಹದಲ್ಲಿ ಹಬೆ ಹೊರಡುವಷ್ಟು ಜ್ವರ ಕಾದಿತ್ತು. ಆದರೂ ಲೀಲಾವತಿ ಮೊದಲಿನಂತೆ ನರಳುತ್ತಿರಲಿಲ್ಲ. ಅವಳು ಆಗೊಮ್ಮೆ ಈಗೊಮ್ಮೆ ಕಣ್ಣು ಬಿಟ್ಟು ನೋಡಿ ಮತ್ತೆ ಕಣ್ಣು ಮುಚ್ಚುತ್ತಿದ್ದಳು. ಅವಳ ಹಾಸಿಗೆಯ ಬಳಿ ಅವಳಿಗೆ ಬೇಕಾದ ವ್ಯಕ್ತಿಗಳೆಲ್ಲ ಸೇರಿದ್ದರು. ಏಕೋ ಏನೋ ಆ ಗುಂಪಿನಲ್ಲಿ ಕಮಲಾಪತಿರಾಯರು ಮಾತ್ರ ಇರಲಿಲ್ಲ.

ಲೀಲಾವತಿಗೆ ಇನ್ನು ತಾನು ಉಳಿಯುವುದಿಲ್ಲವೆಂದು ಹೇಗೋ ಅನಿಸಿಬಿಟ್ಟಿತ್ತು. ಅವಳು ಗುಂಪಿನಲ್ಲಿದ್ದ ತನ್ನ ತಂದೆಯನ್ನು ಬಳಿಗೆ ಬರಮಾಡಿಕೊಂಡು, ಏನೋ ಹೇಳಲು ನೋಡಿ, ಸಾಧ್ಯವಾಗದೆ ತುಟಿಗಳನ್ನು ಅಲುಗಿಸಿದಳು. ಅನಂತರ ಸುಮಿತ್ರೆ ಸದಾಶಿವನನ್ನು ಕರುಣಾರ್ದ್ರವಾಗಿ ನೋಡಿ

ಳು. ತನ್ನನಂತರ ತನ್ನ ತಂದೆಯವರನ್ನು ನೋಡಿಕೊಳ್ಳುವ ಜವಾಬ್ದಾರಿ ನಮ್ಮದು ಎಂದು ಹೇಳುವಂತಿತ್ತು ಆ ನೋಟ. ಅವಳಿಗೆ ಆ ಗಳಿಗೆಯಲ್ಲಿ ಂಡನ ಚಿಂತೆಯಾಗಲಿಲ್ಲ, ಅವಳ ಭಾಗಕ್ಕೆ ಸರ್ವಸ್ವವಾಗಿದ್ದ ವಿಶ್ವನಾಥ ಾಯರ ಚಿಂತೆಯೇ ಆಗಿತ್ತು.

ಲೀಲಾವತಿ ಇನ್ನು ಹೆಚ್ಚು ಕಾಲ ಉಳಿಯುವುದಿಲ್ಲವೆಂದು ಎಲ್ಲರಿಗೂ ನದಟ್ಟಾಯಿತು. ಅವಳು ತಂದೆಯ ಕೈಯನ್ನು ತನ್ನ ಕೈಯಲ್ಲಿ ತೆಗೆದು ಂಡು ಹನಿಗೂಡಿದ ಕಣ್ಣಿಗೆ ಒತ್ತಿಕೊಂಡಳು. ಇದಾದ ಮೇಲೆ ಅವಳ ುಖದಲ್ಲಿ ಹಿಂದೆಂದೂ ಇಲ್ಲದಿದ್ದ ತೃಪ್ತಿಶಾಂತಿಗಳು ಉಂಟಾದುವು. ಅವಳ ಣ್ಣುಗಳು ಆರುವ ಮುನ್ನ ಜಾಜ್ವಲ್ಯ ಮಾನವಾಗಿ ಬೆಳಗುವ ಸೊಡರಿನಂತೆ ಳಗಿದುವು.

ಲೀಲಾವತಿ ಮತ್ತೊಮ್ಮೆ ತನ್ನ ಸುತ್ತ ನೆರೆದಿದ್ದ ಎಲ್ಲರನ್ನೂ ಕಣ್ಣು ಂಬಾ ನೋಡಿದಳು. ಹಾಗೆ ನೋಡುತ್ತ ನೋಡುತ್ತ ಅವಳ ಕಣ್ಣು ಣ್ಣೀರಿನಿಂದ ಮಂಜಾಯಿತು. ಅವುಗಳನ್ನು ಒರೆಸಿಕೊಳ್ಳುವ ಶಕ್ತಿ ಇಲ್ಲದೆ ಾಗೇ ಕಣ್ಣು ಮುಚ್ಚಿದಳು. ಇನ್ನೆಲ್ಲಿ ಒಂದೆರಡು ಕ್ಷಣ. ಲೀಲಾವತಿಯು ಉಸಿರು ಬಿಡಲು ಆರಂಭಿಸಿದ್ದಳು. ನೋಡನೋಡುತ್ತಿದ್ದಂತೆ ಾಯ ಕೈಯನ್ನು ಹಿಡಿದಿದ್ದ ಲೀಲಾವತಿಯ ಕೈ ಶೀತಲವಾಗುತ್ತ ನಡೆ ು. ಅವಳ ಕಣ್ಣಿನಿಂದ ಹೊರಟ ಒಂದೆರಡು ಅಶ್ರುಬಿಂದುಗಳು ಆಣಿ ತ್ತಿನಂತೆ ಬೆಳಕಿನ ಪ್ರಭೆಯಲ್ಲಿ ಥಳಥಳಿಸಿದುವು. ಮರುಕ್ಷಣದಲ್ಲಿ ಅವು ಣ್ಣಾಲಿಗಳಿಂದ ಹರಿದು ಹೋಗಿ ಮಾಯವಾದುವು. ಆಗಲೇ ಲೀಲಾವತಿ ರನ್ನು ಅಗಲಿದಳೆಂದು ಅವರಾರಿಗೂ ತಿಳಿಯದೆ ಹೋಯಿತು. ಲೀಲಾ ಯ ಕೈ ಮಂಜಿನಂತೆ ಶೀತಲವಾದಾಗಲೇ ಅವಳು ತಮ್ಮನ್ನು ಬಿಟ್ಟು ದಳೆಂಬ ಅರಿವು ವಿಶ್ವನಾಥರಾಯರಿಗೆ. ಅವರು "ಲೀಲಾ!......" ು ಚೀರಿದರು. ಆದರೆ ಅವರ ಲೀಲಾವತಿ ಇಹಲೋಕದ ಲೀಲೆಯನ್ನು ಸಿ ಎಂದೋ ಪರಲೋಕಕ್ಕೆ ನಡೆದುಬಿಟ್ಟಿದ್ದಳು.

ವಿಶ್ವನಾಥರಾಯರೇ ನಿಂತು ಮಗಳ ಅಂತಿಮಕ್ರಿಯೆಗಳನ್ನು ಸಾಂಗ ನೇರವೇರಿಸಿದರು. ಅವರು ಅಳಲಿಲ್ಲ, ಮಗಳ ಮರಣಕ್ಕಾಗಿ ಗೋಳಿ

ಡಲಿಲ್ಲ. ಬಿಸುಸುಯ್ಯಲಿಲ್ಲ. ಅವರ ಹೃದಯದಲ್ಲಿ ದುಃಖದ ಒರತೆ ಬತ್ತಿ ಹೋಗಿತ್ತು. ಅದು ಪಾಷಾಣನಾಗಿತ್ತು.

ಮಗಳನ್ನು ಸುಟ್ಟು ಬಂದು, ಅವಳ ಅಸ್ಥಿಗಳನ್ನು ಪಶ್ಚಿಮವಾಹಿನಿಯಲ್ಲಿ ಕದಡಿ ಗಾಢವಾದ ನಿಟ್ಟುಸಿರುಬಿಟ್ಟರು. ಅಲ್ಲಿಗೆ ತಾವೂ ತಮ್ಮ ಇಹ ಜೀವನದಿಂದ ಕೈ ತೊಳೆಯುತ್ತಿರುವಂತೆ ಭಾಸವಾಯಿತು. ಅವರು ಊರಿಗೆ ಬಂದವರೇ ಸುಮಿತ್ರೆ ಸದಾಶಿವರ ಜತೆಯಲ್ಲಿ ಬಹಳ ಹೊತ್ತು ಮಾತನಾಡುತ್ತಿದ್ದು, ತಮ್ಮ ಕಡೆಯಾಸೆಗಳನ್ನು ಅವರಿಗೆ ತಿಳಿಸಿ, ಭಾರವಾದ ಹೃದಯ ಹೊತ್ತು ತಮ್ಮ ಕೋಣೆಗೆ ಬಂದು ಅಲ್ಲಿದ್ದ ಈಸಿಛೇರಿನ ಮೇಲೆ ವಿಶ್ರಮಿಸಿಕೊಳ್ಳುವವರಂತೆ ಮಲಗಿದರು. ಆದರೆ ಅದೇ ಅವರ ಕಡೆಯ ವಿಶ್ರಾಂತಿಯಾಯಿತು. ಮಲಗಿದವರು ಮತ್ತೆ ಏಳಲಿಲ್ಲ. ಅವರು ಮಗಳನ್ನು ಸೇರಲು ನಡೆದುಬಿಟ್ಟಿದ್ದರು.

ಬೆಳಗಾಗೆದ್ದು ವಿಶ್ವನಾಥರಾಯರನ್ನು ವಿಚಾರಿಸಿಕೊಳ್ಳುವ ಸಲುವಾಗಿ ಸುಮಿತ್ರೆ ಸದಾಶಿವರು ಅವರ ಕೋಣೆಗೆ ಬಂದರು. ವಿಶ್ವನಾಥರಾಯರು ಮಲಗಡೆ ವಿಶ್ರಾಂತಿ ತೆಗೆದುಕೊಳ್ಳುತ್ತಿರುವಂತೆ ಕಂಡಿತು. ಸುಮಿತ್ರೆಗೆ ಯಾಕೋ ಅನುಮಾನವಾಗಿ ಓಡಿಬಂದು ಅವರ ಭುಜವನ್ನು ಅಲುಗಿಸಿದಳು. ಅದರಲ್ಲಿ ಇದ್ದ ಪ್ರಾಣಪಕ್ಷಿ ಎಂದೋ ತನ್ನ ಗೂಡುಬಿಟ್ಟು ಹೊರಟು ಹೋಗಿತ್ತು. ಆಗ ಸುಮಿತ್ರೆಗೆ ಬೈಬಲ್ ವಾಕ್ಯವೊಂದರ ನೆನಪಾಗಿ "ಈವನ್ ಇನ್ ದೇರ್ ಡೆತ್ ದೆ ವರ್ ನಾಟ್ ಡಿವೈಡೆಡ್" (ಸಾವಿನಲ್ಲಿ ಕೂಡ ಅವರು ಬೇರ್ಪಡಲಿಲ್ಲ) ಎಂದು ಗಂಡನ ಕಿವಿಯಲ್ಲಿ ಉಸಿರಿದಳು.

ಸದಾಶಿವ "ಆಮೆನ್" (ತಥಾಸ್ತು) ಎಂದು.

# ಪ್ರಕಟನೆಗಳು

## ಪ್ರಕಟವಾಗಿವೆ

ಕೀ[illegible]ಯ ಕುಯಿಲು (ಎರಡನೆಯ ಮುದ್ರಣ) — ತ. ರಾ. ಸು.
*ಜೀವನದಿ — ಅ. ನ. ಕೃ.
*ಓದಿದ ಹುಡುಗಿ — ನರೇಂದ್ರಬಾಬು
*ಬನಶಂಕರಿ — ನಿರಂಜನ
ಮುತ್ತೈದೆ — ಕೃಷ್ಣಮೂರ್ತಿ ಪುರಾಣಿಕ
ಹಿಂದಿರುಗಿ ಬರಲಿಲ್ಲ — ಕೋ. ಚೆನ್ನಬಸಪ್ಪ
ಗೃಹಲಕ್ಷ್ಮಿ (ಎರಡನೆಯ ಮುದ್ರಣ) — ಅ. ನ. ಕೃ.
ತಿರುಗುಬಾಣ — ತ. ರಾ. ಸು.
ರಕ್ತರಾತ್ರಿ (ಎರಡನೆಯ ಮುದ್ರಣ) — ತ. ರಾ. ಸು.
ಮಿಸ್ ಲೀಲಾವತಿ — ಶ್ರೀನಿವಾಸರಾವ್ ಕೊರಟಿ

## ಅಚ್ಚಿನಲ್ಲಿ

ಚಿನ್ನದ ಬೆಲೆ — ಕೃಷ್ಣಮೂರ್ತಿ ಪುರಾಣಿಕ

## ಬರಲಿವೆ

ಸೌಭಾಗ್ಯ — ನಿರಂಜನ
ಅಪರಾಜಿತೆ — ಅ. ನ. ಕೃ.
ಹಾವಾಡಿಗ — ನರೇಂದ್ರಬಾಬು
ಜನ್ಮಾಂತರ — ದೇವುಡು
ಕೆಂಪು ಬಂಗಾರ — ನಿರಂಜನ
ಜನಮೇಜಯ — ನಾ. ಕಸ್ತೂರಿ
ವೀರವಧೆ — ವೀರಕೇಸರಿ
ಪುನರ್ಮಿಲನ — ರಾ. ವೆಂ. ಶ್ರೀನಿವಾಸ
ಸೋತ ಬದುಕು — ಎಸ್. ಅನಂತನಾರಾಯಣ
ಭಾರತೀಯ ದರ್ಶನಗಳು — ಎಂ. ಯಾಮುನಾಚಾರ್ಯ
ಕನ್ನಡ ಸಾಹಿತ್ಯ ಚರಿತ್ರೆಯ ಕೈಪಿಡಿ — ಎಸ್. ವಿ. ಪರಮೇಶ್ವರಭಟ್ಟ
ಇಂಗ್ಲಿಷ್-ಕನ್ನಡ ನಿಘಂಟು
ಕನ್ನಡ-ಇಂಗ್ಲಿಷ್-ಕನ್ನಡ ನಿಘಂಟು

*ಪ್ರತಿಗಳು ಮುಗಿದಿವೆ.



ಶ್ರೀನಿವಾಸರಾವ್ ಕೊರಟಿ

ಕನ್ನಡಿಗರಿಗೆ ಈಗಾಗಲೇ ಪರಿಚಿತರಾಗಿರುವ ಶ್ರೀ ಶ್ರೀನಿವಾಸ ರಾವ್ ಕೊರಟಿ ಅವರು ಹೊಸಕೋಟೆ ತಾಲ್ಲೂಕಿನ ಕೊರಟಿಯಲ್ಲಿ [illegible]ಲ್ಲಿ ಜನಿಸಿದರು.

ಈಗಾಗಲೇ ಶ್ರೀಯುತರ "ತೂರಿ ಬಂದ ತಾರೆ," "ಚೈತ್ರ ಯಾತ್ರೆ," "ಕಣ್ಣೀರಿನ ಕಡಲು"—ಕಾದಂಬರಿಗಳು ಪ್ರಕಟವಾಗಿವೆ; ಓದುಗರ ಮೆಚ್ಚುಗೆಯನ್ನು ಪಡೆದಿವೆ.

ನವನಾಗರಿಕತೆಯ ಪ್ರಭಾವಕ್ಕೆ ಒಳಗಾದ ಮಧ್ಯಮ ದರ್ಜೆಯ ಮಹಿಳಾ ಜೀವನವನ್ನು ಜೀವಂತವಾಗಿ, ರಸವತ್ತಾಗಿ, ಸ್ವಾರಸ್ಯವಾಗಿ ಚಿತ್ರಿಸುವ ಶಕ್ತಿ ಇವರ ಲೇಖನಿಗೆ ದೈವದತ್ತವಾಗಿದೆ.

ಶ್ರೀ ಕೊರಟಿಯವರಿಂದ ಇನ್ನೂ ಅನೇಕ ಉತ್ತಮ ಕೃತಿಗಳನ್ನು ನಿರೀಕ್ಷಿಸಬಹುದು.